



# ಹದಿಹರೆಯದವರ ಆರೋಗ್ಯ

## ಹದಿಹರೆಯದವರನ್ನು ಜವಾಬ್ದಾರಿಯುತ ಪ್ರಜೆಗಳನ್ನಾಗಿ ಬೆಳೆಸುವುದೇ ನಮ್ಮ ಗುರಿ



**10–19 ವಯಸ್ಸಿನಲ್ಲಿರುವವರೇ ಹದಿಹರೆಯದವರು.**

**ಈ ವಯಸ್ಸಿನಲ್ಲಿ ದೈಹಿಕ, ಮಾನಸಿಕ ಮತ್ತು ನಡವಳಿಕೆಯ ಬದಲಾವಣೆಗಳಾಗುತ್ತವೆ.**

**ಈ ಬದಲಾವಣೆಗಳಿಗಾಗಿ ಅವರುಗಳಿಗೆ ಸರಿಯಾದ ಮಾಹಿತಿ ಅಗತ್ಯವಿದೆ.**

**ಈ ಮಾಹಿತಿಗಳ ಅಗತ್ಯಗತೆಗಾಗಿ ರಾಜ್ಯದ ಎಲ್ಲಾ ಪ್ರಾಥಮಿಕ ಆರೋಗ್ಯ ಹಾಗೂ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ**

ಹದಿಹರೆಯದವರ ಆರೋಗ್ಯ ರಕ್ಷಣೆ

**ಸ್ನೇಹ ಕ್ಲಿನಿಕ್** ಗಳನ್ನು ತೆರೆಯಲಾಗಿದೆ.

ಎಆರ್‌ಎಸ್‌ಹೆಚ್

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ

**ಇವುಗಳು ಪ್ರತಿ ಗುರುವಾರ ಮಧ್ಯಾಹ್ನ 3.00ರಿಂದ ಸಂಜೆ 5.00 ಗಂಟೆಯವರೆಗೆ ಕಾರ್ಯನಿರ್ವಹಿಸುತ್ತವೆ.**

**ಹದಿಹರೆಯದವರು ಈ ಸ್ನೇಹ ಕ್ಲಿನಿಕ್‌ನ ಉಪಯೋಗವನ್ನು ಪಡೆದುಕೊಳ್ಳಬಹುದು**

ಪ್ರಕಟಣೆ: ಅಭಿಯಾನ ನಿರ್ದೇಶಕರು (ಎನ್.ಆರ್.ಹೆಚ್.ಎಂ.),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು – 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಕಮಲಂ ಅರಸು, ಪ್ರತೀಕ್ ಸಿನ್ಹಾ, ಶ್ರೀಹರಿ, ವಿ. ಗೋಪಾಲ್

ಮುಖಪುಟದ ಛಾಯಾಚಿತ್ರ : ನರೇಶ

ಮುಖಪುಟ : ಕೋಚೆ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಜೋಸೆಫ್ ಸ್ಟಿಗ್ಲಿಟ್ಜ್ ಅಮೆರಿಕದ ಅರ್ಥಶಾಸ್ತ್ರಜ್ಞ. ಸ್ಟ್ಯಾನ್‌ಫರ್ಡ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ನೊಬೆಲ್ ಪುರಸ್ಕಾರ ವಿಜೇತ. ಜಾಗತೀಕರಣ ನೀತಿಯನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿರುವ ಈತ ಐ.ಎಂ.ಎಫ್. ಮತ್ತು ವರ್ಲ್ಡ್ ಬ್ಯಾಂಕ್ ನೀತಿಗಳನ್ನು ಕಟುವಾಗಿ ಟೀಕಿಸಿದ್ದಾನೆ. ಅರ್ಥಶಾಸ್ತ್ರದ ಹಲವು ಉದ್ಗ್ರಂಥಗಳನ್ನು ಪ್ರಕಟಿಸಿರುವ ಈತ ಈಗ ಭಾರತದಲ್ಲಿ ಪ್ರವಾಸ ಮಾಡುತ್ತಿದ್ದಾನೆ. ಬೆಂಗಳೂರಿಗೂ ಭೇಟಿ ನೀಡಿದ್ದ ಸ್ಟಿಗ್ಲಿಟ್ಜ್ ತಾನು ನೀಡಿದ ಉಪನ್ಯಾಸ ಒಂದರಲ್ಲಿ ವಿದೇಶೀ ಬಂಡವಾಳದ ಮೇಲೆ ಅಧಿಕ ಅವಲಂಬನೆಯ ಬಗ್ಗೆ ಎಚ್ಚರಿಕೆಯ ಮಾತುಗಳನ್ನಾಡಿದ್ದನ್ನೂ ನೆನಪಿಸಿಕೊಳ್ಳಬಹುದು. ಅನಂತರ ಪಾಟ್ನಾದಲ್ಲಿ 'ಬಂಡವಾಳಶಾಹಿ ವ್ಯವಸ್ಥೆಯ ಪುನರಾವಲೋಕನ' ಎಂಬ ವಿಷಯದ ಮೇಲೆ ಮಾತನಾಡುತ್ತ ಮತ್ತೊಮ್ಮೆ ಅದೇ ಎಚ್ಚರಿಕೆಯನ್ನು ನೀಡಿದ್ದಾನೆ. ರಷ್ಯನ್ ಡೆವಲಪ್‌ಮೆಂಟ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಈ ಉಪನ್ಯಾಸವನ್ನೇರ್ಪಡಿಸಿತ್ತು. ವಿದೇಶಿ ಬಂಡವಾಳದ ಹೂಡಿಕೆ ಆರ್ಥಿಕ ಬೆಳವಣಿಗೆಗೆ ಅಗತ್ಯ ಎಂದು ಹೇಳುವ ಈತ ಯಾವ ಕ್ಷೇತ್ರದಲ್ಲಿ ಹೂಡಿಕೆ ಬೇಕು ಎನ್ನುವುದರ ಕುರಿತು ಜಾಗರೂಕರಾಗಿರಬೇಕೆಂದು ಹೇಳಿದ್ದಾರೆ. ನಡೆಮುಡಿ ಕಟ್ಟಿ ವಿದೇಶೀ ಬಂಡವಾಳ ಹೂಡಿಕೆಗೆ ಬದ್ಧವಾಗಿರುವ ಮನಮೋಹನ್ ಸಿಂಗ್-ಅಹ್ಲುವಾಲಿಯ-ಚಿದಂಬರಂ ಕಂಪನಿ ಅಮೆರಿಕದ ದೈತ್ಯ ಚಿಲ್ಲರೆ ಮಾರಾಟ ಸಂಸ್ಥೆ ವಾಲ್‌ಮಾರ್ಟ್‌ಅನ್ನು ಸ್ವಾಗತಿಸಲು ಸಿದ್ಧವಾಗಿ ನಿಂತಿದೆ. ಸ್ಟಿಗ್ಲಿಟ್ಜ್ ವಾಲ್‌ಮಾರ್ಟ್‌ನ ಅವ್ಯವಹಾರಗಳನ್ನು, ಕಾರ್ಮಿಕ ವಿರೋಧಿ ಕ್ರಮಗಳನ್ನು ಸ್ಪಷ್ಟವಾದ ನುಡಿಗಳಲ್ಲಿ ಬಯಲಿಗೆಳೆದಿದ್ದಾನೆ. ಈ ಸಂಸ್ಥೆಯ ಪ್ರವೇಶಕ್ಕೆ ಭಾರತ ಏಕೆ ಅವಕಾಶ ನೀಡಬೇಕೋ ತಿಳಿಯದು ಎಂದಿದ್ದಾನೆ. ಭಾರತದ ದೊಡ್ಡ ಬಂಡವಾಳಗಾರರು ಬೇರೆ ದೇಶಗಳಲ್ಲಿ ಬಂಡವಾಳ ಹೂಡುತ್ತಿರುವಾಗ, ಭಾರತ ಏಕೆ ವಿದೇಶೀ ಬಂಡವಾಳಕ್ಕೆ ಹಾತೊರೆಯಬೇಕು, ಉಳಿತಾಯಕ್ಕೆ ಒತ್ತುಕೊಟ್ಟರೆ ಸಾಕು ಎನ್ನುವುದು ಸ್ಟಿಗ್ಲಿಟ್ಜ್ ಅಭಿಪ್ರಾಯ. ಮನಮೋಹನ್ ಸಿಂಗ್ ಸರಕಾರ ಈ ಅರ್ಥಶಾಸ್ತ್ರಜ್ಞನ ವಿಚಾರಗಳನ್ನು ಗಮನಕ್ಕೆ ತೆಗೆದುಕೊಂಡೀತೆ ?

* * *

ಕನ್ನಡ ಸಾಹಿತ್ಯ ಸಮ್ಮೇಳನ ಈ ಬಾರಿ ವಿಜಾಪುರದಲ್ಲಿ. ಎಪ್ಪತ್ತೊಂಬತ್ತನೇ ಸಮ್ಮೇಳನ ಇದು. ಫೆಬ್ರುವರಿಯಲ್ಲಿ ಹಿರಿಯ ಸಾಹಿತಿ ಕೋ. ಚೆನ್ನಬಸಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಯುತ್ತದೆ. ಸಾಹಿತ್ಯ ಸಮ್ಮೇಳನಗಳು ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಾಗಿ ಬಿಟ್ಟಿದೆ ಎಂಬ ಟೀಕೆ ಈಚೆಗೆ ಹೆಚ್ಚಾಗಿದೆ. ಕನ್ನಡದ ಜಾತ್ರೆ ಯಾಕೆ ಬೇಡ ಎನ್ನುವವರೂ ಇದ್ದಾರೆ. ಇಂಥ ಅದ್ದೂರಿ ಸಮ್ಮೇಳನಗಳಿಂದ ಕನ್ನಡದ ಜಾಗೃತಿಯಾಗುತ್ತದೆ, ಕನ್ನಡಾಭಿಮಾನ ಬೆಳೆಯುತ್ತದೆ ಎನ್ನುವುದು ಇನ್ನು ಕೆಲವರ ಅಂಬೋಣ. ವರ್ಷಕ್ಕೊಮ್ಮೆ ಯಾಗುವ ಬದಲು ಮೂರು ವರ್ಷಕ್ಕೊಮ್ಮೆ ಆಗಲಿ ಎಂಬ ವಿಚಾರವೂ ಮುಂದೆ ಬಂದಿದೆ. ಇಂಥ ಅಂಬೋಣಗಳ ಹಿಂದೆ ಇರುವ ಕಾರಣ ಹಣಕಾಸಿನ ಕೊರತೆ. ಪ್ರತಿವರ್ಷ ಸರಕಾರದ ಅನುದಾನ ಬಿಡುಗಡೆಯಾಗುವುದು ನಿಧಾನ. ಅದೂ ಕೇಳಿದಷ್ಟು, ಒಪ್ಪಿಕೊಂಡಷ್ಟು ಹಣವನ್ನು ಸರಕಾರ ಕೊಡುವುದಿಲ್ಲ. ಅನುದಾನ ಬರುವುದು ತಡವಾಗುವುದರಿಂದ ಆಗಬೇಕಾದ ಕಾರ್ಯಗಳೆಲ್ಲ ತರಾತುರಿ. ಕೊನೆಯಘಳಿಗೆವರೆಗೆ, ಸಮ್ಮೇಳನ ಪ್ರಾರಂಭವಾಗುವವರೆಗೆ ಸಿದ್ಧತೆ ನಡೆದೇ ಇರುತ್ತದೆ. ಊಟ ತಿಂಡಿಗಳಿಗೆ ಯಾವತ್ತೂ ಅವ್ಯವಸ್ಥೆ, ತಕರಾರು. ಸಮ್ಮೇಳನದಲ್ಲಿ ಉಂಡವರೇ ಪುಣ್ಯವಂತರು. ಬಿಜಾಪುರದಲ್ಲಿ ಯಾವ ಸಿದ್ಧತೆಗಳೂ ಆಗಿಲ್ಲ ಎಂದು ವರದಿಯಾಗಿದೆ. ಸಮ್ಮೇಳನಕ್ಕೆ ಬರುವ ಪ್ರತಿನಿಧಿಗಳು ಕೋಲು, ಟಾರ್ಚ್ ಹಿಡಿದು - ಬನ್ನಿ ಎಂದು ಒಂದು ವರದಿ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಕಾರಣ ಪವರ್ ಕಟ್ ಮತ್ತು ಹಾಳಾದ ರಸ್ತೆಗಳು, ಜೊತೆಗೆ ರಸ್ತೆಯಲ್ಲಿ ಅಡ್ಡಬರುವ ದನಗಳು ಮತ್ತು ಹಂದಿಗಳು. ಸಮ್ಮೇಳನ ನಡೆಯುವ ಹೊತ್ತಿಗೆ ತಟಾಪೋಟಿ ಮಾಡಿ ಸಿದ್ಧತೆ ಮುಗಿಯುತ್ತದೆ, ಸಮ್ಮೇಳನವೂ ವಿಜೃಂಭಣೆಯಿಂದ ನಡೆದುಹೋಗುತ್ತದೆ. ಪ್ರತಿಸಲವೂ ಇಷ್ಟು ಭಾರಿ ಮೊತ್ತದ ಖರ್ಚು ಅಗತ್ಯವೆ ? ಈ ಅದ್ದೂರಿ ಬೇಕೆ ಎನ್ನುವ ಪ್ರಶ್ನೆ ಮಾತ್ರ ಉಳಿಯುತ್ತದೆ.

* * *

(೭ನೇ ಪುಟಕ್ಕೆ)




ಸಂಪುಟ-೧೪ ಸಂಚಿಕೆ-೭ ಫೆಬ್ರವರಿ ೨೦೧೩

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೨೯೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೨೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಧಾರವಾಡದಲ್ಲಿ 'ಬೂರ್ಷ್ವಾ ಜಂಟಲ್‌ಮನ್'ಗಳ ಸಂಭ್ರಮದ ಸಾಹಿತ್ಯ

ಇದು ಜಾಗತೀಕರಣ, ಖಾಸಗೀಕರಣದ ಯುಗ. ಈ ಯುಗದಲ್ಲಿ ಪ್ರಜೆಗಳೆಲ್ಲ ಗ್ರಾಹಕರು, ಗಿರಾಕಿಗಳಾಗಿ ನೋಡಲ್ಪಡುತ್ತಿದ್ದಾರೆ. ಎಲ್ಲವೂ ಈ ವ್ಯಾಪಾರಿ ಮನೋಭಾವದ ವ್ಯಾಪ್ತಿಗೇ ಬರುತ್ತಿರುವಾಗ ಸಾಹಿತ್ಯಕ್ಷೇತ್ರ ಹೊರಗುಳಿಯುವುದು ಹೇಗೆ ? ಕಾವ್ಯವಾಚನ, ವಿಚಾರಮಂಥನ, ಓದುವ ವಿಧಾನ, ಹಳೆಗನ್ನಡ ಓದು, ಸಾಹಿತಿಗಳ ಸಂಭಾಷಣೆ ಇವೆಲ್ಲವನ್ನೂ ಪುಕ್ಕಟೆ ಕೇಳಿದರೆ ಹೇಗೆ ? ಅದಕ್ಕೂ ದುಡ್ಡು ಕೊಡಬೇಕು. ಸಾಹಿತಿ ಮತ್ತು ಸಾಹಿತ್ಯಾಸಕ್ತರ ನಡುವೆ ಮಾರುವವನ, ಕೊಳ್ಳುವವನ ಸಂಬಂಧ ಏರ್ಪಡದೆ ಇದ್ದರೆ ಜಾಗತೀಕರಣ, ಖಾಸಗೀಕರಣ ಪ್ರಕ್ರಿಯೆ ಪೂರ್ತಿಯಾಗುವುದಾದರೂ ಹೇಗೆ ? ಇಂಥ ಸಾಹಿತ್ಯ ವ್ಯಾಪಾರಿ ಮತ್ತು ಪ್ರೇಕ್ಷಕ ಗಿರಾಕಿ ನಡುವೆ ಒಂದು ಏಜೆನ್ಸಿ ಬೇಡವೆ ? ಅದಕ್ಕಾಗಿ ಅದೂ ಹುಟ್ಟಿಕೊಂಡಿದೆ. ಅದಕ್ಕೆ ಧಾರವಾಡ ಸಾಹಿತ್ಯ ಸಂಭ್ರಮ (ಪ್ರೈವೇಟ್ ಲಿಮಿಟೆಡ್) ಎಂದು ಹೆಸರಿಡಲಾಗಿದೆ. ಡಾ॥ ಗಿರಡ್ಡಿ ಗೋವಿಂದರಾಜ ಎಂಬ ನಮ್ಮ ನಡುವಿನ ಹಿರಿಯ ಸಾಹಿತಿಗಳು, ಖ್ಯಾತ ವಿಮರ್ಶಕರು ಇದರ ಮ್ಯಾನೇಜರ್ ಆದರೆ, ಧಾರವಾಡದ ಪ್ರತಿಷ್ಠಿತ ಪ್ರಕಾಶನ ಸಂಸ್ಥೆ ಮನೋಹರ ಗ್ರಂಥಮಾಲಾ ಇದರ ನಿರ್ದೇಶಕ ಮಂಡಲಿ ಸ್ಥಾನದಲ್ಲಿದೆ. ಇನ್ನು ಈ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರೂಪದರ್ಶಿ (ಮಾಡೆಲ್)ಗಳಾಗಿ ನಾಡಿನ ಕೆಲವು ಹಿರಿಯ ಸಾಹಿತಿಗಳು, ಸಂಶೋಧಕರು, ಕವಿಗಳು, ಕಥೆಗಾರರು, ಕಥೆಗಾರ್ತಿಯರು ವಿವಿಧ ಜವಾಬ್ದಾರಿಗಳನ್ನು ವಹಿಸಿಕೊಂಡಿದ್ದಾರೆ. ಇವರನ್ನು ರಾಯಭಾರಿಗಳೆಂದೂ ಕರೆಯಬಹುದು.

ಧಾರವಾಡದ ಸಾಹಿತ್ಯ ಸಂಭ್ರಮ, ಧಾರವಾಡದ ನೆಲದಿಂದ ಈ ರಾಜ್ಯಕ್ಕೆ ಕೊಡಮಾಡುವ ಹೊಸ ಮಾದರಿಯ 'ಪ್ರಾಡಕ್ಟು'. ಧಾರವಾಡದ ನೆಲ ಹಲವಾರು ಹೊಸ ಪ್ರಯೋಗಗಳನ್ನು ನೀಡಿದೆ. ಈಗ ಇನ್ನೊಂದು ಹೊಸ ಪ್ರಯೋಗವನ್ನು ಕೊಡುತ್ತಿದ್ದೇವೆ, 'ದಯವಿಟ್ಟು ಧಾರವಾಡ ಸಾಹಿತ್ಯ ಸಂಭ್ರಮಕ್ಕೆ ಬನ್ನಿರಿ, ಸಂಭ್ರಮವನ್ನು ಯಶಸ್ವಿಗೊಳಿಸಲು ಸಹಕರಿಸಿರಿ' ಎಂದು ಸಂಭ್ರಮದ ಅಧ್ಯಕ್ಷರಾದ ಡಾ॥ ಗಿರಡ್ಡಿ ಗೋವಿಂದರಾಜ ಅವರು ಆಹ್ವಾನಿಸುತ್ತಾರೆ. ಪತ್ರಿಕೆಗಳಲ್ಲಿಯೂ ಈ ಸಂಭ್ರಮದ ಬಗ್ಗೆ ಆಕರ್ಷಕ ಹೇಳಿಕೆಗಳು ಪ್ರಕಟವಾಗುತ್ತವೆ. ಹೀಗಾಗಿ ಈ ಹೊಸ ಪ್ರಾಡಕ್ಟ್‌ನ ಸುಖವನ್ನು ಅನುಭವಿಸಲು ಹೊರಟವರಿಗೆ ಆಘಾತ ಕಾದಿತ್ತು. ಸಂಭ್ರಮದ ಕೋಶಾಧಿಕಾರಿಗಳೂ/ಸಂಚಾಲಕರೂ ಆದ ಶ್ರೀ ಸಮೀರ ಜೋಶಿ ಅವರ ಹೆಸರಿನಲ್ಲಿ ಒಂದು ನಿಯಮ - ನಿಬಂಧನೆಗಳ ಪಟ್ಟಿ ಇತ್ತು. ಈ ನಿಯಮ-ನಿಬಂಧನೆಗಳಲ್ಲಿ ಕೆಲವನ್ನು ಅವರು ಪ್ರಕಟಿಸಿದಂತೆಯೇ ಇಲ್ಲಿ ಗಮನಿಸಬಹುದು.

ಧಾರವಾಡ ಸಾಹಿತ್ಯ ಸಂಭ್ರಮಕ್ಕೆ ಬರುವವರು

೧. ಪ್ರತಿಯೊಬ್ಬರೂ ಕಡ್ಡಾಯವಾಗಿ ನೋಂದಾಯಿಸಲೇಬೇಕು.
೨. ಪ್ರತಿನಿಧಿಗಳಿಗೆ ನೋಂದಣಿ ಶುಲ್ಕ ಮೂರು ದಿನಗಳಿಗೆ ಸೇರಿ ರೂ. ೧,೫೦೦/- ವಿದ್ಯಾರ್ಥಿಗಳಿಗೆ ಮಾತ್ರ ರೂ. ೧,೦೦೦/- (ಕೇವಲ ೫೦ ವಿದ್ಯಾರ್ಥಿಗಳಿಗೆ ಮಾತ್ರ ಅವಕಾಶ).

ದಾಖಲೆಗಳು : ರಶೀದಿ, ಆನ್‌ಲೈನ್ ಅರ್ಜಿ ಮುಂತಾದ ದಾಖಲೆಗಳನ್ನು ಸಲ್ಲಿಸದಿದ್ದಲ್ಲಿ ಗುರುತಿನ ಚೀಟಿ ನೀಡಲಾಗುವುದಿಲ್ಲ.

**ಪ್ರವೇಶ :** ಭಾವಚಿತ್ರವಿರುವ ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಕೊರಳಿನಲ್ಲಿ ಧರಿಸಬೇಕು. ಗುರುತಿನ ಚೀಟಿ ಇಲ್ಲದೇ ಯಾರಿಗೂ ಪ್ರವೇಶವಿಲ್ಲ.

೨. ಸಾಹಿತ್ಯ ಸಂಭ್ರಮಕ್ಕೆ ಪ್ರವೇಶ ನೀಡುವುದನ್ನು ಕಾಯ್ದಿರಿಸಲಾಗಿದೆ.
೩. ಅನುಚಿತ ವರ್ತನೆಗಾಗಿ ಸಭಾಂಗಣದಿಂದ, ಕಾರ್ಯಕ್ರಮದ ಸ್ಥಳದಿಂದ ಹೊರಗೆ ಕಳಿಸುವ ಅಧಿಕಾರ ಸಂಘಟಕರಿಗೆ, ಅವರ ಪರವಾಗಿ ಕಾರ್ಯನಿರ್ವಹಿಸುವ ಅಧಿಕಾರಿ/ಸಿಬ್ಬಂದಿ/ಸ್ವಯಂ ಸೇವಕರಿಗೆ ಕಾಯ್ದಿರಿಸಲಾಗಿದೆ.
೫. ಸಭಾಭವನಕ್ಕೆ ಪ್ರವೇಶವನ್ನು ಮೊದಲು ಬಂದವರಿಗೆ 'ಮೊದಲ ಆದ್ಯತೆ'ಯ ಆಧಾರದ ಮೇಲೆ ನೀಡಲಾಗುತ್ತದೆ. ಸ್ಥಳ ಕಾಯ್ದಿರಿಸಲಾಗುವುದಿಲ್ಲ

**ವರ್ತನೆ :**

೧. ಪ್ರತಿಯೊಬ್ಬರೂ ಸಭ್ಯವಾಗಿ ವರ್ತಿಸಬೇಕು.
೨. ಗೋಷ್ಠಿ ನಡೆದಾಗ ಯಾರಿಗೂ ಮಧ್ಯಪ್ರವೇಶಿಸಿ ಮಾತನಾಡುವ ಅವಕಾಶವಿರುವುದಿಲ್ಲ. ಗೋಷ್ಠಿಯ ನಂತರ, ಗೋಷ್ಠಿಯ ನಿರ್ವಾಹಕರು/ಸಂಚಾಲಕರು ಅನುಮತಿ ನೀಡಿದರೆ ಮಾತ್ರ ಮಾತನಾಡಲು/ಪ್ರಶ್ನೆ ಕೇಳಲು ಅವಕಾಶವಿರುತ್ತದೆ.
೬. ಕಾರ್ಯಕ್ರಮದ ಪ್ರವೇಶ ಸ್ಥಳ/ಸಭಾಂಗಣದಲ್ಲಿ ಮದ್ಯ, ತಂಬಾಕು ಅಥವಾ ಮಾದಕ ವಸ್ತುಗಳನ್ನು ತರಬಾರದು ಮತ್ತು ಸೇವಿಸಬಾರದು.
೭. ಕಾರ್ಯಕ್ರಮದ ಪ್ರವೇಶ ಸ್ಥಳ/ಸಭಾಂಗಣದಲ್ಲಿ ಯಾವುದೇ ರೀತಿಯ ಶಸ್ತ್ರಾಸ್ತ್ರಗಳನ್ನು ತರಬಾರದು.

**ಪ್ರತಿನಿಧಿಗಳಿಗೆ ಸೂಚನೆ :**

೧. ಪ್ರತಿನಿಧಿಯು ಕಾರ್ಯಕ್ರಮದಲ್ಲಿ ಭಾಗವಹಿಸುವ ಭಾಷಣಕಾರನಲ್ಲ.
೨. ಪ್ರತಿನಿಧಿಗಳಿಗೆ ರಾತ್ರಿ ಭೋಜನ ವ್ಯವಸ್ಥೆ ಇರುವುದಿಲ್ಲ (ತಮ್ಮ ವ್ಯವಸ್ಥೆಯನ್ನು ತಾವೇ ಮಾಡಿಕೊಳ್ಳಬೇಕು)

೩. ಪರ ಊರಿನ ಪ್ರತಿನಿಧಿಗಳಿಗೆ ವಸತಿ ಸೌಕರ್ಯಕ್ಕಾಗಿ ಈ ಕೆಳಗಿನ ಹೊಟೇಲ್‌ಗಳಲ್ಲಿ ವಿನಂತಿಸಿಕೊಳ್ಳಲಾಗಿದೆ. ಅವರು ನೇರವಾಗಿ ಹೊಟೇಲ್ ವ್ಯವಸ್ಥಾಪಕರನ್ನು ಸಂಪರ್ಕಿಸಿ ತಮಗೆ ಬೇಕಾದ ವ್ಯವಸ್ಥೆ ಮಾಡಿಕೊಳ್ಳಬೇಕು.

ಖಂಡಿತವಾಗಿಯೂ ಡಾ|| ಗಿರಡ್ಡಿಯವರು ಹೇಳಿದಂತೆ ಇದು ಹೊಸ ಪ್ರಯೋಗ, ಅದೂ ಧಾರವಾಡದಂತಹ ಸಾಂಸ್ಕೃತಿಕ ರಾಜಧಾನಿಯಿಂದ ಈ ರಾಜ್ಯಕ್ಕೆ ಹೊಸ ಮಾದರಿಯ ಕೊಡುಗೆ. ಇಂಥ ಕೊಡುಗೆಯನ್ನು ಸಾಹಿತ್ಯ ಸಾಂಸ್ಕೃತಿಕ ಲೋಕಕ್ಕೆ ಕೊಡುವಾಗ ಧಾರವಾಡದ ಕೆಲವು 'ಉಡಾಳ ಹುಡುಗರು' (ಹಾಗೆ ಬಿಂಬಿಸಲು ಯತ್ನಿಸಲಾಗಿದೆ) ಪಾಟೀಲ ಪುಟ್ಟಪ್ಪನವರನ್ನೂ ಒಳಗೊಂಡು ಪ್ರತಿಭಟಿಸಿದರು. ರಾಜ್ಯದ ಸಾಹಿತ್ಯ, ಸಾಂಸ್ಕೃತಿಕ ಲೋಕಕ್ಕೆ ಈ ನಿಯಮ ನಿಬಂಧನೆಗಳು ಮಾಡುವ ಅಪಮಾನವನ್ನು ಬಹಿರಂಗಗೊಳಿಸಿದರು. ಡಾ|| ಎಂ. ಡಿ. ಒಕ್ಕುಂದ, ಬಸವರಾಜ ಸೂಳಿಭಾವಿ, ಡಾ|| ಸಂಜೀವ ಕುಲಕರ್ಣಿ, ಶಂಕರ ಹಲಗತ್ತಿ ಮುಂತಾದವರು ಇದಕ್ಕೆ ಪ್ರತಿರೋಧದ ರೂಪದಲ್ಲಿ ಪರ್ಯಾಯವಾಗಿ ಜನಪರವಾದ ಸಮಾವೇಶ ನಡೆಸಲು ಮುಂದಾದರು. ಧಾರವಾಡ ಸಾಹಿತ್ಯ ಸಂಭ್ರಮಕ್ಕೆ ಆಹ್ವಾನ ಪಡೆದ ಕೆಲವು ಆಹ್ವಾನಿತರು ಈ ಸಂಭ್ರಮದಲ್ಲಿ ಭಾಗವಹಿಸುವುದಿಲ್ಲವೆಂದರು. ಕುಂ. ವೀ., ಡಾ|| ಕೆ. ಮರುಳಸಿದ್ದಪ್ಪ, ಪ್ರೊ|| ಅಶೋಕ ಶೆಟ್ಟರ ಅಂಥವರಲ್ಲಿ ಕೆಲವು ಪ್ರಮುಖರು. ಡಾ|| ದುರ್ಗಾದಾಸ್ ಅವರು ಸಂಭ್ರಮದ ಉಪಾಧ್ಯಕ್ಷ ಸ್ಥಾನ ಬಿಟ್ಟು ಹೊರಬಂದರು.

ಇಷ್ಟೆಲ್ಲ ಬೆಳವಣಿಗೆಗಳಾದ ಮೇಲೆ ಡಾ|| ಗಿರಡ್ಡಿ ಗೋವಿಂದರಾಜ ಅವರು ಪತ್ರಿಕಾಗೋಷ್ಠಿ ಮಾಡಿ 'ಎಲ್ಲ ನಿಯಮ-ನಿಬಂಧನೆಗಳನ್ನು ತೆಗೆದುಹಾಕಲಾಗಿದೆ' ಎಂದು ಹೇಳಿ, ನಿಯಮ-ನಿಬಂಧನೆಗಳ ಬಗ್ಗೆ ಅಪಾರ್ಥ ಕಲ್ಪಿಸಲಾಗಿದೆ, ಅಪಪ್ರಚಾರ ಮಾಡಲಾಗುತ್ತಿದೆ ಎಂದಿದ್ದಾರೆ. ಮೇಲೆ ಪ್ರಕಟಿಸಿದ ನಿಯಮ-ನಿಬಂಧನೆಗಳು ನೇರವಾಗಿ ಅರ್ಥವಾಗುತ್ತವೆ, ಇನ್ನು ಅಪಾರ್ಥ, ಅಪಪ್ರಚಾರ ಹೇಗಾದೀತು? ಅಂತೂ ಇಂತೂ ಸಾಹಿತ್ಯ ಸಂಭ್ರಮದ ಗೌರವಾಧ್ಯಕ್ಷರಾದ ನಾಡೋಜ ಚೆನ್ನವೀರ ಕಣವಿ, ಡಾ|| ಎಂ. ಎಂ. ಕಲಬುರ್ಗಿಯವರ ಮಧ್ಯಸ್ಥಿಕೆಯಲ್ಲಿ ಸಾಹಿತ್ಯ ಸಂಭ್ರಮದ ಮಿಲಿಟರಿ ಶಿಸ್ತುಗಳು, ಸಾಹಿತ್ಯಾಭಿಮಾನಿ ಎಂಬ ಗಿರಾಕಿಗೆ ಖ್ಯಾತ ಸಾಹಿತಿಗಳ ಮುಖ ನೋಡಲು, ಧ್ವನಿ, ಚಿಂತನೆ ಕೇಳಲು ವಿಧಿಸಿದ್ದ ರೇಟು, ಗಿರಾಕಿಗಳು ವರ್ತಿಸಬೇಕಾದ ರೀತಿಯಲ್ಲಿ ಸ್ವಲ್ಪ ರಿಯಾಯಿತಿ ಸಿಕ್ಕಿದೆ. ಸದ್ಯಕ್ಕೆ ಈ ಸಂಭ್ರಮಕ್ಕೆ ಪರ್ಯಾಯ ನಡೆಸಬೇಕೆಂದಿದ್ದ 'ಉಡಾಳ ಹುಡುಗರು' (ಪ್ರಗತಿಪರರು) ಪರ್ಯಾಯ ಸಮಾವೇಶ ನಡೆಸುವ ತಮ್ಮ ಕಾರ್ಯಕ್ರಮವನ್ನು ಮುಂದೂಡಿದ್ದಾರೆ.

'ಹೊಸತು'ವಿನ ಈ ಸಂಚಿಕೆ ಅಚ್ಚಿನಲ್ಲಿರುವಾಗ ಈ ಧಾರವಾಡ ಸಾಹಿತ್ಯ ಸಂಭ್ರಮ ನಡೆಯುತ್ತದೆ. ಸಂಭ್ರಮ ಹೇಗೇ ನಡೆಯಲಿ ಈ ಸಂಭ್ರಮ ಹಲವಾರು ಪ್ರಶ್ನೆಗಳನ್ನು ಸಾಹಿತ್ಯ ಸಾಂಸ್ಕೃತಿಕ ಲೋಕದ ಮುಂದಿಟ್ಟಿದೆ.

✶ ಮೊದಲನೆಯದಾಗಿ ಇಡೀ ದೇಶ ಹೆಣ್ಣುಮಕ್ಕಳ-ಹಸುಳೆಗಳ ಮೇಲೆ ಅತ್ಯಾಚಾರ, ರೈತರ ಆತ್ಮಹತ್ಯೆ, ಬೆಲೆ ಏರಿಕೆ, ಸಾಮಾಜಿಕ ಅಭದ್ರತೆ, ರಾಜಕೀಯ ಅಸ್ಥಿರತೆ, ಜಾಗತೀಕರಣದ ದಾಳಿ, ಜಾತಿ ಹಾಗೂ ಕೋಮುಸಂಘರ್ಷ ಇಂಥ ನೂರಾರು ಸಮಸ್ಯೆಗಳ 'ಸಂಕಟ'ದ ಸ್ಥಿತಿಯಲ್ಲಿರುವಾಗ ಸಾಹಿತಿಗಳು ಸೇರಿ 'ಸಂಭ್ರಮ'ಪಡುವುದು ಏನನ್ನು ತೋರಿಸುತ್ತದೆ ? ಇದಕ್ಕೆ 'ಧಾರವಾಡ ಸಾಹಿತ್ಯ ಸಂಭ್ರಮ' ಎನ್ನುವ ಬದಲಾಗಿ ಬೇರೆ ಹೆಸರಿಡಲು ಸಾಧ್ಯವಿರಲಿಲ್ಲವೆ? ರಾಜ್ಯ, ದೇಶ, ಜನತೆ ಸಂಕಟದಲ್ಲಿರುವಾಗ ಧಾರವಾಡ ಯಾವತ್ತೂ ಸಂಕಟಕ್ಕೆ ಸ್ಪಂದಿಸಿ ಪರಿಹಾರಕ್ಕಾಗಿ ಸಾತ್ವಿಕ ಪ್ರತಿರೋಧವನ್ನು ತೋರಿಸಿದೆ, ಸಂಭ್ರಮ ಪಟ್ಟಿಲ್ಲ ಎನ್ನುವುದನ್ನು ಗಮನಿಸಬೇಕು. ಜೈಪುರದ ಪಡಿಯಚ್ಚು ಅನಗತ್ಯ.

✶ ಇದೊಂದು ಸಾಹಿತ್ಯದ ಖಾಸಗೀಕರಣ, ಸೃಜನಶೀಲತೆ ಮತ್ತು ಗ್ರಹಿಕೆಗಳನ್ನು ಸರಕಾಗಿಸುವ ಪ್ರಕ್ರಿಯೆ ಎನ್ನಿಸುತ್ತಿಲ್ಲವೆ?

✶ ಯಾರೋ ದುಡ್ಡು ಕೊಟ್ಟು ತನ್ನ ನೆಚ್ಚಿನ ಸಾಹಿತಿಗಳನ್ನು ಕರೆಸಿ ಬಾಗಿಲು ಮುಚ್ಚಿಕೊಂಡು ಸಂವಾದಿಸಿದರೆ ಯಾರದೂ ತಕರಾರಿಲ್ಲ. ಸಾರ್ವಜನಿಕರ ಹಣವನ್ನು ಸರಕಾರದ ಸಹಾಯಧನದ ರೂಪದಲ್ಲಿ ಪಡೆದು (ಹತ್ತು ಲಕ್ಷ ಕೇಳಿದ್ದಾರೆ, ಐದು ಲಕ್ಷ ಸದ್ಯಕ್ಕೆ ಪಡೆದಿದ್ದಾರೆ) ಪ್ರವೇಶ ಶುಲ್ಕ, ಮಿತಿ, ನಿರ್ಬಂಧ ಹೇರುವುದು ನ್ಯಾಯವೇ? ದುಡ್ಡು ತುಂಬಿದವರಿಗೆ ಮಾತ್ರ ಊಟ, ತಿಂಡಿ ಕೊಡುತ್ತೇವೆ ಎಂದು ಹೇಳಲಿ, ನೆಚ್ಚಿನ ಸಾಹಿತಿಗಳ ಮಾತು ಕೇಳಲೂ ದುಡ್ಡು ಎಂದರೆ ಯಾವ ನ್ಯಾಯ ?

✶ ವಿಶ್ವವಿದ್ಯಾಲಯದ ಸಭಾಭವನವನ್ನು ಪುಕ್ಕಟೆ ಪಡೆದು ಕೇವಲ ಐವತ್ತು ವಿದ್ಯಾರ್ಥಿಗಳಿಗೆ ಪ್ರವೇಶ - ಅದೂ ದುಡ್ಡು ಕೊಟ್ಟು, ಎಂದು ಹೇಳುವುದು ಎಂಥ ಸಂಸ್ಕೃತಿ ?

✶ ಈ ಸಾಹಿತ್ಯ ಸಂಭ್ರಮದ ಮೂಲಕ ಸಾಹಿತ್ಯ-ಸಂವಾದಗಳನ್ನು ಖಾಸಗೀಕರಣ, ವ್ಯಾಪಾರೀಕರಣಗೊಳಿಸುವ ಗುಪ್ತ ಕಾರ್ಯಸೂಚಿ ಜಾರಿಗೊಳಿಸುವ ಹುನ್ನಾರ ಕಾಣಿಸುವುದಿಲ್ಲವೆ ?

ಕೊನೆಯದಾಗಿ ಹೇಳಬೇಕೆಂದರೆ ಖಾಸಗಿಯಾಗಿ ನಡೆಸುವ ಕಾರ್ಯಕ್ರಮಕ್ಕೂ ಒಂದು ಸುಸಂಸ್ಕೃತ, ಸೌಜನ್ಯಯುತ ವರ್ತನೆ ಇರಬೇಕು. ಅದೂ ಸಾಹಿತ್ಯ, ಸಾಂಸ್ಕೃತಿಕ ರಂಗದಲ್ಲಿ, ಈ ಸಾಹಿತ್ಯ ಸಂಭ್ರಮದ ಮೇಲೆ ಹೇಳಿದ ನಿಯಮ-ನಿಬಂಧನೆ ಗಳನ್ನು ಇಟ್ಟುಕೊಂಡಿರುತ್ತಾರೋ, ಸೆನ್ಸಾರ್ ಮಾಡುತ್ತಾರೋ, ತೆಗೆದುಹಾಕುತ್ತಾರೋ ಗೊತ್ತಿಲ್ಲ. ಆದರೆ ಆ ನಿಬಂಧನೆಗಳು ಸಾಹಿತ್ಯಾಭಿಮಾನಿಗಳನ್ನು ಕ್ರಿಮಿನಲ್‌ಗಳಂತೆ ಪರಿಗಣಿಸುವಂತಹ ಮನಸುಗಳು ಇದ್ದರೆ ಎಂಥ ಸಂಸ್ಕೃತಿ ನಿರ್ಮಿಸಬಹುದು? ನನಗೆ ಡಾ|| ಗಿರಡ್ಡಿ ಗೋವಿಂದರಾಜರ ಬಗ್ಗೆ ಗೌರವವಿದೆ. ಆದರೆ ಈ ಮೇಲಿನ ನಿಬಂಧನೆಗಳನ್ನು ಅಪಾರ್ಥ ಮಾಡಿಕೊಳ್ಳಲಾಗಿದೆ ಎಂದು ಹೇಳುವ ಮೂಲಕ, ಸಾಹಿತ್ಯಾಭಿಮಾನಿಗಳಿಗಾದ ಆಘಾತವನ್ನು ಶಾಂತವಾಗಿ ನಿರಾಕರಿಸುವುದರ ಮೂಲಕ ಈ ಸಾಹಿತ್ಯ ಸಂಭ್ರಮಕ್ಕೆ ಒಂದು ಗುಪ್ತಕಾರ್ಯಸೂಚಿ ಇದೆ ಎಂಬುದನ್ನು ಸಾಬೀತುಪಡಿಸುತ್ತಾರೆ. ಕಾರ್ಯಕ್ರಮ ಖಾಸಗಿಯಾಗೇ ಇರಲಿ, ಆದರೆ ಅಲ್ಲಿ ಸೌಜನ್ಯ ಬೇಡವೆ ? ಸಭೆಗೆ ಬರುವವರನ್ನು ಕುಡುಕರು, ಮಾದಕವಸ್ತು ವ್ಯಸನಿಗಳು, ಕೊಲೆಗಡುಕರ ರೀತಿಯಲ್ಲಿ ಪರಿಭಾವಿಸಿ ನಿಯಮ-ನಿಬಂಧನೆ ರೂಪಿಸಿದ್ದಕ್ಕೆ ಒಂದು ಸಣ್ಣ ವಿಷಾದವೂ ಬೇಡವೆ ? ನಮ್ಮದು ದಾಸೋಹ ಸಂಸ್ಕೃತಿ-ದಾಸ್ಯದ ಸಂಸ್ಕೃತಿ ಅಲ್ಲ ಎಂಬುದನ್ನು ಈ ಸಂಭ್ರಮದ ಸಾಹಿತಿಗಳು ಗಮನಿಸಬೇಕೆಂದು, ಧಾರವಾಡ ಸಾಹಿತ್ಯ ಸಂಭ್ರಮದ ಹಿಂದೆ-ಮುಂದೆ, ಮೇಲೆ ಕೆಳಗೆ ಇರುವ; ಜ್ಞಾನಪೀಠದಿಂದ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಪ್ರಶಸ್ತಿಯವರೆಗೆ ಸನ್ಮಾನಿತರಾದ ಎಲ್ಲರನ್ನು ವಿನಂತಿಸಿಕೊಳ್ಳುತ್ತೇನೆ.

ಸಿದ್ಧನಗೌಡ ಪಾಟೀಲ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

## ಲೈಂಗಿಕ ಭಯೋತ್ಪಾದನೆಯ ವಿರುದ್ಧ ಭುಗಿಲೆದ್ದ ಆಕ್ರೋಶ

**ಕ**ಪ್ಪು ಮಸಿಯಲ್ಲಿ ಮಿಂದು ಹೊಸ ವರ್ಷ ಆರಂಭವಾಗಿದೆ. ದೆಹಲಿಯ ವೈದ್ಯಕೀಯ ವಿದ್ಯಾರ್ಥಿನಿಯ ಮೇಲೆ ನಡೆದ ಅಮಾನುಷ ಹಲ್ಲೆ ಮತ್ತು ಅತ್ಯಾಚಾರ ಇಡೀ ದೇಶವನ್ನು ನಡುಗಿಸಿ, ಬೆಚ್ಚಿಬೀಳಿಸಿದೆ. ದೇಶದ ಅಂತಸ್ಸಾಕ್ಷಿ ತಲೆ ತಗ್ಗಿಸುವಂತೆ ಮಾಡಿದೆ. ಅಂತರರಾಷ್ಟ್ರೀಯ ಭೂಪಟದಲ್ಲೂ ಈ ಸುದ್ದಿ ಮಿಂಚಿ 'ಭವ್ಯ ಭಾರತದ ಸಂಸ್ಕೃತಿ'ಯನ್ನು 'ಭವ್ಯವಾಗಿ' ಪರಿಚಯ ಮಾಡಿಕೊಟ್ಟಿದೆ !

ಹೆಣ್ಣಿನ ಮೇಲಿನ ಅತ್ಯಾಚಾರ ಹೊಸ ಸಂಗತಿಯೇನಲ್ಲ; ಚರಿತ್ರೆಯಲ್ಲಿ ಅನಾದಿಕಾಲ ದಿಂದಲೂ ನಡೆದು ಬಂದಿರುವ ಮಹಾನ್ ಪಾತಕ ಇದು. ಮಹಿಳಾ ಚಳುವಳಿಯ ಒತ್ತಡದಿಂದಾಗಿ ಕಳೆದ ಮೂರು ದಶಕಗಳಿಂದ, ಅಂದರೆ, ಎಂಭತ್ತರ ದಶಕದ ಮಥುರಾ ಪ್ರಕರಣದ ನಂತರ ಈ ವಿಷಯ ಸಾರ್ವಜನಿಕವಾಗಿ ವಿಶೇಷ ಗಮನ ಸೆಳೆದದ್ದು ಎಲ್ಲರಿಗೂ ತಿಳಿದ ವಿಷಯ. ಆ ನಂತರ ಹೆಣ್ಣಿನ ಸುರಕ್ಷತೆ ಮತ್ತು ಅಪರಾಧಿಯ ಶಿಕ್ಷೆಯ ಬಗೆಗೆ ಸಾರ್ವಜನಿಕವಾಗಿ ವಿಪುಲವಾದ ಚರ್ಚೆ ಹಾಗೂ ಹೋರಾಟ ನಡೆದು ಕಾನೂನಿನ ಬದಲಾವಣೆಯತ್ತ ಮುಂದಡಿಯಿಟ್ಟರೂ ಹೆಣ್ಣಿಗೆ ಸಿಕ್ಕಿರುವ ನ್ಯಾಯ ಅಷ್ಟರಲ್ಲೇ ಇದೆ. ಮತ್ತೆ ಮತ್ತೆ ಮಥುರಾ, ರಮೀಜಾಬಿ, ಭಾಂವ್ರಿದೇವಿ, ಮನೋರಮಾ ಪ್ರಕರಣಗಳಂಥ ಸಾವಿರಾರು ಪ್ರಕರಣಗಳು ನಡೆಯುತ್ತಲೇ ಇವೆ. ವರ್ಷದಲ್ಲಿ ಒಂದು ದಿನವಾದರೂ ಅತ್ಯಾಚಾರ ಪ್ರಕರಣಗಳು ಇಲ್ಲದ ದಿನವಿರುವುದು ಯಾವ ಸಂಸ್ಕೃತಿಗೂ ಶೋಭೆ ತರುವಂತಹುದಲ್ಲ. ಆದರೂ ಈ ಪ್ರಸ್ತುತ ಪ್ರಕರಣದಲ್ಲಿ ಅಪರಾಧಿಗಳು ನಡೆಸಿರುವ ಕ್ರೌರ್ಯ ಯಾರ ಊಹೆಗೂ ನಿಲುಕದ್ದು, ಯಾವ ತರ್ಕಕ್ಕೂ ಸಿಕ್ಕದ್ದು. ಅವರ ಪೈಶಾಚಿಕತೆಯ ತಾಂಡವ ನೃತ್ಯಕ್ಕೆ ಮನುಷ್ಯರೆನಿಸಿಕೊಂಡವರೆಲ್ಲಾ ತಲೆ ತಗ್ಗಿಸಬೇಕಿದೆ.

ದೆಹಲಿಯ ಅತ್ಯಾಚಾರ ವಿರೋಧಿಸಿ ನಡೆದ ಅಭೂತಪೂರ್ವ ಪ್ರತಿಭಟನೆ ಜನತೆಯ ಇಂದಿನ ಮನಃಸ್ಥಿತಿಯ ಪ್ರತೀಕ. ರೊಚ್ಚಿಗೆದ್ದ ಯುವ ಜನತೆ ಅಷ್ಟೊಂದು ಬೃಹತ್ ಸಂಖ್ಯೆಯಲ್ಲಿ ಬೀದಿಗಿಳಿದದ್ದು, ಹತ್ತು ಹಲವು ಸ್ವರೂಪದಲ್ಲಿ ಪ್ರತಿಭಟಿಸಿದ್ದು, ರಾಜ್ಯಾಂಗ, ನ್ಯಾಯಾಂಗ ಹಾಗೂ ಪೊಲೀಸ್ ಯಂತ್ರಕ್ಕೆ ಸವಾಲೆಸೆದದ್ದು, ಇಡೀ ದೇಶದ ಜೀವನಾಡಿಯನ್ನು ಅಲುಗಾಡಿಸಿದೆ. ಈ ಪ್ರದರ್ಶನದ ರೊಚ್ಚಿನ ಹಿಂದೆ ಈ ಪ್ರಕರಣಕ್ಕೂ ಮಿಕ್ಕಿದ ಕಾರಣಗಳಿರುವುದನ್ನು ಗಮನಿಸಬೇಕು. ಕಳೆದ ವರ್ಷಗಳಲ್ಲಿ ವ್ಯಾಪಕವಾಗಿ ಬಯಲಿಗೆ ಬರುತ್ತಿರುವ ಕಣ್ಣಿಗೆ ರಾಚುವಂತಹ ಭ್ರಷ್ಟಾಚಾರದ ಪ್ರಕರಣಗಳು, ನಾಡಿನ ನೆಲ-ಜಲವನ್ನು ಲೂಟಿ ಮಾಡುತ್ತಿರುವ ರಾಜಕಾರಣಿಗಳ ನೈತಿಕ ದಿವಾಳಿತನ, ಜನಸಾಮಾನ್ಯರ ಅಂತರಾಳದಲ್ಲಿ ಕುದಿಯುತ್ತಿತ್ತು. ಈ ಎಲ್ಲದರ ಸ್ಫೋಟವಾಗಿ ಕಟ್ಟೆಯೊಡೆದ ಕೆರೆಯಂತೆ ದೇಶದ ಜನ ಸ್ಪಂದಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಕುಟುಂಬದಲ್ಲಿ ಮತ್ತು ಸಾರ್ವಜನಿಕವಾಗಿ ಹೆಣ್ಣು ದಿನನಿತ್ಯ ಅನುಭವಿಸುತ್ತಿರುವ ಅವಮಾನ, ಕಿರುಕುಳ, ದೌರ್ಜನ್ಯ ಮತ್ತು ಶೋಷಣೆಯೆಲ್ಲವೂ ಮಡುಗಟ್ಟಿ ಧ್ವನಿ ಪಡೆದದ್ದರ ಸಂಕೇತವಾಗಿತ್ತು ಈ ಪ್ರಕರಣ. ವಿದ್ಯುನ್ಮಾನ ಮಾಧ್ಯಮಗಳ ಮೂಲಕ ವಿಜೃಂಭಿಸಿದ ಹಿಂಸೆಯ ಸ್ವರೂಪದಿಂದಾಗಿ ಬೃಹತ್ ಸಂಖ್ಯೆಯ ಯುವಜನತೆಯನ್ನು ಬೀದಿಗಿಳಿಯುವಂತೆ ಮಾಡಿದ್ದು ಈ ಪ್ರಕರಣದ ವಿಶೇಷ.

ಈ ಸಂದರ್ಭದಲ್ಲಿ ಸಹಿ ಸಂಗ್ರಹದಿಂದ ಹಿಡಿದು ವೀರಾವೇಶದ ಪ್ರದರ್ಶನಗಳವರೆಗೆ ನಡೆದ ಪ್ರತಿಭಟನೆಯ ಸ್ವರೂಪ ಏನೇ ಆಗಿರಲಿ, ಒಂದಂಶವಂತೂ ಸ್ಪಷ್ಟ. ಇದು ಆಡಳಿತ ಯಂತ್ರ, ಪೊಲೀಸ್ ಮತ್ತು ನ್ಯಾಯಾಂಗ – ಎಲ್ಲರ ನಿದ್ದೆಯನ್ನು ಕೊಡವಿ ಎದ್ದೇಳುವಂತೆ ಮಾಡಿದೆ. ಸಮಸ್ಯೆಯ ಗಂಭೀರತೆಯ ಬಗ್ಗೆ ಸಾರ್ವಜನಿಕರ ಗಮನ ಸೆಳೆದಿರುವುದು ಹೆಣ್ಣುಮಕ್ಕಳಿಗೆ ಕೊಂಚ ಮಾನಸಿಕ ಧೈರ್ಯ ಕೊಟ್ಟಿದೆ. ಆದರೂ ಈ ಸಂದರ್ಭದಲ್ಲಿ ಈ ಸಮಸ್ಯೆಯನ್ನು ಕುರಿತು ನಡೆಯುತ್ತಿರುವ ಚರ್ಚೆಯಲ್ಲಿ ಹೆಣ್ಣಿನ ಪರವಾಗಿ ಕಾರ್ಯಪ್ರವೃತ್ತರಾದ ಜನರು ಅಪರಾಧಿಗೆ ಎಂತಹ ಶಿಕ್ಷೆಯಾಗಬೇಕು ಹಾಗೂ ನ್ಯಾಯಾಲಯಗಳು ಮತ್ತು ಪೊಲೀಸ್ ವ್ಯವಸ್ಥೆ ಹೇಗೆ ಕಾರ್ಯ ನಿರ್ವಹಿಸಬೇಕು ಮತ್ತು ಹೆಣ್ಣಿನ ಸುರಕ್ಷಿತತೆಗೆ ಎಂತಹ ಕ್ರಮಗಳನ್ನು ತೆಗೆದುಕೊಳ್ಳಬೇಕು, ಎಂಬ ವಿಷಯಗಳ ಬಗ್ಗೆ ನಡೆಸುತ್ತಿರುವ ಚರ್ಚೆಯಲ್ಲಿ ಎಷ್ಟೇ ಅತಿರೇಕಗಳಿದ್ದರೂ ಆ ವಾದ ಮಂಡಿಸುತ್ತಿರುವವರ ಸಿಟ್ಟು, ಆಕ್ರೋಶ ಮತ್ತು ಕಾಳಜಿಗಳನ್ನು ಅರ್ಥಮಾಡಿಕೊಳ್ಳಬಹುದು. ಆದರೆ ಸಮಾಜದಲ್ಲಿ ಅತ್ಯಾಚಾರ ನಡೆಯಲು ಕಾರಣಗಳನ್ನು ಸಂಶೋಧಿಸುತ್ತಾ ಹೆಣ್ಣು ಹೇಗೆ ಬಾಳಬೇಕು, ಎಂದು ನೀತಿಬೋಧೆ ಮಾಡಹೊರಟಿರುವ ಬುದ್ಧಿಭ್ರಮಣೆಗೊಂಡ, ಕ್ರೂರ ಹೃದಯಿಗಳಾದ ಆರ್.ಎಸ್.ಎಸ್. ಮುಖಂಡರಿಗೆ ಮತ್ತು ಸನಾತನವಾದಿಗಳಿಗೆ ಧಿಕ್ಕಾರ! ಅತ್ಯಾಚಾರಕ್ಕೆ ಬಲಿಯಾದವರನ್ನೇ ಕಾರಣವನ್ನಾಗಿಸುವ ವ್ಯವಸ್ಥೆಯ ಎಂದಿನ ನೀಚ ಹುನ್ನಾರವಿದು.

ಇಷ್ಟೆಲ್ಲ ಹೇಳಿದ ಮೇಲೂ ಅತ್ಯಾಚಾರದ ಸಮಸ್ಯೆ ಏಕಶಿಲಾಕಾರದ್ದಲ್ಲವಾದ್ದರಿಂದ ಅದರ ಪರಿಹಾರವು ಏಕಮುಖವಾಗಿರಲು ಸಾಧ್ಯವಿಲ್ಲ. ಸಮಾಜದಲ್ಲಿ ಹೆಣ್ಣಿಗಿರುವ ಕೆಳಸ್ಥಾನ, ಅಸಮಾನ ಸ್ತ್ರೀಪುರುಷ ಸಂಬಂಧಗಳು, ಪುತ್ರನಿಗೆ ಪ್ರಾಶಸ್ತ್ಯ ನೀಡುವ ಪಿತೃಪ್ರಧಾನ ಸಂಸ್ಕೃತಿ – ಈ ಅಂಶಗಳಿಂದ ಗಂಡಿನ ಅಡಿಯಾಳಾಗಿ ಬಾಳಬೇಕಾದ ಹೆಣ್ಣಿನ ಅವಸ್ಥೆಗೆ ಇಂದಿನ ನವ ಉದಾರೀಕರಣ ನೀತಿಯು ಸೇರಿಕೊಂಡು ಅವಳನ್ನು ಸರಕಾಗಿ ಪರಿವರ್ತಿಸಿದೆ. ಸರಕು ಸಂಸ್ಕೃತಿಯ ಜಗತ್ತಿನಲ್ಲಿ ಹೆಣ್ಣನ್ನು ಮಾರಾಟಕ್ಕಿಟ್ಟ ವಸ್ತುವಂತೆ ಪರಿಭಾವಿಸುವ ಗಂಡುಗಳಿಗೆ ಅವಳು ಭೋಗವಸ್ತು ಮಾತ್ರ. ಆಧುನಿಕ ಜಗತ್ತಿನ ಅವಕಾಶಗಳನ್ನು ಬಳಸಿಕೊಂಡು ಹೆಣ್ಣು ಹೆಚ್ಚು ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುತ್ತಿರುವ ಪ್ರಕ್ರಿಯೆಯೂ ಇದರೊಂದಿಗೆ ಸೇರಿ ಇದರಿಂದ ಗಂಡಿನ ಪುರುಷತ್ವವನ್ನು ಕೆಣಕಿದಂತಾಗಿ ಹೆಣ್ಣಿನ ಮೇಲಿನ ದೌರ್ಜನ್ಯದ ಪ್ರಕರಣಗಳು ಹೆಚ್ಚುತ್ತಿವೆ.

ಇಷ್ಟೆಲ್ಲ ಅಬ್ಬರದ ಗಲಾಟೆಯ ಹೋರಾಟವು ತನ್ನ ಬಿಸಿಯನ್ನು ಕಳೆದುಕೊಳ್ಳದಿರಬೇಕಾದರೆ ಚಳುವಳಿಯ ಗಮನವನ್ನು ಇಂದಿನ ತುರ್ತು ಅಗತ್ಯ ಕ್ರಮಗಳತ್ತ ಕೇಂದ್ರೀಕರಿಸಬೇಕು. ಸರ್ಕಾರಗಳು ತಮ್ಮ ಅಂಗಸಂಸ್ಥೆಗಳ ಮೂಲಕ ಸಮಸ್ಯೆಯನ್ನು ಪರಿಹರಿಸುವ ಸಂಕಲ್ಪ ತೋರಿಸುವಂತೆ ಒತ್ತಾಯಿಸಬೇಕು. ಈಗಾಗಲೇ ನೆನೆಗುದಿಗೆ ಬಿದ್ದಿರುವ ಅತ್ಯಾಚಾರ ವಿರೋಧಿ ಕಾನೂನಿಗೆ ತಿದ್ದುಪಡಿಗಳನ್ನು ತರುವಲ್ಲಿ ಶೀಘ್ರವಾಗಿ ಕಾರ್ಯಪ್ರವೃತ್ತವಾಗುವಂತೆ ಮಾಡಬೇಕು. ವರದಿಯಾಗುವ ಅತ್ಯಾಚಾರಿಗಳಿಗೆಲ್ಲಾ ಶಿಕ್ಷೆಯಾದರೆ ಮಾತ್ರ ಹೆಂಗಸರಿಗೆ ನ್ಯಾಯಾಂಗದ ಬಗ್ಗೆ, ಸರಕಾರದ ಬಗ್ಗೆ, ಒಟ್ಟಾರೆ ಬದುಕಿನ ಬಗ್ಗೆ ವಿಶ್ವಾಸ ಮೂಡುತ್ತದೆ. ಅದಕ್ಕಾಗಿ ನ್ಯಾಯಾಂಗ ಮತ್ತು ಪೊಲೀಸ್ ವ್ಯವಸ್ಥೆಯಲ್ಲಿರುವವರಿಗೆ ಲಿಂಗಸೂಕ್ಷ್ಮತೆಯ ತರಬೇತಿ ಅತ್ಯಂತ ಅಗತ್ಯವಾಗಿ ಬೇಕಾಗಿದೆ. ಮಕ್ಕಳಿಗೆ ಚಿಕ್ಕ ವಯಸ್ಸಿನಿಂದಲೇ ಅವರ ಪಠ್ಯಗಳ ಮೂಲಕ ಲಿಂಗ ನ್ಯಾಯದ ಮತ್ತು ಲಿಂಗಸೂಕ್ಷ್ಮತೆಯ ತಿಳುವಳಿಕೆಯನ್ನು ಹರಡಬೇಕು.

ಕೊಂಚವೂ ರಾಜಕೀಯ ಸಂಕಲ್ಪವಿಲ್ಲದ ನಮ್ಮ ಆಳುವ ಸರ್ಕಾರಗಳಿಗೆ ಮತ್ತು ರಾಜಕೀಯ ಪಕ್ಷಗಳಿಗೆ ಚುನಾವಣಾ ರಾಜಕೀಯದಲ್ಲಿ ಹೆಣ್ಣಿನ ಸಂಗತಿಗಳು ಪ್ರಮುಖವೆನಿಸುವುದೇ ಇಲ್ಲ. ಸಮಾಜದ ಅರ್ಧ ಭಾಗವಾದ ಹೆಣ್ಣಿನ ಮತವೂ ಮುಖ್ಯವಾಗಬೇಕಾದರೆ ಲಿಂಗ ನ್ಯಾಯ ದೊರಕಿಸುವುದು ರಾಜಕೀಯ ಪಕ್ಷಗಳಿಗೆ ಮುಖ್ಯವಾಗಬೇಕು, ಎಂಬ ಸಂದೇಶವನ್ನು ತಲುಪಿಸುವುದಕ್ಕೆ ಈಗ ಸಕಾಲ. ದೆಹಲಿಯಲ್ಲಿ ಬೀದಿಗಳಲ್ಲಿ ನಡೆದ ಬೃಹತ್ ಮೆರವಣಿಗೆ, ದೇಶದ ಉದ್ದಗಲಕ್ಕೂ ಪ್ರತಿಧ್ವನಿಸಿದ ಅದರ ಮಾರ್ದನಿ ಮಹಿಳೆಯರಿಗೆ ಸುರಕ್ಷತೆ ಮತ್ತು ನ್ಯಾಯ ದೊರಕಿಸುವ ಹೋರಾಟವಾಗಿ ಪರಿವರ್ತಿತವಾಗಬೇಕಲ್ಲದೆ ಸಮಾಜದಲ್ಲಿ ಅವಳಿಗಿರುವ ಅಸಮಾನ ಸ್ಥಾನಮಾನವನ್ನು ಬದಲಾಯಿಸುವತ್ತ ಹೆಜ್ಜೆ ಹಾಕಬೇಕಿದೆ. ಈ ವರ್ಷವನ್ನು 'ಹೆಣ್ಣಿನ ಸುರಕ್ಷತಾ ವರ್ಷ'ವನ್ನಾಗಿ ಆಚರಿಸಲು ಕರೆ ನೀಡಲಾಗಿದೆ. ಈ ಆಚರಣೆಗೆ ಅರ್ಥ ತುಂಬಬೇಕಾದರೆ ಹೆಣ್ಣಿನ ಸಮಸ್ಯೆಯನ್ನು ಇಡೀ ಸಮಾಜ ತನ್ನದೆಂದುಕೊಳ್ಳಬೇಕು. ಹೆಣ್ಣು ಕೇವಲ ತಾಯಿ, ಸೋದರಿ, ಹೆಂಡತಿ ಮತ್ತು ಮಗಳು ಮಾತ್ರವಲ್ಲ, ಅವಳನ್ನು ಪ್ರಜ್ಞಾವಂತ ಪ್ರಜೆಯನ್ನಾಗಿ ರೂಪಿಸುವ ಆಕಾಂಕ್ಷೆ ಮತ್ತು ಪ್ರಯತ್ನ ಈ ಆಚರಣೆಯ ಉದ್ದೇಶವಾಗಬೇಕು. ಆಗ ಉಳಿದೆಲ್ಲ ಸಮಸ್ಯೆಗಳೊಂದಿಗೆ ಲೈಂಗಿಕ ಭಯೋತ್ಪಾದನೆಯ ವಿರುದ್ಧ ಹೋರಾಡಿ ಜಯ ಗಳಿಸುವುದು ಸಾಧ್ಯವಾದೀತು.

ಗಾಯತ್ರಿ. ಎಸ್.

## ಪಾಕೀಸ್ತಾನದ ವರ್ತನೆ ಖಂಡನೀಯ

**ಭಾ**ರತ-ಪಾಕಿಸ್ತಾನಗಳ ನಡುವೆ ಸಂಬಂಧಗಳು ಸುಧಾರಿಸೀತು ಎಂಬ ಭಾವನೆ ಬರುತ್ತಿರುವಾಗ ಏನಾದರೊಂದು ಉಪಟಳವಾಗಿ ಪರಿಸ್ಥಿತಿ ಬಿಗಡಾಯಿಸುತ್ತದೆ. ಇದು ಅರವತ್ತೈದು ವರ್ಷಗಳಿಂದಲೂ ನಡೆದುಬಂದದ್ದೆ. ಮತೀಯ ಆಧಾರದ ಮೇಲೆ ದೇಶವಿಭಜನೆ ಮಾಡಿಹೋದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ನಮಗೆ ಕೊಟ್ಟಿರುವ ಬಳುವಳಿ. ಪಾಕಿಸ್ತಾನದಲ್ಲಿ ನಾಗರಿಕ ಪ್ರಜಾ ಸರಕಾರ ಇರಲಿ ಇಲ್ಲ ಮಿಲಿಟರಿ ಸರ್ವಾಧಿಕಾರ ಇರಲಿ ಎಲ್ಲ ಒಂದೇ. ಮುಕ್ಕಾಲು ವಾಸಿ ಮಿಲಿಟರಿ ಸರ್ವಾಧಿಕಾರದಲ್ಲೇ ಇರುವ ನಮ್ಮ ನೆರೆ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವದ ಆಡಳಿತೆ ಸ್ಥಿರಗೊಳ್ಳಲು ಅವಕಾಶವೇ ಆಗಿಲ್ಲ. ಇದೀಗ ಮತ್ತೆ ಬಿಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದೆ ಪಾಕಿಸ್ತಾನ. ಈ ಬಾರಿ ನ್ಯಾಯಾಂಗ- ಕಾರ್ಯಾಂಗಗಳ ಮಧ್ಯೆ ಗುದ್ದಾಟ. ಸೇನಾಪಡೆ ಅಡ್ಡಗೋಡೆಯ ಮೇಲೆ ಕುಳಿತು ತಮಾಷೆ ನೋಡುತ್ತಿದೆ.

ಪಾಕಿಸ್ತಾನದಲ್ಲಿ ಯಾವಾಗಲೂ ಸೇನೆಯದೇ ಮೇಲುಗೈ. ಪ್ರಾಯಶಃ ಪಾಕಿಸ್ತಾನದಲ್ಲಿ ಪ್ರಧಾನಿಯ ದಸ್ತಗಿರಿಗೆ ದೇಶದ ಸರ್ವೋಚ್ಚ ನ್ಯಾಯಾಲಯ ಹೊರಡಿಸಿರುವ ಹಿನ್ನೆಲೆಯಲ್ಲೇ ಕಾಶ್ಮೀರದ ಗಡಿಯಲ್ಲಿ ಭಾರತದ ಗಡಿಯೋಧರ ಮೇಲೆ ಅಮಾನುಷ ಹಲ್ಲೆ ನಡೆಯಿತೇನೋ? ಶಿರಚ್ಛೇದನ ಮಾಡಿ ದೇಹದಂಡನೆ ಮಾಡಿ ಇಡೀ ಭಾರತದ ಜನ ರೊಚ್ಚಿಗೇಳುವಂತೆ ಮಾಡಿರುವ ಘಟನೆ ಇದು. ಈ ಪಾತಕ ಕೃತ್ಯವನ್ನು ಪಾಕಿಸ್ತಾನಿ ಸೈನಿಕರು ಎಸಗಿಲ್ಲ ಎಂದು ಪಾಕ್ ಸರಕಾರ ಹೇಳುತ್ತಿರುವುದು ಹಸೀ ಸುಳ್ಳು. ಇಂಥ ಘಟನೆಗಳು ಹೊಸವೇನಲ್ಲ. ಹಿಂದೆಯೂ ನಡೆದಿವೆ. ಆದರೆ ಈ ಸಲ ನಡೆದಿರುವ ಘಟನೆ ಹೆಚ್ಚು ಅಮಾನುಷ, ಖಂಡನೀಯ. ಪಾಕ್ ಸರಕಾರ ಜಾರಿಕೊಳ್ಳಲು ಏನೇ ಸಬೂಬು ಹೇಳಿದರೂ ಈ ದುಷ್ಕೃತ್ಯಕ್ಕೆ ಅದೇ ಹೊಣೆ.

ಇದಕ್ಕೆ ಪರಿಹಾರವೇನು? ಭಾರತ ಇಂಥ ಪ್ರಚೋದನಕಾರಿ ಕೃತ್ಯಗಳನ್ನು ಸಹಿಸಿ ಕೊಂಡಿರಬೇಕೆ? ಇದಕ್ಕೆ ಯಾವ ರೀತಿ ಪ್ರತಿಕ್ರಿಯಿಸಬೇಕು? ಇದು ಈಗ ಮುಂದಿರುವ ಪ್ರಶ್ನೆ. ಪ್ರತಿ ಪಕ್ಷದಲ್ಲಿರುವ ಭಾಜಪ ನಾಯಕರುಗಳು ಅಬ್ಬರಿಸುತ್ತಿರುವಂತೆ ಪಾಕಿಸ್ತಾನಕ್ಕೆ ಬುದ್ಧಿ ಕಲಿಸಲು ಯುದ್ಧ ನಡೆಸುವುದಂತೂ ಪರಿಹಾರವಲ್ಲ. ಇದುವರೆಗೆ ನಾಲ್ಕು ಬಾರಿ ಸಶಸ್ತ್ರ ಸಮರ ಪೂರ್ಣ ಪ್ರಮಾಣದಲ್ಲಿ ನಡೆದಿದ್ದರೂ ಅದರಿಂದ ಏನೂ ಪ್ರಯೋಜನ ವಾಗಿಲ್ಲ ಎಂಬುದು ಅನುಭವದಿಂದ ತಿಳಿದಿದೆ. ಇನ್ನು ಪಾಕಿಸ್ತಾನ ಯಾವತ್ತೂ ಸೂಚಿಸುತ್ತ ಬಂದಿರುವಂತೆ ಅಮೆರಿಕದ ಮಧ್ಯಸ್ಥಿಕೆಯಿಂದ ಯಾವ ಪ್ರಯೋಜನವೂ ಆಗದು. ಯಾಕೆಂದರೆ ಅಮೆರಿಕ ತನ್ನ ಬೇಳೆ ಬೇಯಿಸಿಕೊಳ್ಳಲು ನೋಡುತ್ತದೆಯೇ ಹೊರತು ಬೇರೇನೂ ಆಗುವುದಿಲ್ಲ. ಅಂತರರಾಷ್ಟ್ರೀಯ ವಿದ್ಯಮಾನವನ್ನು ಅವಲೋಕಿಸುವವರಿಗೆ ಅದು ತಿಳಿಯದ್ದೇನಲ್ಲ. ಆದರೆ ಇದು ಪಾಕಿಸ್ತಾನಕ್ಕೂ ಬೇಕು, ಅಮೆರಿಕಾಗೂ ಬೇಕು. ಭಾರತದ ಮೇಲೆ ಇನ್ನಷ್ಟು ಒತ್ತಡ ತರುವುದಕ್ಕೆ ಅಮೆರಿಕಾಗೆ ಪರವಾನಗಿ ನೀಡಿದಂತಾಗುತ್ತದೆ. ಒಂದು ಬಗೆಯಲ್ಲಿ ಪಾಕಿಸ್ತಾನದಂಥ ನೆರೆಯನ್ನು ಪಡೆದುಕೊಂಡಿರುವ ಭಾರತ ಉದ್ರಿಕ್ತ ವಾತಾವರಣದಲ್ಲೇ ಇರಬೇಕಾದೀತೋ ಏನೋ! ಏನೇ ಆಗಲಿ ಗಡಿಯಲ್ಲಿ ಭಾರತ ಬಂದೋಬಸ್ತನ್ನು ಇನ್ನಷ್ಟು ಭದ್ರಗೊಳಿಸಬೇಕಾದ್ದು ಅಗತ್ಯವಾಗಿದೆ. ಆದ್ದರಿಂದ ಪ್ರಚೋದನಕಾರಿ ಕೃತ್ಯಗಳಿಂದ ಪ್ರಯೋಜನವಿಲ್ಲ. ಪಾಕಿಸ್ತಾನದ ಮೇಲೆ ಅಂತರರಾಷ್ಟ್ರೀಯ ಒತ್ತಡ ತಂದು ಅದು ನಾಗರಿಕ ರೀತಿಯಲ್ಲಿ ವರ್ತಿಸುವಂತೆ ಮಾಡಲು ಭಾರತ ಪ್ರಯತ್ನ ಮಾಡಬೇಕಾಗಿದೆ.

ಭಾರತದ ಭೂಸೇನಾನಿ ಪಾಕಿಸ್ತಾನಕ್ಕೆ ಎಚ್ಚರಿಕೆಯ ಸಂದೇಶ ನೀಡಿರುವುದು ಸಹಜವಾದ ಪ್ರತಿಕ್ರಿಯೆ. ಸೇನಾಪಡೆಯ ನೈತಿಕ ಬಲವರ್ಧನೆಗೆ ಅದು ಅಗತ್ಯವೂ ಹೌದು. ಆದರೆ ಅದೇ ಸಮಯದಲ್ಲಿ ನಮ್ಮ ಸೇನಾಧಿಕಾರಿಗಳು ಇಂಥ ಘಟನೆಗಳು ಸಂಭವಿಸದಂತೆ ತಡೆಯಲು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಪ್ರಧಾನಿ ಮನಮೋಹನ ಸಿಂಗ್ ಮೌನ ಮುರಿದು ಪಾಕಿಸ್ತಾನಿ ಆಡಳಿತಕ್ಕೆ ಮುಂದೆ ಎಂದಿನಂತೆ ವ್ಯವಹಾರಗಳ ನಿರೀಕ್ಷಣೆ ಸಾಧ್ಯವಿಲ್ಲ ಎಂಬ ಸಂದೇಶ ರವಾನಿಸಿದ್ದಾರೆ. ಈಗಾಗಲೇ ಜಮ್ಮು-ಕಾಶ್ಮೀರ ಗಡಿಯಲ್ಲಿ ಎಲ್ಲ ವ್ಯವಹಾರಗಳೂ ಸ್ಥಗಿತಗೊಂಡಿವೆ. ಇದರಿಂದ ಎರಡೂ ಕಡೆಯವರಿಗೆ ತೊಂದರೆ ಯಾದರೂ ಅದು ಅನಿವಾರ್ಯ. ಪಾಕಿಸ್ತಾನಿ ಆಡಳಿತ ಈ ದುಷ್ಕೃತ್ಯವನ್ನು ಹಿಂದಿಟ್ಟು ಕೊಳ್ಳುವುದಕ್ಕೆ ಪ್ರತಿಯಾಗಿ, ತಪ್ಪಿತಸ್ಥರ ಮೇಲೆ ಕ್ರಮ ಜರುಗಿಸಿ ಭಾರತಕ್ಕೆ ಸೂಕ್ತ ಭರವಸೆ ನೀಡುವುದೊಂದೇ ಮಾರ್ಗ. ಇದು ಪಾಕಿಸ್ತಾನಕ್ಕೂ ಕ್ಷೇಮ, ಭಾರತಕ್ಕೂ ಕ್ಷೇಮ. ಭಾರತದಲ್ಲಿ ಭಯೋತ್ಪಾದಕ ಕೃತ್ಯಗಳನ್ನು ನಡೆಸಿರುವ ಪಾತಕಿಗಳನ್ನು ಮಟ್ಟಹಾಕದೇ ಹೋಗಿರುವ ಪಾಕಿಸ್ತಾನ ತಾನೇ ಅದರ ಜಾಲದಲ್ಲಿ ಸಿಕ್ಕಿಹಾಕಿಕೊಂಡಿದೆ. ಪಾಕಿಸ್ತಾನದಲ್ಲಿ ಭಯೋತ್ಪಾದಕ ಕೃತ್ಯಗಳು ಈಗ ಸುದ್ದಿಯೇ ಅಲ್ಲ, ಅಷ್ಟು ಸಲೀಸಾಗಿಬಿಟ್ಟಿವೆ ಪ್ರಕರಣಗಳು. ಇಷ್ಟಾದರೂ ಪಾಕಿಸ್ತಾನದ ಆಡಳಿತ ಪಾಠ ಕಲಿಯದಿರುವುದು ಶೋಚನೀಯ. ಇನ್ನಾದರೂ ಇಂಥ ನೀಚ ಕೃತ್ಯಗಳು ನಡೆಯದಂತೆ ಕ್ರಮ ಕೈಗೊಳ್ಳಲಿ.

---

*ಈ ತಿಂಗಳು* *(೩ನೇ ಪುಟದಿಂದ)*

ಕಳೆದ ಮೂರು-ನಾಲ್ಕು ತಿಂಗಳಿಂದ ಬೆಂಗಳೂರಿನಲ್ಲಿ ಕಸ ವಿಲೇವಾರಿ ಒಂದು ದೊಡ್ಡ ಅವಾಂತರ. ಇಷ್ಟು ದಿನ ಇಲ್ಲದ್ದು ಈಗ ಧುತ್ತೆಂದು ಈ ಸಮಸ್ಯೆ ಎದುರಾಗಿದೆ. ಈ ಪ್ರಶ್ನೆಗೆ ನಗರಪಾಲಕರಿಂದ ಉತ್ತರ ಇದುವರೆಗೆ ದೊರೆತಿಲ್ಲ. ಅಧಿಕಾರಿಗಳು ಕಂಟ್ರಾಕ್ಟರುಗಳ ಮೇಲೆ, ಕಂಟ್ರಾಕ್ಟರುಗಳು ಅಧಿಕಾರಿಗಳ ಮೇಲೆ ಕೆಸರೆರಚಿ ಕೊಳ್ಳುತ್ತಿದ್ದಾರೆ. ಸರಕಾರ-ಮೇಯರ್-ಕಾರ್ಪೊರೇಟರುಗಳು ವಾಯಿದೆ, ಭರವಸೆ ನೀಡಿ ನುಣುಚಿಕೊಳ್ಳುತ್ತಿದ್ದಾರೆ. ರಾಜ್ಯದ ಶ್ರೇಷ್ಠ ನ್ಯಾಯಾಲಯ ಒಂದಾದ ಮೇಲೊಂದು ಆದೇಶಗಳನ್ನು ನೀಡುತ್ತಲೇ ಇದೆ. ಆದರೆ ಅದಕ್ಕೆ ಸರಕಾರ, ಅಧಿಕಾರಿಗಳು ಕ್ಯಾರೇ ಅನ್ನುತ್ತಿಲ್ಲ. ಮಹಾನಗರ ಪಾಲಿಕೆಯ ಕಮೀಶನರ್‌ಅನ್ನು ಬದಲಿಸಿದರೂ ಏನೂ ಪ್ರಯೋಜನವಾಗಿಲ್ಲ. ಮಂಡೂರು, ಬಿಡದಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರದ ಗ್ರಾಮಸ್ಥರುಗಳು ಬೆಂಗಳೂರಿನ ಕಸದ ಕುಪ್ಪೆಯಾಗಲು ತಯಾರಿಲ್ಲ. ಜೋರು ಪ್ರತಿಭಟನೆ ನಡೆಸಿದ್ದಾರೆ. ರಸ್ತೆಬದಿಗಳಲ್ಲಿ ಮಾತ್ರ ವಿಲೇವಾರಿಯಾಗದ ಕಸದ ರಾಶಿ ತುಂಬಿದೆ. ಇದಕ್ಕೆ ಕೊನೆ ಯಾವಾಗ? ಭಾಜಪ ಆಡಳಿತದ ಹೊಲಸು ರಾಜಕೀಯ ರಾಜಧಾನಿ ಬೆಂಗಳೂರು ಕುಪ್ಪೆ ತೊಟ್ಟಿಯಾಗಲು ಕಾರಣವೆ ಎಂದು ಜನ ಅಂದುಕೊಳ್ಳುತ್ತಿದ್ದಾರೆ. ಸರಕಾರ ಮತ್ತು ಕಾರ್ಪೊರೇಷನ್ ಎರಡರಲ್ಲೂ ಅಧಿಕಾರದಲ್ಲಿ ಇರುವುದು ಭಾಜಪ ತಾನೆ? ಗಾರ್ಡನ್ ಸಿಟಿ ಬೆಂಗಳೂರು ಗಾರ್ಬೇಜ್ ಸಿಟಿ ಆಗಿಬಿಟ್ಟಿದೆ ಎಂದು ದೇಶವಿದೇಶಗಳಲ್ಲೂ ಪ್ರಚಾರವಾಗಿದೆ. ಇದೂ ಭಾಜಪ ಆಡಳಿತದ ಒಂದು ದಾಖಲೆ.

✶ ✶ ✶

ಈ ವರ್ಷ ನಡುವಿನಲ್ಲಿ ರಾಜ್ಯದಲ್ಲಿ ಚುನಾವಣೆ ಖಾತ್ರಿ. ಶೆಟ್ಟರ್ ಸರಕಾರ ಇರಲಿ, ಬೀಳಲಿ ಚುನಾವಣೆಯಂತೂ ಶತಸ್ಸಿದ್ಧ. ಅದಕ್ಕೆ ಈಗಾಗಲೇ ರಾಜ್ಯದ ಪ್ರಮುಖ ಪಕ್ಷಗಳು ಸಿದ್ಧತೆ ಜೋರಾಗಿ ನಡೆಸತೊಡಗಿವೆ. ಹೊಸದಾಗಿ ಸ್ಥಾಪನೆಗೊಂಡಿರುವ ಯಡಿಯೂರಪ್ಪ ಗುಂಪಿನ 'ಕಜಪ' ಗುಡುಗುತ್ತಿದೆ. ನಾನೇ ಮುಂದಿನ ಮುಖ್ಯಮಂತ್ರಿ ಎಂದು ಯಡಿಯೂರಪ್ಪ ತೊಡೆ ತಟ್ಟಿಕೊಳ್ಳುತ್ತಿದ್ದಾರೆ. ಅವರ ಎಲ್ಲ ಭರವಸೆಗಳಂತೆ ಇದೂ ಟುಸ್ ಆಗುವುದಂತೂ ನಿಜ. ಭಾಜಪ ಶೆಟ್ಟರನ್ನೇ ಮುಂದಿನ ಮುಖ್ಯಮಂತ್ರಿ ಎಂದು ಘೋಷಿಸಿಬಿಟ್ಟಿದೆ. ಕಾಂಗ್ರೆಸ್ ಈಗ ಭಾಜಪದ ವೈಫಲ್ಯಗಳ, ಒಡಕುಗಳ ಲಾಭ ಪಡೆದುಕೊಂಡು ಅಧಿಕಾರಕ್ಕೇರುವ ಕನಸು ಕಾಣುತ್ತಿದೆ. ಅದಕ್ಕಾಗಿ ಕಾಲು ನೋಯಿಸಿಕೊಂಡು ಪಾದಯಾತ್ರೆಯಲ್ಲಿ ನಿರತವಾಗಿದೆ. ಆದರೆ ಈ ಪಾದಯಾತ್ರೆ ಎಲ್ಲ ಆರಂಭಶೂರತ್ವವಾಗಿ ಪರಿಣಮಿಸಿದೆ. ಯಾವತ್ತೂ ಒಡೆದ ಮನೆಯಾಗಿರುವ ಕಾಂಗ್ರೆಸ್ಸಿನಲ್ಲಿ ಕಾರ್ಯಕರ್ತರಿಗಿಂತ ನಾಯಕರುಗಳ ಕಾರುಬಾರೇ ಜಾಸ್ತಿ. ಯುವಕರಿಗೆ ಹೆಚ್ಚು ಪ್ರಾಶಸ್ತ್ಯ ಕೊಡುವುದಾಗಿ ಎಲ್ಲ ಪಕ್ಷಗಳೂ ಹೇಳಿಕೊಳ್ಳುತ್ತವೆ. ಆದರೆ ಟಿಕೇಟು ಹಂಚಿಕೆಯ ಸಮಯ ಬಂದಾಗ ಏನಾಗುವುದೋ ಗೊತ್ತಿಲ್ಲ. ಒಟ್ಟಿನಲ್ಲಿ ಈ ಸಲದ ಚುನಾವಣೆಗಳು ತುಂಬ ಕುತೂಹಲಕಾರಿ. ಯಾರಿಗೂ ಬಹುಮತ ಬಾರದು ಎಂದು ಭವಿಷ್ಯ ಹೇಳಬಹುದು.

✶ ✶ ✶

ಜೆಫ್ರಿ ಬ್ಯಾಡರ್ ಎಂಬಾತ ಅಮೆರಿಕಾ ಸರ್ಕಾರದಲ್ಲಿ ಪೂರ್ವ ಏಷ್ಯಾ ದೇಶಗಳ ಜೊತೆಗಿನ ಸಂಬಂಧಗಳನ್ನು ಕುರಿತಂತೆ ಸಲಹೆ ನೀಡಲು ನೇಮಕಗೊಂಡಿರುವ ಹಿರಿಯ ನಿರ್ದೇಶಕ. ಚೀಣಾ, ಭಾರತ, ಪಾಕಿಸ್ತಾನ, ಮ್ಯೆನ್ಮಾರ್, ಬಂಗ್ಲಾದೇಶ, ಶ್ರೀಲಂಕಾ ಮುಂತಾದ ದೇಶಗಳ ವಿದ್ಯಮಾನಗಳನ್ನು ಅಧ್ಯಯನ ಮಾಡಿ, ಅಮೆರಿಕಾದ ದೃಷ್ಟಿಯಿಂದ ವಿಶ್ಲೇಷಿಸಿ ಅಧ್ಯಕ್ಷ ಒಬಾಮಾಗೆ ಸಲಹೆ ನೀಡುವುದು ಬ್ಯಾಡರ್‌ನ ಕೆಲಸ. ಆತ ಈಚೆಗೆ ಬೀಜಿಂಗಿಗೆ ಭೇಟಿ ನೀಡಿ ಅಲ್ಲಿಯ ತ್ಸಿಂಘುವಾ ವಿಶ್ವವಿದ್ಯಾನಿಲಯದಲ್ಲಿ ಒಂದು ಉಪನ್ಯಾಸ ನೀಡಿದ. ಆತನಿಗಿಂತ ಮುಂಚೆ ಈ ಸಲಹೆಗಾರನ ಸ್ಥಾನದಲ್ಲಿದ್ದವರು ಹೇಳಿದ್ದರಂತೆ – ಅಮೆರಿಕಾವು ಪೂರ್ವ ಮತ್ತು ಆಗ್ನೇಯ ಏಷ್ಯಾದಲ್ಲಿ ಸಾಕಷ್ಟು ಆಸಕ್ತಿ ವಹಿಸದಿದ್ದುದು ಸರಿಯಲ್ಲ, ಎಂದು. ಅದನ್ನು 'ಸರಿ' ಮಾಡಲು ಈತ ಉದ್ಯುಕ್ತನಾಗಿದ್ದಾನೆ. ಚೀಣಾ ಮತ್ತು ಭಾರತ ಈ ಪ್ರದೇಶದಲ್ಲಿ ಬೃಹತ್ತಾಗಿ ಬೆಳೆಯುತ್ತಿರುವುದರಿಂದ, ಬ್ಯಾಡರ್ ಪ್ರಕಾರ ಈ ಭಾಗದ ಚಿಕ್ಕ ರಾಷ್ಟ್ರಗಳು (ಪಾಕಿಸ್ತಾನ, ನೇಪಾಲ, ಬಂಗ್ಲಾದೇಶ, ಮ್ಯೆನ್ಮಾರ್, ಇತ್ಯಾದಿ) ಆತಂಕವನ್ನು ಅನುಭವಿಸುತ್ತಿವೆಯಂತೆ, ಆದ್ದರಿಂದ ಅವರ ಬೆನ್ನಿಗೆ ನಿಂತು ರಕ್ಷಣೆ ನೀಡುವ ಹೊಣೆ ಅಮೆರಿಕಾದ್ದು; ಎರಡು ದೊಡ್ಡ ದೇಶಗಳ ನಡುವೆ ಸಿಕ್ಕಿಕೊಂಡು ''ವಿಲವಿಲನೆ ಒದ್ದಾಡುವ ಪರಿಸ್ಥಿತಿಯಲ್ಲಿ'' ಚಿಕ್ಕ ದೇಶಗಳು ಬೇರೊಂದು ದೊಡ್ಡ ದೇಶವಾದ ಅಮೆರಿಕಾಕ್ಕೆ ಸ್ವಾಗತ ನೀಡುತ್ತವೆಂದು ಬ್ಯಾಡರ್ ಹೇಳಿದ್ದಾನೆ. ಗಮನಿಸಿ, ಇದನ್ನೆಲ್ಲಾ ಆತ ಹೇಳಿದ್ದು ಬೀಜಿಂಗಿನ ಒಂದು ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸ ನೀಡುವಾಗ. ಸಿಂಹದ ಗವಿಗೆ ನುಗ್ಗಿ ಸಿಂಹಕ್ಕೆ ಎಚ್ಚರಿಕೆ ನೀಡುವ ಮಾದರಿ ಇದು. ಬ್ಯಾಡರ್ ವಾಷಿಂಗ್‌ಟನ್ನಿನಲ್ಲಿ ಇರುವ ಬ್ರೂಕಿಂಗ್ಸ್ ಇನ್‌ಸ್ಟಿಟ್ಯೂಶನ್‌ನಲ್ಲಿ ಉನ್ನತ

ಸಮಾಲೋಚಕ. ಅಮೆರಿಕಾದ ವಿದೇಶಾಂಗ ನೀತಿಯನ್ನು ರೂಪಿಸುವುದರಲ್ಲಿ ದೊಡ್ಡಪಾಲು ಈ ಸಂಸ್ಥೆಗಿದೆ. ಚೀಣಾದೊಡನೆ ಉತ್ತಮ ಬಾಂಧವ್ಯ ತನ್ನ ದೇಶಕ್ಕೆ ಬೇಕು, ಅದು ಬೆಳೆಯುತ್ತಿದೆ, ಎಂದು ಸಹ ಆತ ಉಪನ್ಯಾಸದಲ್ಲಿ ಹೇಳಿದ್ದಾನೆ. ''ಚಿಕ್ಕ ರಾಷ್ಟ್ರಗಳಿಗೆ ಆತಂಕ ಒಡ್ಡುವ'' ಚೀಣಾದೊಡನೆ ಒಳ್ಳೆಯ ಬಾಂಧವ್ಯ ಒಂದು ಕಡೆ, ಆತಂಕಕ್ಕೀಡಾಗಿವೆಯೆನ್ನಲಾದ ಚಿಕ್ಕ ರಾಷ್ಟ್ರಗಳಿಗೆ ಅಭಯಹಸ್ತ ನೀಡುವ ದೊಡ್ಡ ಅಮೆರಿಕಾ ಇನ್ನೊಂದು ಕಡೆ. ಏನಿದು ತಂತ್ರಗಾರಿಕೆಯೆಂಬ ಸಂಶಯ ಅನಿವಾರ್ಯ. ಚೀಣಾಕ್ಕೆ ಉಪದ್ರವ ನೀಡಲು ಅಮೆರಿಕಾ ಇಚ್ಛಿಸುವುದಿಲ್ಲವೆಂದು ಸಹ ಆತ ಹೇಳಿದ್ದಾನೆ. ಕಡೆಯಲ್ಲಿ ಆತ ಹೇಳಿದ ಮಾತು ಗಮನಾರ್ಹ: ''ಸೋವಿಯೆತ್ ಒಕ್ಕೂಟವನ್ನು ಬಗ್ಗುಬಡಿಯಬೇಕೆಂದು ಅಮೆರಿಕಾ ಬಯಸಿತ್ತು; ಆ ದಶಕಗಳಲ್ಲಿ ಬೆಳೆದವನು ನಾನು. ಆಗಿನ ಉದ್ದೇಶ ಸ್ಪಷ್ಟವಿತ್ತು. ಸೋವಿಯೆತ್ ಸಾಮ್ರಾಜ್ಯವನ್ನು ಪತನಗೊಳಿಸುವುದು. ಅದಕ್ಕಾಗಿ ರಾಜಕೀಯ ಮತ್ತು ಮಿಲಿಟರಿ ಸಹಯೋಗವನ್ನು ಬೇರೆ ದೇಶಗಳೊಡನೆ ಬಯಸಿದೆವು ಮತ್ತು ಪಡೆದೆವು. ಒಟ್ಟಿನಲ್ಲಿ ಆ ಸಾಮ್ರಾಜ್ಯವನ್ನು ಉರುಳಿಸಬೇಕಿತ್ತು – ಆದರೆ ಚೀಣಾದ ಬಗ್ಗೆ ಇಂದು ನಾವು ಅಂತಹ ಉದ್ದೇಶ ಹೊಂದಿಲ್ಲ''

– ಸೋವಿಯೆತ್ ಒಕ್ಕೂಟದ ೧೯೮೦ರ ದಶಕದ ಚರಿತ್ರೆಗೆ ಬ್ಯಾಡರ್ ಈಗ ಅಡಿಟಿಪ್ಪಣಿ ಬರೆಯುತ್ತಿದ್ದಾನೆ, ಆದರೆ ಅಮೆರಿಕಾದ ಕುತಂತ್ರ ಅಂದೇ ಬಯಲಾಗಿತ್ತು. ಪ್ರಶ್ನೆ ಅದಲ್ಲ, ಈಗಿನ ಪ್ರಶ್ನೆ ಇದು: ಭಾರತದೊಡನೆ ಸ್ನೇಹ ಬೆಸೆಯುವ ಸೋಗಿನಲ್ಲಿ ಅಮೆರಿಕಾ ಈಗ ಇನ್ನೆಂತಹ ಕುಟಿಲೋಪಾಯಗಳಲ್ಲಿ ತೊಡಗಿದೆ ಮತ್ತು ಯಾವ ದೇಶ ಅಥವಾ ದೇಶಗಳ ವಿರುದ್ಧ ಕತ್ತಿ ಮಸೆಯುತ್ತಿದೆ? ಕತ್ತಿ ಮಸೆಯಲು ಭಾರತವು ಸಾಣೆಕಲ್ಲಾಗುವುದು ಉಚಿತವೆ? ಮುಂದಾಲೋಚನೆ ಮಾಡೋಣ.

✶ ✶ ✶

ಮುಖ್ಯಮಂತ್ರಿ ಶೆಟ್ಟರ ಅವರು ಚಾಮರಾಜನಗರಕ್ಕೆ ಭೇಟಿ ನೀಡಿದರಂತೆ. ಯಾವುದೇ ನಗರಕ್ಕೆ ಹೋಗಿ ಬರಲು ಅವರಿಗೆ ಯಾರ ಅಪ್ಪಣೆಯೂ ಬೇಕಿಲ್ಲ, ಹಾಗೆ ಹೋಗಿಬರುವುದು ದೊಡ್ಡ ಸುದ್ದಿಯಾಗಬೇಕಾಗಿಯೂ ಇಲ್ಲ, ಹೆಚ್ಚೆಂದರೆ ಸದರಿ ನಗರದ ಒಂದೆರಡು ರಸ್ತೆಗಳು ತಾತ್ಕಾಲಿಕವಾಗಿ ಸ್ವಚ್ಛವಾಗಬಹುದು ಅಷ್ಟೆ. ಆದರೆ ಶೆಟ್ಟರ ಚಾಮರಾಜನಗರಕ್ಕೆ ಹೋಗಿಬಂದುದರ ಪೂರ್ವಾಪರಗಳ ವಿಶ್ಲೇಷಣೆ ಮಾಡಲು, ಅವರ ಭವಿಷ್ಯವು ಕತ್ತಲಲ್ಲಿ ಲೀನವಾಗಬಹುದೇ ಎಂಬುದನ್ನು ಚರ್ಚಿಸಲು ಯಾವುದೋ ದೂರದರ್ಶನದ ಚಾನೆಲ್ ಒಂದು ಚರ್ಚೆಯನ್ನು ಏರ್ಪಡಿಸಿದ್ದಿತಂತೆ. ಅದರಲ್ಲಿ ಭಾಗಿಯಾಗಲು ತಮಗೆ ಆಹ್ವಾನ ಬಂದಿದ್ದಿತೆಂದೂ, ತಾವು ಹೋಗಲಿಲ್ಲವೆಂದೂ ಡಾ॥ ವಿಜಯಾ ತಿಳಿಸಿದರು. ಇಂತಹ ನಿಷ್ಫಲ ಚರ್ಚೆಯ ಹಿಂದೆ ಏನು ತಂತ್ರವಿದ್ದಿರಬಹುದು? ''ಚಾಮರಾಜನಗರದ ಮೇಲೆ ಮತ್ತೊಮ್ಮೆ ಗೂಬೆ ಕೂರಿಸುವುದು'' ಎಂಬುದು ಅವರ ಅಭಿಮತ.

– ನಮ್ಮ ರಾಜ್ಯದ ರಾಜಕಾರಣ ಎಷ್ಟು ಅವನತಿ ಹೊಂದಿದೆ, ಎಷ್ಟು ಕಲುಷಿತಗೊಳ್ಳುತ್ತಿದೆ, ಎಂತಹ ಮೌಢ್ಯದ ಆಗರವಾಗುತ್ತಿದೆ, ಎಂಬುದಕ್ಕೆಲ್ಲಾ ಇದೊಂದು ನಿದರ್ಶನ. ಅಂತಹ ಬೇರೆ ನೂರು ನಿದರ್ಶನಗಳು ಜನತೆಯ ಮುಂದಿವೆ. ಚಾಮರಾಜ ನಗರಕ್ಕೆ ಹೋದ ಮುಖ್ಯಮಂತ್ರಿಗಳೆಲ್ಲಾ ಕುರ್ಚಿ ಕಳೆದುಕೊಳ್ಳುತ್ತಾರೆಂಬ ಶುದ್ಧ ಅತಾರ್ಕಿಕ ಮಾತನ್ನು ಉಚ್ಚರಿಸುವುದೇ ಘೋರ ರಾಜಕಾರಣ. ಆ ನಗರ ನಮ್ಮ ರಾಜ್ಯದ ಭಾಗ, ಅಲ್ಲಿಯ ನಾಗರಿಕರು ಮತ ಚಲಾಯಿಸುತ್ತಾರೆ; ಹಾಗಿರುವಾಗ ಮಂತ್ರಿ ಅಲ್ಲಿಗೆ ಹೋಗುವುದು ಒಂದು ಕರ್ತವ್ಯ. ಶೆಟ್ಟರ ಅವರನ್ನು ಯಾವ ಮದಗಜವೂ ತುಳಿದುಹಾಕುವುದಿಲ್ಲ, ಅವರ ಹಿಂದೆ -ಮುಂದೆ ರಕ್ಷಣೆ ನೀಡುವ ಸಿಬ್ಬಂದಿ ಇರುವುದಿಲ್ಲವೆ? ಯಾವುದೋ ದೊಡ್ಡ ಆಸ್ಪತ್ರೆ ಇತ್ತಂತೆ. ಅಲ್ಲಿ ಐದನೆಯ ಮಹಡಿಯ ರೋಗಿಗಳೆಲ್ಲಾ ಗುಣಮುಖರಾಗಿ ಮನೆಗಳಿಗೆ ಹಿಂದಿರುಗುತ್ತಿದ್ದರು ಮತ್ತು ನೆಲಮನೆಯ ವಾರ್ಡುಗಳ ರೋಗಿಗಳು ಸತ್ತು ಹೆಣಗಳು ಹೊರಹೋಗುತ್ತಿದ್ದವು. ಇದೊಂದು ಅವಲೋಕನ, ವಾಸ್ತವ. ''ಆದ್ದರಿಂದ ನೆಲಮನೆಯ ವಾರ್ಡಿಗೆ ಹೋಗಬೇಡಿ'' ಎಂಬ ಉಪದೇಶ ನೀಡುವ ಧೂರ್ತ ತಾರ್ಕಿಕ ಹುಟ್ಟಿಕೊಂಡ. ಜನರಿಗೆ ನಿಜಾಂಶ ತಿಳಿಯುವುದಿಲ್ಲವೆ? ತುರ್ತು ಶುಶ್ರೂಷೆ ಬೇಕಾದವರು ನೆಲಮನೆಯ ವಾರ್ಡುಗಳಿಗೆ, ಕಡಿಮೆ ಪ್ರಮಾಣದ ರೋಗಿಗಳು ಐದನೆಯ ಮಹಡಿಗೆ ಪ್ರವೇಶ ಪಡೆಯುತ್ತಾರೆ. ಅದು ಆಸ್ಪತ್ರೆಯ ಆಡಳಿತದ ವಿಧಾನ. ತುರ್ತುನಿಗಾ ಬೇಕಾಗಿದ್ದವರು ಸ್ಮಶಾನದಲ್ಲಿ ಒಂದು ಕಾಲಿರಿಸಿಯೇ ಆಸ್ಪತ್ರೆಗೆ ಬಂದಿದ್ದಾರೆ, ಐದನೆಯ ಮಹಡಿಯ ರೋಗಿಗಳು ಶೀತವೋ ವಾತವೋ ಎಂದು ತಪಾಸಣೆಗೆ ಬಂದಿದ್ದಾರೆ. ಇದರಲ್ಲಿ ನೆಲಮನೆಯ ವಾರ್ಡಿನ ಪಾತ್ರವೇನೂ ಇಲ್ಲ, ಅಲ್ಲಿ ಪ್ರವೇಶ ಪಡೆಯುವ ರೋಗಿಯನ್ನು ಐದನೆಯ ಮಹಡಿಗೆ ಕಳಿಸಿದರೆ ದಾರಿಯಲ್ಲೇ ಗೋವಿಂದ ಆದರೆ ಆಶ್ಚರ್ಯವಿಲ್ಲ! ಚಾಮರಾಜನಗರದ ಕತೆ ಇಂಥದೇ ಅಲ್ಲವೆ? ಶೆಟ್ಟರ್ ಅವರು ''ಸ್ವಸಾಮರ್ಥ್ಯ''ದಿಂದ ಪದವಿ ಕಳೆದುಕೊಳ್ಳಲು ಉಜ್ವಲ ಸಾಧ್ಯತೆ ಹೊಂದಿರುವಾಗ ಚಾಮರಾಜನಗರ ಏನು ಮಾಡೀತು! ಹಾಗೆ ಪದವಿ ಕಳೆದುಕೊಂಡಾಗ ತನ್ನದೇನೂ ಪಾತ್ರವೇ ಇಲ್ಲವೆಂಬ ನಾಟಕ, ಶೆಟ್ಟರ ಅವರ ಯೋಜನೆ. ಎಂಥಾ ಒಳ್ಳೆಯ ಮಂತ್ರಿ, ಪಾಪ, ಚಾಮರಾಜನಗರಕ್ಕೆ ಹೋಗಿ ಮುಖ್ಯಮಂತ್ರಿ ಪದವಿ ಕಳೆದುಕೊಂಡ ಎಂದು ಜನ ಉದ್ಗರಿಸಬೇಕೇನು? ಬದಲಾಗಿ, ಜನ ಮಂತ್ರಿಗೆ ಛೀಮಾರಿ ಹಾಕುತ್ತಾರೆ ಮತ್ತು ಚಾಮರಾಜ ನಗರದ ಜನ ''ನಿನ್ನ ಅರ್ಹತೆ, ನಿನ್ನ ಯೋಗ್ಯತೆ, ಎರಡೂ ಒಟ್ಟಿಗೆ ಸಾಬೀತಾಯಿತು, ನೀನು ಹಾಳಾಗು'' ಎಂದು ಬೆರಳುಗಳಿಂದ ನಟಿಕೆ ತೆಗೆಯಬಹುದು, ಅಷ್ಟೆ. ಶೆಟ್ಟರ - ಯಡಿಯೂರಪ್ಪ ರಾಜಕೀಯದಲ್ಲಿ ಚಾಮರಾಜ ನಗರಕ್ಕೇನೂ ಪಾತ್ರವಿಲ್ಲ, ಏನಾದರೂ ಇದ್ದರೆ ಸುತ್ತೂರಿನ ಪಾತ್ರವಿರಬಹುದು. ಹಾಗಿರುವಾಗ ದೂರದರ್ಶನದ ಚಿನ್ನದ್ದೋ ಬೆಳ್ಳಿಯದೋ ಒಂದು ಚಾನೆಲ್ ಶೆಟ್ಟರ ಚಾಮರಾಜನಗರಕ್ಕೆ ಪಾದ ಬೆಳೆಸಿದರೆ ''ಪರಿಣತ''ರನ್ನು ಕರೆಸಿ ಮುಕ್ಕಾಲು ಗಂಟೆ ಚರ್ಚೆ ನಡೆಸುತ್ತದಲ್ಲಾ, ಏನಾಶ್ಚರ್ಯ, ಎಂತಹ ಮೌಢ್ಯ! ಮಂತ್ರಿಗಳ ಭ್ರಷ್ಟತೆ, ಲಂಚಗುಳಿತನ, ಆಸ್ತಿಯ ಸ್ವಾಹಾ, ಸ್ವಾರ್ಥ ರಾಜಕೀಯ, ಹುಳಿತುಹೋದ ಸಂಸ್ಕೃತಿ, ಮುಂತಾದುವನ್ನು ಚರ್ಚಿಸುವುದಕ್ಕೆ ಪರ್ಯಾಯ ಚಾಮರಾಜನಗರ ಹೇಗಾದೀತು? ಈ ಮಂತ್ರಿಗಳು ಕಾಮ - ರಾಜರು. (ಕಾಮುಕ ರಾಜರೋ ಅಲ್ಲವೋ ಅದು ಅಪ್ರಸ್ತುತ). ಅವರ ಕಾಮಕ್ಕೆ ಎಲ್ಲೆಯಿಲ್ಲ: ಹಣ, ಜಮೀನು, ಉದ್ಯಮ, ಎಲ್ಲಾ ಅವರದೇ ಆಗಬೇಕೆಂಬ ಲಾಲಸೆ. ಆ ಮಲ್ಲಯುದ್ಧದಲ್ಲಿ ಜಟ್ಟಿ ಯಡಿಯೂರಪ್ಪ ಬೀಳಲಿ ಅಥವಾ ಮಹಾಪಟು ಶೆಟ್ಟರ ಬೀಳಲಿ, ಅದು ಯಾವ ನಗರದ ಪ್ರಭಾವವೂ ಅಲ್ಲ, ಯಾವ ಗ್ರಹದ ಆಣತಿಯೂ ಅಲ್ಲ, ತಿಂದು, ತೇಗಿ, ನೆಲಕ್ಕೆ ಒರಗುವ ಮಹಾನ್ ಸಾಮರ್ಥ್ಯ ಅವರದು. ಜನತೆ 'ತಥಾಸ್ತು' ಎನ್ನುತ್ತದೆ, ಅಷ್ಟೆ. ಚಾಮರಾಜನಗರ ವಾಗಲಿ ಬಿಳಿಗಿರಿರಂಗನ ಬೆಟ್ಟವಾಗಲಿ ಇಂತಹ ಅನರ್ಹರನ್ನು ಮನ್ನಿಸುವುದಿಲ್ಲ!

✶ ✶ ✶

ಟಿಪ್ಪೂಸುಲ್ತಾನ್ ಹೆಸರಿನ ವಿಶ್ವವಿದ್ಯಾಲಯ ಸ್ಥಾಪನೆಗೊಳ್ಳುತ್ತದೆಂಬ ಊಹಾಪೋಹದಿಂದ ಬಿರುಸಿನ ವಾಗ್ವಾದ ಜಾರಿಯಲ್ಲಿದೆ. ಇರುವ ವಿದ್ಯಾಲಯಗಳ ಗತಿ ಏನಾಗುತ್ತಿದೆಯೆಂದು ವಿಚಾರ ಮಾಡದೆ, ಬರಲಿರು ವುದೆಂದು ಹೇಳಲಾದ ವಿಶ್ವವಿದ್ಯಾನಿಲಯದ ಹೆಸರಿನ ಬಗ್ಗೆ ಒಬ್ಬ ಭಾರಿ ಸಂಶೋಧಕರು ತಮ್ಮ ಸಹನೆ ಕಳೆದುಕೊಂಡು ಮಧುಮೇಹ ಮತ್ತು ರಕ್ತದೊತ್ತಡಗಳಿಗೆ ಸ್ವಾಗತ ನೀಡಿ ಅವನ್ನು ತಮ್ಮಲ್ಲಿಗೆ ಬರಮಾಡಿಕೊಳ್ಳು ತ್ತಿದ್ದಾರೆಂದು ಸುದ್ದಿ. ಅವರು ''ಪ್ರಜಾವಾಣಿ'' ಪತ್ರಿಕೆಯಲ್ಲಿ ಪತ್ರ ಬರೆದು ಘೋಷಿಸಿಕೊಂಡಿದ್ದಾರೆ, ತಾವು ರಾಷ್ಟ್ರೀಯ ಸ್ವಯಂಸೇವಕ ಸಂಘದ ಕಟ್ಟಾಳು, ಅದರ ಧೋರಣೆಯಲ್ಲಿ ತಮಗೆ ಅಚಲ ಶ್ರದ್ಧೆ ಇದೆ, ಇತ್ಯಾದಿ, ಎಂದು. ಮಾನ್ಯ ಡಾ॥ ಚಿದಾನಂದಮೂರ್ತಿ ಯವರ ಮುಂದಿನ ತಕ್ಷಣದ ಹೆಜ್ಜೆ ಏನಾಗಬೇಕು? ನಿತಿನ್ ಗಡ್ಕರಿ ದೂರದ ನಾಗಪುರದವರು; ಹಿರಿಯ ವಿದ್ವಾಂಸ ಮೂರ್ತಿಯವರು ಅಲ್ಲಿಯವರೆಗೆ ಹೋಗುವುದು ಬೇಡ, ಜೊತೆಗೆ ಅದು ಕನ್ನಡನಾಡು ಸಹ ಅಲ್ಲ, ಅಥವಾ ಇವರ ಸಂಶೋಧನೆಯಿಂದ ಕತ್ಮಂಡುವಿನಂತೆ ನಾಗಪುರವೂ ಕರ್ನಾಟಕದ ಭಾಗವೇ ಆಗಿದ್ದಿತೆಂದು ಒಂದು ದಿನ ತೀರ್ಮಾನವಾಗಬಹುದು. ಅದಿರಲಿ, ಹತ್ತಿರದ ಶಿವಮೊಗ್ಗೆಯ ಆರೆಸ್ಸೆಸ್ ಕಟ್ಟಾಳು, ಮಹಾವ್ಯಕ್ತಿ, ಕೆ. ಎಸ್. ಈಶ್ವರಪ್ಪನವರಂತೆ ಡಾ॥ ಚಿದಾನಂದಮೂರ್ತಿಯವರು ರಿಸರ್ವ್ ಬ್ಯಾಂಕಿನ ನೋಟುಗಳನ್ನೆಣಿಸುವ ಒಂದು ಯಂತ್ರವನ್ನು ಕೂಡಲೆ ತರಿಸಿಕೊಳ್ಳಲು ಹವಣಿಸುತ್ತಿದ್ದಾರೇನು? ಹಾಗೆ ಮಾಡದೆಯೂ ಆರೆಸ್ಸೆಸ್‌ನ ಕಟ್ಟಾಳು ಹೇಗಾಗು ವುದು? ಆಟ ಆಡಲು ಹೋಗುವ ಹುಡುಗರಂತಲ್ಲ ಇವರು, ''ಅಚಲ ಶ್ರದ್ಧೆ''ಯುಳ್ಳ ವಿದ್ವಾಂಸರು. ಆದ್ದರಿಂದ ಈಶ್ವರಪ್ಪನವರೇ ಇವರಿಗೆ ಗುರುಗಳಾಗ ಬೇಕಾದೀತು. ಕೀರ್ತಿ ದೊಡ್ಡದಾದ ಮತ್ತು ಮೂರ್ತಿ ಚಿಕ್ಕದಾದ ಮಾನ್ಯ ಹಿರಿಯರಿಗೆ ಇದೆಂತಹ ಸೋಜಿಗದ ಸ್ಥಿತಿ!





# ಭಯೋತ್ಪಾದನೆ ಕರಿನೆರಳು

# ಒಳಗಿನದೋ ಹೊರಗಿನದೋ?

ಪಿ. ಷಣ್ಮುಖಸ್ವಾಮಿ

ಜಗತ್ತನ್ನು ಪೀಡಿಸುತ್ತಿರುವ ಆತಂಕಕಾರಿ ಸಮಸ್ಯೆಗಳಲ್ಲಿ ಭಯೋತ್ಪಾದನೆಯೂ ಒಂದು. ಇದು ಎರಡು ಬಗೆಯದು. ಒಂದು ಜಾಗತಿಕ ಬಂಡವಾಳ ಸೃಷ್ಟಿಸುವ ಆರ್ಥಿಕ ಭಯೋತ್ಪಾದನೆ. ಇದು ಅತ್ಯಂತ ಹೆಚ್ಚು ಅಪಾಯಕಾರಿ. ಜಗತ್ತಿನ ಬಹುಸಂಖ್ಯಾತರ ಬದುಕನ್ನು ಸದ್ದಿಲ್ಲದೆ ಸುಡುವಂತಹುದು. ಇನ್ನೊಂದು ಮತೀಯವಾದದ ಬೆನ್ನ ಮೇಲೆ ಸವಾರಿ ಮಾಡಿ ಜೀವಜಗತ್ತಿನ ರಕ್ತ ಹರಿಸುವುದು. ನಾನೀಗ ಎರಡನೆ ಭಯೋತ್ಪಾದನೆ ಬಗ್ಗೆ ಮಾತನಾಡುತ್ತೇನೆ. ಮತೀಯವಾದದ ಭಯೋತ್ಪಾದನೆಯ ಹುಟ್ಟು ಮತ್ತು ಬೆಳವಣಿಗೆಗೆ ಬಂಡವಾಳದ ಭಯೋತ್ಪಾದನೆಯ ನೀತಿಗಳೂ, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣ ಎಂಬುದನ್ನು ಮರೆಯಲಾಗದು. ಈ ದೇಶದ ಯಾವುದೋ ಮೂಲೆಯಲ್ಲಿ ಸಿಡಿಯುವ ಬಾಂಬು ಜಾಗತಿಕ ಬಂಡವಾಳದ ಮೆದುಳಿನ ಚಿಂತನೆಯಿಂದ ತಯಾರಾಗಿರುತ್ತದೆ ಎಂದರೆ ಆಶ್ಚರ್ಯವೂ ಆಗಬಹುದು. ಆದರೆ ಸತ್ಯ ಎನ್ನುವುದು ಸ್ಪಷ್ಟ.

ಜಾಗತಿಕ ಮಟ್ಟದ ಈ ಸಮಸ್ಯೆಯಿಂದ ಭಾರತವೂ ಹೊರತಾಗಿಲ್ಲ, ದೇಶದ ಒಳಗಿನ ಮತ್ತು ಹೊರಗಿನ ಆತಂಕವಾದಿಗಳು ಶಾಂತಿಯನ್ನು ಕದಡುತ್ತಾರೆ. ದೇಶದ ಜನತೆಯ ಮುಗ್ಧತನವೋ, ದಡ್ಡತನದ ಪರಮಾವಧಿಯೋ, ಎನ್ನುವುದನ್ನು ಈ ದೇಶದಲ್ಲಿ ಧರ್ಮದ ಹೆಸರಿನಲ್ಲಿ ಹರಿದಿರುವ, ಹರಿಯುತ್ತಿರುವ ರಕ್ತ ಸಾಬೀತುಪಡಿಸುತ್ತಿದೆ. ಭಯೋತ್ಪಾದನೆಯನ್ನು ಪೂರ್ಣ ಪ್ರಮಾಣದಲ್ಲಿ ವಿಶ್ಲೇಷಿಸುವ ಅಗತ್ಯ ವರ್ತಮಾನದಲ್ಲಿದೆಯಾದರೂ, ಬಾಹ್ಯದಲ್ಲಿ ಕಂಡುಬರುವ ಭಯೋತ್ಪಾದನೆಯ ಸ್ಪಷ್ಟ ಪರಿಚಯ ಮಾಡಿಸುವುದು ಅನಿವಾರ್ಯವಾದೀತು. ಇದನ್ನು ಕುರಿತಂತೆ ಒಂದಷ್ಟು ಆತಂಕ ನನ್ನನ್ನು ಕಾಡುತ್ತಿದೆ. ಆ ಆತಂಕವನ್ನೇ ಇಲ್ಲಿ ತೋಡಿಕೊಳ್ಳುವ ದಿಶೆಯಲ್ಲಿ ಈ ಪ್ರಯತ್ನ.

ಮೊನ್ನೆಯಷ್ಟೆ ಕರ್ನಾಟಕದ ಪೊಲೀಸರು ಹಲವಾರು ಜನ ಆತಂಕವಾದಿಗಳನ್ನು ಸಂಶಯದ ಮೇಲೆ ಬಂಧಿಸಿ, ಅವರಿಂದ ಕೆಲವು ಭಯಾನಕ ಮಾಹಿತಿಯನ್ನು ಕಲೆಹಾಕಿದ್ದಾರೆ. ಬಹು ಮುಖ್ಯವಾಗಿ ಬಂಧಿತರು ಬಾಂಬ್ ಸಿಡಿಸಿ ಹಿಂದುತ್ವದ ಪರವಾದ ಕೆಲ ನಾಯಕರನ್ನು ಮತ್ತು ಹಿಂದುತ್ವದ ಅಮಲೇರಿಸಿಕೊಂಡು ಬರೆಯುತ್ತಿದ್ದ ಪತ್ರಕರ್ತರನ್ನು ಹತ್ಯೆ ಮಾಡುವ ಸಂಚು ರೂಪಿಸಿದ್ದಾಗಿ ವಿಚಾರಣೆಯ ವೇಳೆ ಬಹಿರಂಗಗೊಳಿಸಿದ್ದಾರೆ ಎಂದು ಮಾಧ್ಯಮಗಳಲ್ಲಿ ವರದಿಯಾಗಿದೆ. ತನಿಖೆ ಮುಂದುವರಿದಿದೆ, ಹೊಸ ಹೊಸ ವಿಷಯಗಳು ಹೊರಬೀಳುತ್ತಿವೆ. ಪ್ರಾಮಾಣಿಕವಾಗಿ ತನಿಖೆಯಾಗಲಿ, ತಪ್ಪಿತಸ್ಥರಿಗೆ ಶಿಕ್ಷೆಯಾಗಲಿ, ದೇಶದಲ್ಲಿ ಶಾಂತಿ ನೆಲಸಲಿ ಇದನ್ನು ದೇಶವಾಸಿಗಳು ಬಯಸುತ್ತಾರೆ. ಆದರೆ ಈ ತನಿಖೆ ನಡೆಸುತ್ತಿರುವವರು ಮತ್ತು ಇದನ್ನು ಪ್ರಸಾರ ಮಾಡುತ್ತಿರುವ ಮಾಧ್ಯಮಗಳು, ಪೂರ್ವಗ್ರಹ ಪೀಡಿತರಾಗಿರುವುದು ನನ್ನ ಆತಂಕಗಳಲ್ಲೊಂದು. ಏಕೆಂದರೆ, ಈ ರೀತಿಯ ಭಯೋತ್ಪಾದನಾ ಕೃತ್ಯಗಳು ಭಾರತದಲ್ಲಿ ಪ್ರಾರಂಭವಾದದ್ದು ಯಾವ ಕಾರಣಗಳಿಂದ ಮತ್ತು ಎಂದಿನಿಂದ ಎನ್ನುವುದು ಇವರ ಸ್ಮೃತಿಪಟಲದಲ್ಲೇ ಉಳಿದಿಲ್ಲ, ಆದ ಕಾರಣ ತನಿಖೆಯಿಂದ ಹೊರಬಂದ ವಿಷಯಗಳಲ್ಲಿ ಸತ್ಯದ ಪಾಲೆಷ್ಟು ಎನ್ನುವುದು ಜನರ ಮನಸ್ಸಿನಲ್ಲಿರುವ ಅನುಮಾನ.

ಈ ಕುರಿತಾಗಿ ಭಯೋತ್ಪಾದನೆಯಿಂದ ನಡೆದ ಹಿಂದಿನ ಘಟನೆಗಳ ಬಗ್ಗೆ ಮತ್ತು ಅವು ಪ್ರಾರಂಭವಾದ ಬಗ್ಗೆ ಗಮನ ಹರಿಸುವುದು ಅಗತ್ಯ. ಜಮ್ಮು-ಕಾಶ್ಮೀರವನ್ನು ಹೊರತುಪಡಿಸಿದರೆ, ದೇಶದ ಬೇರೆ ಯಾವುದೇ ಭಾಗದಲ್ಲಿಯೇ ಆಗಲಿ ಮುಸ್ಲಿಂ ಉಗ್ರರು, ಬಾಬ್ರಿ ಮಸೀದಿ ಧ್ವಂಸಕ್ಕೆ ಮೊದಲು ಬಾಂಬು ಸಿಡಿಸಿದ ಉದಾಹರಣೆಗಳಿಲ್ಲ. ಮಸೀದಿ ಧ್ವಂಸದ ನಂತರವೇ ಉಗ್ರರ ವಿಧ್ವಂಸಕ ಕೃತ್ಯಗಳು ಪ್ರಾರಂಭವಾಗಿ ಮುಗ್ಧರು ಬಲಿಯಾಗುತ್ತಿರುವುದು. ಇದಕ್ಕೆ ಪ್ರತಿಯಾಗಿ, ಸ್ವಯಂ ದೇಶಭಕ್ತರೆಂದು ಘೋಷಿಸಿಕೊಂಡವರು, ದೇಶಪ್ರೇಮದ ಗುತ್ತಿಗೆ ಹಿಡಿದುಕೊಂಡವರು. ಮಾಲೆಗಾಂವ್, ನಾಂದೇಡ್ ಸೇರಿದಂತೆ ಹಲವೆಡೆ ಸರಣಿ ಬಾಂಬನ್ನು ಸ್ಫೋಟಿಸಿದ್ದಾರೆ, ಪ್ರಮೋದ್ ಮುತಾಲಿಕ್ ಎನ್ನುವ ಹಸುವಿನ ವೇಷದ ಉಗ್ರವ್ಯಾಘ್ರ, ಉಡುಪಿಯ ಬಹಿರಂಗ ಸಭೆಯಲ್ಲಿ ಮಹಿಳೆಯರು ಕೈಯಲ್ಲಿ ಕಸಬರಗೆ ಬಿಟ್ಟು ಬಾಂಬು ಹಿಡಿದರೆ ಏನಾಗುತ್ತದೆ ಎನ್ನುವುದನ್ನು ಮಾಲೆಗಾಂವ್‌ನಲ್ಲಿ ಒಂದು ಝಲಕ್, ತೋರಿದ್ದೇವೆ ಎಂದು ಆರ್ಭಟಿಸಿದ್ದಾನೆ, ಇದನ್ನು ಎಲ್ಲ ಮಾಧ್ಯಮಗಳು ಹತ್ತಾರು ಬಾರಿ ಪ್ರಸಾರ ಮಾಡಿವೆ, ನೂರಾರು ಜನ ಪೊಲೀಸ್ ಅಧಿಕಾರಿಗಳು ಅಲ್ಲಿದ್ದರು. ಆದರೂ ಏನೂ ಆಗಲಿಲ್ಲ, ಏನೂ ಮಾಡಿಲ್ಲ, ಇವರು ದೇಶದ ಒಳಗಿರುವ ಹಿಂದೂ ಭಯೋತ್ಪಾದಕರು. ಈ

> ಒಳಗಿರುವ ಭಯೋತ್ಪಾದನೆಯನ್ನು ತೊಡೆದುಹಾಕುವ ಪ್ರಯತ್ನಗಳನ್ನು ಚಿವುಟಿಹಾಕದ ನಾವು, ದೇಶದ ಹೊರಗಿನಿಂದ ನಡೆಯುವ ಭಯೋತ್ಪಾದನೆಯನ್ನು ಮಟ್ಟಹಾಕಲು ದೇಶದ ಒಳಗಿರುವ ಭಯೋತ್ಪಾದಕರ ಅಭಿಪ್ರಾಯಗಳಿಗೆ ಮನ್ನಣೆ ನೀಡುವುದಾದರೆ ದೇಶದ ಭವಿಷ್ಯಕ್ಕೆ ಮಾರಕವಾದ ಮತ್ತು ದುರಂತದ ಬೆಳವಣಿಗೆ ಇನ್ನೊಂದಿಲ್ಲ. ಪ್ರಪಂಚದಲ್ಲಿ ನಮ್ಮ ಹಿರಿಮೆ ಉಳಿಯಬೇಕೆಂದಾದರೆ, ಚರಿತ್ರೆಯ ಕಸದಬುಟ್ಟಿಗೆ ನಾವು ಬೀಳಬಾರದೆಂದರೆ, ನಮ್ಮ ಕೋಟ್ಯಂತರ ಜನ ನೆಮ್ಮದಿಯ ಜೀವನ ನಡೆಸಬೇಕೆಂದಾದರೆ, ನಮ್ಮ ನಾಗರಿಕತೆಯ ದೀಪ ನಂದದಿರಬೇಕಾದರೆ, ಈ ಬೆಳವಣಿಗೆಗೆ ಪೂರ್ಣವಿರಾಮ ಬೀಳಬೇಕೆಂದಾದರೆ ಮೇಲೆ ಹೇಳಿದ ಹಾಗೆ ಪರಿಸ್ಥಿತಿಯ ವಾಸ್ತವವನ್ನು ರಾಷ್ಟ್ರದ ಜನತೆಯ ಮುಂದಿಟ್ಟರೆ ನಿಜವಾದ ತೀರ್ಪು ಜನತಾ ನ್ಯಾಯಾಲಯದಿಂದ ಬರುತ್ತದೆ. ನಮ್ಮ ಸಂವಿಧಾನದ ಆಶಯವೂ ಅದೇ ಆಗಿದೆ.

ಇಬ್ಬರೂ ಅವರ ಧರ್ಮಗಳನ್ನು ಕೊಲೆ ಮಾಡಿದ್ದಾರಾದರೂ ನಾವದನ್ನು ಕಾಪಾಡಿ, ಉಳಿಸಿ ಬೆಳೆಸುವ ವಾರಸುದಾರರು ಎಂದು ಜಗತ್ತಿಗೆ ಬಿಂಬಿಸುವ ಮೂರ್ಖತನದ ಪ್ರಯತ್ನ ಮಾಡುತ್ತಿದ್ದಾರೆ. ಅವರ ಈ ಪ್ರಯತ್ನಕ್ಕೆ ಮೂಕ, ಮುಗ್ಧ ಸಮಾಜ ಬಲಿಯಾಗುತ್ತಿದೆ.

ತನಿಖೆಗಳು ಹಾದಿ ತಪ್ಪಿ ಅದನ್ನು ಅನುಮಾನದಿಂದ ನೋಡುವಂಥ ಪರಿಸ್ಥಿತಿ ನಿರ್ಮಾಣವಾಗೋದಕ್ಕೆ ಕಾರಣ ವಾಗಿರುವಂತಹ ಎರಡು ಪ್ರಕರಣಗಳನ್ನು ನೆನಪಿಸಿ ಕೊಳ್ಳೋದಾದರೆ ಮಾಲೆಗಾಂವ್ ಪ್ರಕರಣದಲ್ಲಿ, ರೈಲಿನಲ್ಲಿ, ಮಸೀದಿಯಲ್ಲಿ ಬಾಂಬ್ ಸ್ಫೋಟಗೊಂಡಾಗ, ಇಲ್ಲಿನ ಮಾಧ್ಯಮಗಳು, ಪೊಲೀಸರು ಅವುಗಳನ್ನು ಮುಸ್ಲಿಂ ಭಯೋತ್ಪಾದಕರ ಕೃತ್ಯವೆಂದು ಬೊಬ್ಬೆ ಹಾಕಿದರು, ಆದರೆ ಹೇಮಂತ್ ಕರ್ಕರೆಯಂತಹ ದಕ್ಷ ಪ್ರಾಮಾಣಿಕ ಅಧಿಕಾರಿಯ ನಿಷ್ಪಕ್ಷಪಾತ ತನಿಖೆಯಿಂದಾಗಿ ಸತ್ಯ ಹೊರಬಿತ್ತು. ಅತ್ಯಂತ ಗುಪ್ತವಾಗಿ ಮತ್ತು ಜಾಗೃತವಾಗಿ ದೇಶ ಕಾಯೋ ಜವಾಬ್ದಾರಿ ಹೊತ್ತಿರುವ ರಕ್ಷಣಾ ವ್ಯವಸ್ಥೆಯ ಒಳಗಡೆಯೇ ನೌಕರನಾಗಿದ್ದುಕೊಂಡು, ರಹಸ್ಯವಾಗಿದ್ದ ಜಾಗದಿಂದ ಬಾಂಬು ತಯಾರಿಸುವ ರಾಸಾಯನಿಕಗಳನ್ನು ಕದ್ದು ತಂದು ಬಾಂಬು ತಯಾರಿಸಿ ಸ್ಫೋಟಿಸಿ ನೂರಾರು ಜನರ ಸಾವಿಗೆ ಕಾರಣರಾಗಿದ್ದವರನ್ನು ಹುಡುಕಿ ಬಂಧಿಸಿದ್ದಾರೆ. ತನಿಖೆ ನಡೆಯುತ್ತಿರುವಾಗಲೇ ೨೦೦೮ರಲ್ಲಿ ಮುಂಬಯಿಯಲ್ಲಿ ನಡೆದ ಬಾಂಬ್ ಬ್ಲಾಸ್ಟ್ ಘಟನೆ ನಡೆಯುತ್ತಿರುವಾಗಲೇ, ಹೇಮಂತ್ ಕರ್ಕರೆ ದುಷ್ಟರ ಗುಂಡಿಗೆ ಬಲಿಯಾಗುತ್ತಾರೆ. ಅವರ ಬಲಿಯ ಹಿಂದಿನ ರಹಸ್ಯವನ್ನು ಕೆದಕುವ ಸಾಹಸಕ್ಕೆ ಯಾರೂ ಕೈ ಹಾಕುವುದಿಲ್ಲ, ಬದಲಾಗಿ ಅವರ ಜೊತೆಗೆ ಬಲಿಯಾದ ಇನ್ನೊಬ್ಬ ಅಧಿಕಾರಿ, ಸಂದೀಪ್ ಉನ್ನಿಕೃಷ್ಣನ್, ಸೈನ್ಯದ ಮುಖ್ಯಾಧಿಕಾರಿಯೊಬ್ಬರು, ಈ ಮೂವರ ಭಾವಚಿತ್ರಗಳನ್ನು ದೊಡ್ಡ ದೊಡ್ಡ ಕಟ್‌ಔಟ್‌ಗಳನ್ನಾಗಿ ಮಾಡಿ ದೇಶಾದ್ಯಂತ ಅವರಿಗೆ ಶ್ರದ್ಧಾಂಜಲಿ ನೆಪದಲ್ಲಿ ಇಡೀ ದೇಶದ ಜನ ಮುಂಬಯಿ ಘಟನೆಯನ್ನು ಮರೆಯುವ ಹಾಗೆ ಬಿಂಬಿಸಿದ್ದರ ಹಿಂದೆ ಅಡಗಿದ್ದ ಸತ್ಯವೇನು ಎಂದು ಪ್ರಶ್ನೆಗಳೇಳುತ್ತಿರುವಾಗಲೇ, ಮುಂಬಯಿಯ ಸಾಹಿತಿ ಯೊಬ್ಬರು ಕರ್ಕರೆ ಸತ್ತದ್ದು ಹೇಗೆ ಎನ್ನುವ ಪುಸ್ತಕವನ್ನು ಬರೆಯುತ್ತಾರೆ, ಅದು ಕನ್ನಡಕ್ಕೂ ತರ್ಜುಮೆಯಾಗುತ್ತದೆ. ಆದರೆ ಆ ವಿಷಯ ಅಲ್ಲಿಗೇ ಸತ್ತು ಹೋಗಿದೆ. ಅವರಿಗೆ ಶ್ರದ್ಧಾಂಜಲಿ ಅರ್ಪಿಸಿದ ದೇಶಭಕ್ತರು ಎಲ್ಲಿ ಹೋಗಿದ್ದಾರೆ? ಮಾಲೆಗಾಂವ್ ಪ್ರಕರಣ ಇಲ್ಲಿಯವರೆಗೆ ಭಾರತದಲ್ಲಿ ನಡೆದ ಯಾವ ಬಾಂಬು ದಾಳಿಗೂ ಕಡಿಮೆ ಅಲ್ಲ.

ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲೂಕಿನ ಕಡದ ಕಟ್ಟೆ ಗ್ರಾಮದಲ್ಲಿ ಕಳೆದ ೨೦೦೮ರಲ್ಲಿ ಇಬ್ಬರು ಬೈಕ್ ಕಳ್ಳರನ್ನು ಭಯೋತ್ಪಾದಕರೆಂದು ಆರೋಪಿಸಿ ಬಂಧಿಸಲಾಯಿತು. ಆಗ ದಾವಣಗೆರೆಯಲ್ಲಿ ಸಂದೀಪ್ ಪಾಟೀಲ್ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾಗಿದ್ದರು. ಆ ಇಬ್ಬರು ಕಳ್ಳರ ನಂತರ ಎಂಟು ಜನ ಯುವಕರನ್ನು ಹುಬ್ಬಳ್ಳಿ, ಮಂಗಳೂರು, ಬೆಂಗಳೂರಿನಲ್ಲಿ ಬಂಧಿಸಲಾಯಿತು. ಇವರ ಬಂಧನದ ಪೂರ್ವದಲ್ಲಿ ಹುಬ್ಬಳ್ಳಿ ನ್ಯಾಯಾಲಯದಲ್ಲಿ ಬಾಂಬು ಸಿಡಿದು ನಾಲ್ಕು ಜನ ಸತ್ತು ಹಲವಾರು ಜನರಿಗೆ ಗಾಯ ಗಳಾದವು. ನಂತರ ಬಂಕಾಪುರದ ಅರಣ್ಯದಲ್ಲಿ ಜಲಿಟಿನ್ ಕಡ್ಡಿಗಳು, ಬಾಂಬು ತಯಾರಿಸುವ ಸಲಕರಣೆಗಳು, ರಾಸಾಯನಿಕಗಳೂ ದೊರೆತವು. ಕಡದ ಕಟ್ಟೆ ಗ್ರಾಮದಲ್ಲೂ ಈ ರೀತಿಯ ವಸ್ತುಗಳು ದೊರೆತವು ಎಂದು ಮಾಧ್ಯಮ ಗಳಲ್ಲಿ ಸುದ್ದಿಯಾಯಿತು. ಇವೆಲ್ಲವುಗಳಿಗೂ ಬಂಧಿತ ರಾಗಿರುವ ಮುಸ್ಲಿಂ ಯುವಕರು ನಡೆಸುತ್ತಿದ್ದ ಭಯೋತ್ಪಾದನಾ ಚಟುವಟಿಕೆಗಳಿಗೂ ನಂಟು ಕಲ್ಪಿಸ ಲಾಯಿತು. ಅಲ್ಲದೆ ಲಷ್ಕರಿ ತೋಯ್ಬಾ, ಇಂಡಿಯನ್ ಮುಜಾಯುದ್ದೀನ್‌ನಂತಹ ಭಯೋತ್ಪಾದಕ ಸಂಘಟನೆ ಗಳೊಂದಿಗೆ ಇವರಿಗೆ ನೇರ ಸಂಪರ್ಕ ಇರುವುದಾಗಿ ಆರೋಪ ಪಟ್ಟಿ ಸಲ್ಲಿಸಿ ಅವರನ್ನು ಜೈಲಿಗಟ್ಟಲಾಯಿತು. ಆನಂತರ ಅವರು ಏನಾದರು ಎಂಬುದು ಇಂದಿಗೂ ಗೊತ್ತಿಲ್ಲ. ಸಂದೀಪ್ ಪಾಟೀಲರ ನಂತರ ವೆಂಕಟೇಶ್ ಆ ಸ್ಥಾನಕ್ಕೆ ಬಂದರು. ಹೊಸದಾಗಿ ಬಂದ ಅಧಿಕಾರಿಯೊಡನೆ ಮಾಧ್ಯಮದವರು ಆ ಯುವಕರ ಬಂಧನದ ವಿಷಯ ಪ್ರಸ್ತಾಪಿಸಿದಾಗ, ''ಅವರ ಮೇಲೆ ನಾವು ಚಾರ್ಜ್‌ಷೀಟ್ ದಾಖಲಿಸಿಲ್ಲ. ಏಕೆಂದರೆ ಅವರ ಮೇಲಿರುವ ಆರೋಪವನ್ನು ಸಾಬೀತುಪಡಿಸಲು ಯಾವ ಸಾಕ್ಷ್ಯಾಧಾರಗಳೂ ದೊರೆತಿಲ್ಲ'' ಎಂಬ ಉತ್ತರ ಬಂದಿತು. ಹಾಗಾದರೆ ಈ ಘಟನೆಯ ಹಿಂದೆ ಇರುವ ಕೈಗಳಾವುವು? ಎನ್ನುವ ಪ್ರಶ್ನೆಗೆ ಉತ್ತರ ದೊರಕುವುದಕ್ಕೆ ಬಹಳ ಸಮಯವೇನೂ ಬೇಕಾಗಲಿಲ್ಲ. ಮುತಾಲಿಕ್‌ನ ಪಟ್ಟಾ ಶಿಷ್ಯರಲ್ಲೊಬ್ಬ ಜಂಬಗಿ ನಾಗರಾಜ ಎಂಬುವವನ ನೇತೃತ್ವದಲ್ಲಿ ಇದೆಲ್ಲಾ ನಡೆದಿತ್ತು. ಇದರ ಜೊತೆಗೆ ಈ ತಂಡ ಎರಡು ಕೊಲೆಗಳನ್ನು ಮಾಡಿತ್ತು.

## ಅನಾಥ ಕವಿತೆಗಳು

ಇದೀಗ ಈ ಕ್ಷಣದಿಂದ ಕೆಲವರ
ಕವಿತೆಗಳು ಅನಾಥವಾದುವು
ಅವುಗಳ ಸಾಕುತಂದೆ ಸತ್ತ
ಆ ಮರುಗಳಿಗೆಯಿಂದಲೇ

ಪದಾರ್ಥವನ್ನೊಪ್ಪಿಸುವ ಪಾಠಕ ನಿಲ್ಲದೆ
ಪದ ಪಠಣ ಕಾರ್ಯಕಾರಣ ಸತ್ತು
ಸೂತಕವೆಂಬುದು ಪಾಠಕನ ಪಾಖಂಡಿ ನಿಯತ್ತು

ಶಬ್ದಕ್ಕೆ ಅರ್ಥ ಅರ್ಥಕ್ಕೆ
ಅಗುಳಗುಳನು ಜಗಿದುಗಿಯುವ
ಪದಘಾತುಕ ಸ್ಫೋಟ ನೀತಿ
ಇಲ್ಲವಾಗಿ ಕಲ್ಲಾದುವು ಶಬ್ದಗಳು

ಕಲ್ಲುಕಲ್ಲನು ಒಟ್ಟಿ ಕಲ್ಲುಕಟ್ಟೆಯ
ಕಟ್ಟಿದ ಕಲ್ಲುಗುಡಿಯೊಳಗೆ
ಗಳಹುತ್ತಿದ್ದಾನೆ ಅಕಾಲನೆಂಬೋ ಬಾವಿಬೀರ

ಒಂದೇ ಪದ ಪದಗುಣಿಸಿ
ಪದ ಭಾಗಿಸಿ ಪದಶೇಷದೊಡಲಲ್ಲಿ

ತೌಡು ಕುಟ್ಟಿದ ಒನಕೆ
ದಕ್ಕಲನು ಬಾಯಬಲಕೆ

ದಿಕ್ಕುದಿಕ್ಕಿಗೂ ಮೊರೆವ ಕರವತ್ತಿ –
ದವನ ಕರೆ ಕರೆ ಮುಟ್ಟು ಮುಟ್ಟು
ಅತಳ ವಿತಳ ಸುತಳ ಯೋನಿತಳ
ದಲ್ಲಿ ಪವಡಿಸಿದ ಪರಂಧಾಮ

ಅಲ್ಲಿ ಅಂತರ್ಗತ ಅನಾತ್ಮ
ಅತಂತ್ರನಾಗಿ ಹೋದ
ಇದೀಗ ಈ ಕ್ಷಣದಿಂದ
ಅನಾಥವಾದುವು ಕವಿತೆಗಳು.

**ಎಸ್. ಜಿ. ಸಿದ್ಧರಾಮಯ್ಯ**
ಎಸ್ - ೧೩೨, ದೀಪ್ತಿ ಅಪಾರ್ಟ್‌ಮೆಂಟ್ ಎಫ್ - ೨
ಕಿರ್ಲೋಸ್ಕರ್ ಕಾಲೋನಿ, ೧ನೇ ಅಡ್ಡರಸ್ತೆ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯



ಇವೆಲ್ಲವನ್ನೂ ಪತ್ತೆ ಹಚ್ಚಿದ ಪೊಲೀಸರು ಅವರನ್ನು ಹಿಡಿದು ಒಳಗೆ ಹಾಕಿದ್ದರು. ಪೊಲೀಸರ ಬಲೆಯಲ್ಲಿದ್ದ ನಾಗರಾಜ ಎಲ್ಲವನ್ನೂ ನ್ಯಾಯಾಲಯದಲ್ಲಿ ಹೇಳುವುದಾಗಿ ಒಪ್ಪಿಕೊಂಡ. ಆ ವೇಳೆಗೆ ತಾನೇ ನಿಂತು ಮಾಡಿಸಿದ್ದ ಈ ಪೈಶಾಚಿಕ ಕೃತ್ಯಗಳು ತನಗೇ ಉರುಳಾಗತೊಡಗಿದಾಗ, ನಾಗರಾಜನಿಗೂ ತನಗೂ ಯಾವ ಸಂಬಂಧವೂ ಇಲ್ಲ ಎಂದು ಮಾಧ್ಯಮದ ಮುಂದೆ ಹತ್ತಾರು ಬಾರಿ ಹೇಳಿಕೊಂಡಿದ್ದ ಮುತಾಲಿಕ್ ತನ್ನ ಭಂಟ ನಾಗರಾಜನನ್ನು ಒಮ್ಮೆಯೂ ಸಹ ಸೌಜನ್ಯಕ್ಕೂ ಭೇಟಿಯಾಗಲಿಲ್ಲ. ಆಗ ತಾನು ಹಳ್ಳಕ್ಕೆ ಬಿದ್ದ ಅರಿವಾಗಿ ನಾಗರಾಜ ತನ್ನ ಬದುಕಿನ ಕೊನೆಯ ದಿನಗಳಿವು ಎಂದು ಸತ್ಯ ಹೇಳಲು ಮುಂದಾಗಿದ್ದ. ಇವರಿಂದ ಬೆಚ್ಚಿಬಿದ್ದ ಮುತಾಲಿಕ್ ಅಂದಿನ ವಿಧಾನಸಭಾ ಅಧ್ಯಕ್ಷರ ಕಾಲು ಹಿಡಿದ ನಂತರ ಸಿನಿಮೀಯ ರೀತಿಯಲ್ಲಿ ಜೈಲಿನಲ್ಲೇ ಜಂಬಗಿ ನಾಗರಾಜನ ಕೊಲೆಯಾಗುತ್ತದೆ. ಅಲ್ಲಿಗೆ ಎಲ್ಲವೂ ಮುಗಿದಂತಾಯಿತು. ಆದರೆ ಉಗ್ರಗಾಮಿಗಳೆಂಬ ಪಟ್ಟ ಕಟ್ಟಿಕೊಂಡವರು ಜೈಲಿನಲ್ಲೇ ಉಳಿದರು.

ಇವೆರಡು ಉದಾಹರಣೆಗಳು ಮಾತ್ರ. ಆದರೆ ಇಂತಹ ಹತ್ತಾರು ಘಟನೆಗಳನ್ನು ಈ ದೇಶದ ಜನ, ಪೊಲೀಸ್‌ನವರು ಕಂಡಿದ್ದಾರೆಯಾದರೂ ಏನೂ ಮಾಡಲಾಗದೆ ಸುಮ್ಮನಾಗಿದ್ದಾರಾ ? ಅಥವಾ ಅಂಥ ಪೈಶಾಚಿಕ ಮನಸ್ಸಿರುವ ಪೊಲೀಸ್ ಅಧಿಕಾರಿಗಳು ಇಲಾಖೆಗಳಲ್ಲಿದ್ದಾರಾ ? ಎನ್ನುವ ಅನುಮಾನಗಳಿಗೆ ರೆಕ್ಕೆ ಪುಕ್ಕಗಳು ಬರತೊಡಗಿವೆ. ಮೊನ್ನೆ ಮೊನ್ನೆಯಷ್ಟೇ ಈಶಾನ್ಯ ಭಾರತದ ಜನ ಬೆಂಗಳೂರನ್ನೇ ಬಿಟ್ಟು ಸಾವಿರ, ಸಾವಿರ ಸಂಖ್ಯೆಯಲ್ಲಿ ತಮ್ಮ ತವರಿಗೆ ಮರಳಿದ ಘಟನೆಯ ದೃಶ್ಯಾವಳಿಗಳು ಈ ಅನುಮಾನವನ್ನು ಹೆಚ್ಚಿಸತೊಡಗಿವೆ. ದಿಢೀರನೆ ಬಂದೆರಗಿದ ಎಸ್‌ಎಂಎಸ್ ದಾಳಿಯಿಂದ ಕಂಗಾಲಾದ ಜನ ಹಿಂಡುಹಿಂಡಾಗಿ ತವರಿಗೆ ವಾಪಾಸಾಗಲು ರೈಲ್ವೆ ಸ್ಟೇಷನಿಗೆ ಬಂದಾಗ ಮೊದಲು ಬಂದು ತಡೆಯುವ ನಾಟಕ ಮಾಡಿದವರು ಹಿಂದೂಪರ ಸಂಘಟನೆಯ ಕಾರ್ಯಕರ್ತರು. ಸರ್ಕಾರದವರೂ, ಪೊಲೀಸ್ ಇಲಾಖೆಯವರೂ ನಂತರ ಬಂದರು. ಎಸ್‌ಎಂಎಸ್ ಮಾಡಿದವರು ಯಾರು ಎಂಬುದು ಪೊಲೀಸಿನವರಿಗೂ ಗೊತ್ತಿತ್ತು, ಹಿಂದೂ ಸಂಘಟನೆಯವರಿಗೂ ಗೊತ್ತಿತ್ತು. ಅದು ನಮ್ಮ ದುಷ್ಟ ಚಿಂತನೆಯ ಕೂಸು ಎಂದು.

ಎಸ್‌ಎಂಎಸ್ ಮಾಡಿದ ಆರು ಜನರನ್ನು ಪೊಲೀಸರು ಬಂಧಿಸಿದರು. ಮಾಧ್ಯಮಗಳಲ್ಲೆಲ್ಲ ಅವರ ಬಂಧನದ ಸುದ್ದಿ ಬಿತ್ತರಗೊಂಡಿತು. ಕೂಡಲೇ ಸರ್ಕಾರ ಪಾಕಿಸ್ತಾನದ ಉಗ್ರವಾದಿ ಸಂಘಟನೆಗಳತ್ತ ಬೆರಳುಮಾಡಿತು, ಆ ಕಡೆಯಿಂದ ಸವಾಲಿನ ಉತ್ತರ ಬಂದ ಕೂಡಲೇ ಇಲ್ಲಿ ಅದರ ಸದ್ದೇ ಅಡಗಿತು. ಬಂಧಿತರಾದ ಆರು ಜನ ಯಾರು ? ಅವರ ಹೆಸರುಗಳೇನು ? ಯಾವುದೂ ಬಹಿರಂಗಗೊಳ್ಳಲಿಲ್ಲ ಏಕೆ ? ಈ ಎಲ್ಲ ಘಟನೆಗಳನ್ನು ಯಾವ ಪೂರ್ವಗ್ರಹಗಳಿಲ್ಲದೆ ನೋಡಿದರೆ ದೇಶಕ್ಕೆ ಹೆಚ್ಚು ಆತಂಕಕಾರಿಯಾದ, ಅಪಾಯಕಾರಿಯಾದ, ಉಗ್ರವಾದ ದೇಶದ ಒಳಗಿರುವ ಭಯೋತ್ಪಾದಕರಿಂದ ನಡೆಯುತ್ತಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಜನ ಈ ಸೂಕ್ಷ್ಮತೆಗಳ ಬಗ್ಗೆ ದೃಷ್ಟಿಹರಿಸಬೇಕಾದ ಅವಶ್ಯಕತೆಯಿದೆ. ದೇಶದ ಹೊರಗಿನಿಂದ ನಡೆಯುತ್ತಿರುವ ಮುಸ್ಲಿಂ ಭಯೋತ್ಪಾದನೆಯ ಚಟುವಟಿಕೆಗಳಿಗೆ, ಕಾರ್ಯಾಚರಣೆಗಳಿಗೆ ನೇರವಾಗಿ ವೇದಿಕೆಯನ್ನು ಒದಗಿಸಿಕೊಡುವ ಕೆಲಸವನ್ನು ಮಾಡಿದವರು ದೇಶದ ಒಳಗಿರುವ ಹಿಂದು ಉಗ್ರರು ಎನ್ನುವುದು ಇತಿಹಾಸ. ಕೈಯಲ್ಲಿರುವ ಹುಣ್ಣು ಈ ದೇಶದ ದುರಂತ ಎಂದರೆ ಆ ಹುಣ್ಣನ್ನು ನೋಡಲು ಸರ್ಕಾರಗಳು ಭೂತಕನ್ನಡಿಯನ್ನು ಹುಡುಕುತ್ತಿರುವುದು, ಕರ್ನಾಟಕ ಸರ್ಕಾರ ಈ ವಿಷಯದಲ್ಲಿ ಒಂದು ಹೆಜ್ಜೆ ಮುಂದೆ ಹೋಗಿ ರಾಜ್ಯದಲ್ಲಿರುವ ಒಳ ಉಗ್ರವಾದಿಗಳ ಮೇಲೆ ದಾಖಲಾಗಿದ್ದ ಮೊಕದ್ದಮೆಗಳನ್ನೆಲ್ಲವನ್ನೂ ಹಿಂದಕ್ಕೆ ಪಡೆದಿದೆ. ಕರ್ನಾಟಕದಲ್ಲಿರುವ ಸರ್ಕಾರ ಆಂತರಿಕ ಭಯೋತ್ಪಾದಕರ ರಾಜಕೀಯ ವೇದಿಕೆ ಎನ್ನುವುದು ಮತ್ತೊಮ್ಮೆ ಸಾಬೀತಾಗಿರುವುದನ್ನು ಜನ ತಿರಸ್ಕರಿಸುವ ಮೂರ್ಖತನ ಮಾಡಬಾರದು.

ಇತ್ತೀಚೆಗೆ ನಡೆದ ಪೊಲೀಸ್ ಕಾರ್ಯಾಚರಣೆಯಲ್ಲಿ ಬಂಧಿತರಾಗಿರುವವರಿಂದ ದೊರೆತ ಮಾಹಿತಿಯನ್ನು, ಮಾಧ್ಯಮಗಳಿಗೆ ಬಿಡುಗಡೆ ಮಾಡಿದ್ದಾರೆ. ಈ ವರದಿಯು ಪ್ರತೀಕಾರ ತೀರಿಸಿಕೊಳ್ಳುವ ಉಗ್ರರ ರಾಕ್ಷಸೀ ಕೃತ್ಯವನ್ನು ಸ್ಪಷ್ಟವಾಗಿ ನಿರೂಪಿಸಿದೆ. ಬಂಧಿತರ ಬಳಿ ಗೋಧ್ರಾ ಹತ್ಯಾಕಾಂಡದ ವಿಡಿಯೋ ಪತ್ತೆಯಾಗಿದೆ. ಇದು ಏನನ್ನು ಹೇಳುತ್ತದೆ ಎಂಬುದು ಬಂಧಿತರಿಂದ ಬಹಿರಂಗವಾಗಿದೆ. ಅದೆಂದರೆ ಅವರು ಕೆಲ ಪತ್ರಕರ್ತರನ್ನು ಮತ್ತು ಉದ್ಯಮಿಗಳನ್ನು ಹತ್ಯೆಮಾಡಲು ಸಂಚು ಹೂಡಿದ್ದರು ಎನ್ನುವುದು. ಹತ್ಯೆಯ ಸಂಚಿಗೆ ಬಲಿಯಾಗಲಿದ್ದ ಪತ್ರಕರ್ತರು ಮತ್ತು ಉದ್ಯಮಿಗಳ ಹೆಸರುಗಳನ್ನು ಬಹಿರಂಗಪಡಿಸಿದ್ದಾರೆ. ಅವರು ಹಿಂದುತ್ವವಾದಿಗಳು ಎನ್ನುವುದು ಅಲ್ಲಗಳೆಯುವ ವಿಷಯವಾದರೆ ಪೊಲೀಸ್ ತನಿಖೆ ಯಾವ ಹಾದಿ ಹಿಡಿಯಬಹುದು ಎನ್ನುವುದು ವಿವೇಚನೆಗೆ ಬಿಟ್ಟ ವಿಷಯ.

ಉಗ್ರರು ದೇಶದಲ್ಲಿ ಎಲ್ಲಿಯಾದರೂ ಬಾಂಬು ಸ್ಫೋಟಿಸಿದರೆ ಬಾಂಬು ಸಿಡಿದ ಮೇಲಷ್ಟೇ ಜನರಿಗೆ ಭಯ ಶುರುವಾಗುತ್ತದೆ. ಮತ್ತು ನಂತರದ ಎರಡು ಮೂರು ದಿನದಲ್ಲಿ ಜನಜೀವನ ವಾಸ್ತವ ಸ್ಥಿತಿಗೆ ಮರಳುತ್ತದೆ. ಆದರೆ ನಮ್ಮೊಳಗಿರುವ ಆತಂಕವಾದಿಗಳು ದೇವರು-ಧರ್ಮದ ಹೆಸರಿನಲ್ಲಿ ಮೆರವಣಿಗೆ ನಡೆಸುತ್ತಾರೆ ಎನ್ನುವ ಸುದ್ದಿಯಾದರೆ ಸಾಕು, ಅದು ಮುಗಿಯುವವರೆಗೆ ಜನರ ಹೃದಯ ಬಾಯಿಗೆ ಬಂದಿರುತ್ತದೆ. ಎಷ್ಟೋ ಬಾರಿ ಆ ರೀತಿಯ ಕಾರ್ಯಕ್ರಮಗಳು ಮುಗಿಯುವ ಹೊತ್ತಿಗೆ ಜನರ ಆತಂಕ ನೈಜವಾದುದು ಎಂದೆನಿಸಿ ತಿಂಗಳುಗಟ್ಟಲೆ ಗ್ರಾಮಗಳು, ನಗರಗಳು ರಕ್ತಪಾತ ಮತ್ತು ಹಿಂಸೆಯ ಬೆಂಕಿಯಿಂದ ಹೊತ್ತಿ ಉರಿಯುತ್ತವೆ. ಜನ ಊರುಕೇರಿಗಳನ್ನು ಬಿಟ್ಟು ಹೊಲಗದ್ದೆಗಳಲ್ಲಿ ತಿಂಗಳುಗಳ ಕಾಲ ಜೀವನ ಸಾಗಿಸಿದ್ದಾರೆ. ವ್ಯಾಪಾರ ವಹಿವಾಟು ಹದಗೆಡುತ್ತದೆ.

ಅಪಾರ ಪ್ರಮಾಣದ ಆಸ್ತಿಪಾಸ್ತಿ ನಷ್ಟವಾಗುತ್ತದೆ. ಪ್ರಾಣಹಾನಿಗಳಾಗುತ್ತವೆ. ಸಮಾಜ, ಸಹಜ ಸ್ಥಿತಿಗೆ ಮರಳಲು ಒಮ್ಮೊಮ್ಮೆ ವರ್ಷವೇ ಬೇಕಾಗುತ್ತದೆ. ಇಂತಹ ಭಯಾನಕ ವಾತಾವರಣ ದೇಶದಲ್ಲಿ ಸೃಷ್ಟಿಯಾಗಿದ್ದಾದರೂ ಯಾವಾಗ ? ಇದು ಅದ್ವಾನಿಯವರ ರಥಯಾತ್ರೆಯಿಂದಲೇ ಪ್ರಾರಂಭವಾಗಿ ಇಂದಿಗೂ ಕೂಡ ನಿರಂತರವಾಗಿ ನಡೆಯುತ್ತಲೇ ಇದೆ. ಸಾಲದ್ದಕ್ಕೆ ಸಂಸ್ಕೃತಿಯ ಹೆಸರಿನಲ್ಲಿ ಮಹಿಳೆಯರ ಮೇಲೆ ಇವರು ನಡೆಸಿರುವ ಕೃತ್ಯ ತಾಲಿಬಾನಿ ಉಗ್ರರ ಯಾವ ಚಟುವಟಿಕೆಗೆ ಕಡಿಮೆ ? ಈ ವಿಷಯಕ್ಕೆ ದೇಶ ಬೆಚ್ಚಿದ್ದೇ ಅಲ್ಲದೆ ಜಗತ್ತಿನೆದುರು ನಾಚಿ ತಲೆ ತಗ್ಗಿಸಿದೆ. ಇಂತಹ ಸೂಕ್ಷ್ಮ ಸಮಸ್ಯೆಗಳು ಏರ್ಪಟ್ಟಾಗ ಸಮಸ್ಯೆಗಳಿಗೆ ದಿಢೀರ್ ಮತ್ತು ಪವಾಡ ರೀತಿಯ ಪರಿಹಾರಗಳು ಇವೆ ಎಂಬ ಹುಸಿಯನ್ನು ಆಧುನಿಕ ಪ್ರಸಾರ ಮಾಧ್ಯಮಗಳು ಬಿತ್ತರಿಸುವುದಕ್ಕೆ ಕಡಿವಾಣ ಹಾಕಬೇಕು. ಗತಕಾಲದ ಬಗ್ಗೆ ಮಿಥ್ಯೆಯನ್ನು ಸೃಷ್ಟಿಸುತ್ತಾ, ಒಂದು ಧರ್ಮದಲ್ಲಿ ಜನಿಸಿದವರು ಇತರರಿಗಿಂತ ಉತ್ತಮರೆಂದು ಪರಿಗಣಿಸಲು ಸಹಾಯವಾಗುವಂತೆ ಮತಗಳ ಹುಟ್ಟು ಮತ್ತು ಪಾತ್ರಗಳನ್ನು ವಿವರಿಸುತ್ತಿರುವುದು ವಿಲಕ್ಷಣ ದೇಶಾಭಿಮಾನಕ್ಕೆ ಕಾರಣವಾಗುತ್ತದೆ. ಈ ವಿಲಕ್ಷಣ ದೇಶಾಭಿಮಾನದ ಎರಡನೇ ಹಂತವೇ ದೇಶದ ಆಂತರಿಕ ಭಯೋತ್ಪಾದನೆಯ ಮೊದಲನೇ ಮೆಟ್ಟಿಲು. ಈ ಸತ್ಯವನ್ನು ಕನಿಷ್ಠ ಸಾಮಾಜಿಕ ಜವಾಬ್ದಾರಿ ಇರುವ ಮಾಧ್ಯಮಗಳಾಗಲಿ, ಜನತೆಯ ಶಾಂತಿ ನೆಮ್ಮದಿ ಕಾಪಾಡುವ ಹೊಣೆ ಹೊತ್ತಿರುವ ರಕ್ಷಣಾ ಇಲಾಖೆಗಳಾಗಲಿ, ಅಧಿಕಾರ ಹೊಂದಿರುವ ಸರ್ಕಾರಗಳಾಗಲಿ, ತಮ್ಮ ಪೂರ್ವಗ್ರಹಗಳನ್ನು ಬದಿಗಿಟ್ಟು ಜನತೆಯ ಮುಂದಿಡಲಿ. ಆಗ ಜನರೇ ತೀರ್ಮಾನಿಸುತ್ತಾರೆ ದೇಶದ ಅಭಿವೃದ್ಧಿಗೆ, ಜನತೆಯ ಶಾಂತಿ ನೆಮ್ಮದಿಗೆ ಮಾರಕವಾಗಿರುವ, ಸಮಾನತೆಯ ತಳಹದಿಯನ್ನು ಹೊಸಕಿಹಾಕಿ ಭಯದ ಬೀಜ ಬಿತ್ತಿ ಬೆಳೆಯ ಹೊರಟಿರುವ ಪಿಶಾಚಿಗಳು ಯಾರು ಎಂದು.

ಈ ಎಲ್ಲ ಮಾತುಗಳನ್ನು ಮಾತನಾಡುವಾಗ ಹೊರಗಿನಿಂದ ದಾಳಿ ನಡೆಸುತ್ತಿರುವ ಮುಸ್ಲಿಂ ಉಗ್ರರು ಮಾಡುತ್ತಿರುವುದರ ಬಗ್ಗೆ ಮೃದುಧೋರಣೆ ತೋರಿದಂತೆ ಕಾಣುತ್ತದೆ. ನನ್ನ ಅಭಿಪ್ರಾಯ ಅದಲ್ಲ. ಸಮಾಜ ವಿರೋಧಿಯಾದ ಕೆಲಸ ಮಾಡುವ ಯಾರೇ ಆದರೂ ಶಿಕ್ಷೆಗೆ ಅರ್ಹರೇ. ಎಲ್ಲ ರೀತಿಯ ಭಯೋತ್ಪಾದನೆಗಳನ್ನು ಬೇರು ಸಮೇತ ಕಿತ್ತೆಸೆಯಲೇಬೇಕು. ಆದರೆ ಈ ಮೇಲಿನ ಅಂಶಗಳನ್ನೆಲ್ಲ ಗಮನಿಸಿದಾಗ ಈ ದೇಶದಲ್ಲಿನ ಭಯೋತ್ಪಾದನೆಯನ್ನು ಬುಡಸಮೇತ ಕಿತ್ತುಹಾಕಬೇಕೆಂದಾದರೆ, ಹೊರಗಿನಿಂದ ಬಂದು ಬೀಳುವ ಬಾಂಬನ್ನು ನಿಲ್ಲಿಸಲು, ಒಳಗಿರುವ ಕ್ಷುದ್ರ ಮನಸ್ಸುಗಳಿಗೆ ಬರೆ ಹಾಕಿ ಸುಟ್ಟು ಹಾಕಬೇಕು. ಅಧಿಕಾರಕ್ಕಾಗಿ ಜನರ ಪ್ರಾಣವನ್ನು ಪಣವಾಗಿ ಇಡೋದನ್ನು ಮತೀಯವಾದಿ ರಾಜಕೀಯ ಪಕ್ಷಗಳು ನಿಲ್ಲಿಸಬೇಕು. ಧಾರ್ಮಿಕ ಅಸಮಾನತೆ ತೊಲಗಬೇಕು.

ಒಳಗಿರುವ ಭಯೋತ್ಪಾದನೆಯನ್ನು ತೊಡೆದು ಹಾಕುವ ಪ್ರಯತ್ನಗಳನ್ನು ಚಿವುಟಿಹಾಕದ ನಾವು, ದೇಶದ ಹೊರಗಿನಿಂದ ನಡೆಯುವ ಭಯೋತ್ಪಾದನೆಯನ್ನು ಮಟ್ಟ ಹಾಕಲು ದೇಶದ ಒಳಗಿರುವ ಭಯೋತ್ಪಾದಕರ ಅಭಿಪ್ರಾಯಗಳಿಗೆ ಮನ್ನಣೆ ನೀಡುವುದಾದರೆ ದೇಶದ ಭವಿಷ್ಯಕ್ಕೆ ಮಾರಕವಾದ ಬೆಳವಣಿಗೆ ಇನ್ನೊಂದಿಲ್ಲ. ಪ್ರಪಂಚದಲ್ಲಿ ನಮ್ಮ ಹಿರಿಮೆ ಉಳಿಯಬೇಕೆಂದಾದರೆ, ಚರಿತ್ರೆಯ ಕಸದಬುಟ್ಟಿಗೆ ನಾವು ಬೀಳಬಾರದೆಂದರೆ, ನಮ್ಮ ಕೋಟ್ಯಂತರ ಜನ ನೆಮ್ಮದಿಯ ಜೀವನ ನಡೆಸ ಬೇಕೆಂದಾದರೆ, ನಮ್ಮ ನಾಗರಿಕತೆಯ ದೀಪ ನಂದದಿರಬೇಕಾದರೆ, ಈ ಬೆಳವಣಿಗೆಗೆ ಪೂರ್ಣವಿರಾಮ ಬೀಳಬೇಕೆಂದಾದರೆ ಮೇಲೆ ಹೇಳಿದ ಹಾಗೆ ಪರಿಸ್ಥಿತಿಯ ವಾಸ್ತವವನ್ನು ರಾಷ್ಟ್ರದ ಜನತೆಯ ಮುಂದಿಟ್ಟರೆ ನಿಜವಾದ ತೀರ್ಪು ಜನತಾ ನ್ಯಾಯಾಲಯದಿಂದ ಬರುತ್ತದೆ. ನಮ್ಮ ಸಂವಿಧಾನದ ಆಶಯವೂ ಅದೇ.

ಪಿ. ಷಣ್ಮುಖಸ್ವಾಮಿ
ಕುಕ್ಕುವಾಡ - ೫೭೭ ೫೨೫, ದಾವಣಗೆರೆ ಜಿಲ್ಲೆ

# ಅಡಿಪಾಯ ಮತ್ತು ಮೇಲ್ಮೈ ಸಂಬಂಧಗಳು

೧೯೪೧ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ, ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ॥ ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಇದು ಎಂಟನೆಯ ಕಂತು.



ಪ್ರಪಂಚ ಮತ್ತು ಚಿಂತನೆ: ಇವೆರಡರ ಅಂತಸ್ಸಂಬಂಧ ಎಂಥದು? ಇದಕ್ಕೆ ಉತ್ತರ ಮಾರ್ಕ್ಸ್‌ವಾದಿ ಸಿದ್ಧಾಂತದಲ್ಲಿದೆ. ಸಿದ್ಧಾಂತವು ಜಿಂಕೆ ಚರ್ಮದ ಮೇಲೆ ಕೂತು ಸುಮ್ಮನೆ ಪ್ರಪಂಚದ ಬಗ್ಗೆ ವ್ಯಾಖ್ಯಾನ ನೀಡುವುದಕ್ಕಲ್ಲ, ಪ್ರಪಂಚವನ್ನು ಬದಲಿಸಲು ಅದೊಂದು ಸಾಧನ. ಚಿಂತನೆಯು ಭೌತಿಕ ಸನ್ನಿವೇಶಗಳ ಪ್ರತಿಫಲನವಷ್ಟೇ ಎಂಬಂತೆ ಮಾರ್ಕ್ಸ್ ಹೇಳಿರುವುದುಂಟು, ಆದರೆ ಸ್ವತಃ ಅವನ ಸೂಕ್ಷ್ಮ ಕಾಣ್ಕೆಗಳೇ ಇದನ್ನು ಸುಳ್ಳಾಗಿಸಿವೆ. ವಿಮುಕ್ತಿಯ ಹಾದಿಯಲ್ಲಿ ಕೊಂಡೊಯ್ಯುವಂತಹ ಕೆಲವು ಸಿದ್ಧಾಂತಗಳಿವೆ, ಅವು ಪ್ರಪಂಚದಲ್ಲಿ ಒಂದು ರಾಜಕೀಯ ಶಕ್ತಿಯಾಗಿ ಕೆಲಸ ಮಾಡಬಲ್ಲವು; ಅವು ಪ್ರಪಂಚವನ್ನು ಕೇವಲ ಅರ್ಥೈಸುವಂಥವಲ್ಲ. ಒಂದರ್ಥದಲ್ಲಿ ಅವು ಸನ್ನಿವೇಶ ಹೇಗಿದೆ ಮತ್ತು ಹೇಗಿರಬಹುದಿತ್ತು ಎಂಬುವುಗಳ ನಡುವಿನ ಕೊಂಡಿ ಎನ್ನಬಹುದು. ಪ್ರಪಂಚ ಹೇಗಿದೆಯೆಂದು ವಿವರಿಸುವ ಸಮಯದಲ್ಲೇ ಅದನ್ನು ಅರ್ಥಮಾಡಿಕೊಳ್ಳುವ ವಿಧಾನವನ್ನು ತಿಳಿಯಪಡಿಸುತ್ತವೆ ಮತ್ತು ತನ್ಮೂಲಕ ಅದನ್ನು ಬದಲಿಸಲು ಸಾಧನವಾಗುತ್ತವೆ. ಒಬ್ಬ ಗುಲಾಮನಿದ್ದಾನೆನ್ನಿ, ತಾನು ಗುಲಾಮನಾಗಿರುವುದು ಅವನಿಗೆ ಗೊತ್ತು ಆದರೆ ಏಕೆ ಆಗಿದ್ದಾನೆಂಬುದು ತಿಳಿಯದು. ಅದನ್ನು ತಿಳಿಯುವುದು ಗುಲಾಮಗಿರಿಯಿಂದ ವಿಮೋಚನೆಗೊಳ್ಳಲು ಮೊದಲ ಹೆಜ್ಜೆ. ಅಂದರೆ, ವಸ್ತುಸ್ಥಿತಿಯನ್ನು ನಿರೂಪಿಸುತ್ತಲೇ ಅಂತಹ ಸಿದ್ಧಾಂತಗಳು ಆ ಸ್ಥಿತಿಯನ್ನು ಮೀರಿ ನಿಲ್ಲಲು ಹಾದಿ ತೋರಿಸುತ್ತವೆ, ಪ್ರಸಕ್ತ ಸ್ಥಿತಿಗಿಂತಲೂ ಉತ್ತಮವಾಗಿರುವುದರತ್ತ ಕ್ರಮಿಸಲು ಸಾಧನವಾಗುತ್ತವೆ. ಇಂತಹ ಸಿದ್ಧಾಂತಗಳು ಜನರಿಗೆ ತಮ್ಮನ್ನು ಮತ್ತು ತಮ್ಮ ಸನ್ನಿವೇಶವನ್ನು ವಿವರಿಸಿ ಹೇಳುವಾಗ ಅವರು ಕೆಲವು ಪ್ರಶ್ನೆಗಳನ್ನು ಕೇಳಿಕೊಳ್ಳುವಂತೆ ಮಾಡುತ್ತವೆ; ಅದರಿಂದಾಗಿ ತಮ್ಮನ್ನು ತಾವು ಮರು-ವಿವರಿಸಿಕೊಳ್ಳುವಂತೆ ಮಾಡುತ್ತವೆ. ಇದನ್ನು ಸೂತ್ರೀಕರಿಸಿ ಹೇಳುವುದಾದರೆ ತರ್ಕ, ಜ್ಞಾನ ಮತ್ತು ಸ್ವಾತಂತ್ರ್ಯಗಳ ನಡುವೆ ಗಾಢವಾದ ಸಂಬಂಧಗಳಿವೆ ಎನ್ನಬಹುದು. ಮಾನವನ ಸ್ವಾತಂತ್ರ್ಯ ಮತ್ತು ಸುಖಕ್ಕೆ ಕೆಲವು ವಿಧದ ತಿಳಿವಳಿಕೆಗಳು ಸಾರ ಭೂತವಾದುವು. ಆ ತಿಳಿವಳಿಕೆಗಳನ್ನಾಧರಿಸಿ ಕ್ರಿಯೆಗೆ ತೊಡಗಿದಾಗ ಜನರಿಗೆ ಆ ತಿಳಿವಳಿಕೆಯು ಇನ್ನೂ ಆಳವಾಗಿ ವಿಸ್ತರಿಸಿಕೊಳ್ಳುತ್ತದೆ ಮತ್ತು ಇನ್ನೂ ಹೆಚ್ಚು ಪರಿಣಾಮಕಾರಿ ಕ್ರಿಯೆಗೆ ಅವರನ್ನು ಸಮರ್ಥರನ್ನಾಗಿಸುತ್ತದೆ. ಹೆಚ್ಚು ತಿಳಿವಳಿಕೆಯಿಂದ ಹೆಚ್ಚು ಕ್ರಿಯೆ ಎಂಬುದು ಸರಿ, ಆದರೆ ಹೆಚ್ಚು ತಿಳಿವಳಿಕೆ ಲಭಿಸುವುದು ಗ್ರಂಥಗಳನ್ನು ಅರೆದು ಕುಡಿಯುವುದರಿಂದಲ್ಲ, ನೇರವಾಗಿ ಹೋರಾಟದ ಪ್ರಯೋಗದಲ್ಲಿ ಭಾಗಿಯಾಗುವುದು ಆ ತಿಳಿವಳಿಕೆಯನ್ನು ಪಡೆಯುವ ವಿಧಾನ. ಮೃದಂಗ ನುಡಿಸುವುದು ಪ್ರಾಯೋಗಿಕ ಜ್ಞಾನದಿಂದ, ಅಂತೆಯೇ ರಾಜಕೀಯ ವಿಮೋಚನೆ ಹೊಂದುವುದು ಸಹ.

ಫ಼ಾಯರ್‌ಬಾಕ್‌ನ ಸಿದ್ಧಾಂತವನ್ನು ಕುರಿತಾದ ಮಾರ್ಕ್ಸ್‌ನ ಪ್ರಖ್ಯಾತ ಸೂತ್ರಗಳಲ್ಲಿ ಹನ್ನೊಂದನೆಯದು ಇದೆಯಲ್ಲಾ, ಅದನ್ನು ಪದಶಃ ಅರ್ಥಮಾಡಿಕೊಂಡರೆ ಸಾಲದು. ಅವನ ಸೂತ್ರ ಇದು : ತತ್ತ್ವಶಾಸ್ತ್ರಜ್ಞರು ಪ್ರಪಂಚವನ್ನು ಕೇವಲ ಅರ್ಥೈಸಿದ್ದಾರೆ, ಆದರೆ ವಿಷಯ ಇರುವುದು ಅದನ್ನು ಬದಲಿಸಬೇಕು ಎಂಬುದರಲ್ಲಿ. ಅರ್ಥೈಸದೆಯೇ ಬದಲಿಸಲು ಸಾಧ್ಯವಿಲ್ಲವೆಂಬುದು ಮಾರ್ಕ್ಸ್‌ಗೂ ತಿಳಿದಿದೆ, ಆದರೆ ಅವನು ಒತ್ತುಕೊಟ್ಟಿದ್ದು ಬದಲಾವಣೆಗೆ. ರಾಜಕೀಯ ಬದಲಾವಣೆ ಉಂಟುಮಾಡಬೇಕಾದರೆ ವಸ್ತುಸ್ಥಿತಿಯನ್ನು ಒಂದು ನಿರ್ದಿಷ್ಟ ಬೆಳಕಿನಲ್ಲಿ ಅರ್ಥೈಸುವುದು ಅಗತ್ಯವಲ್ಲವೆ ? ತನ್ನ ''ದ ಜರ್ಮನ್ ಐಡಿಯಾಲಜಿ''ಯಲ್ಲಿ ಮಾರ್ಕ್ಸ್ ಹೇಳುತ್ತಾನೆ, ವ್ಯಕ್ತಿಯ ಸಾಮಾಜಿಕ ಇರವು ಪ್ರಜ್ಞೆಯನ್ನು ರೂಪಿಸುತ್ತದೆ, ಎಂದು. ಲುಡ್ವಿಗ್ ವಿಟ್‌ಗೆನ್‌ಸ್ಟೈನನ ಪರಿಭಾಷೆಯಲ್ಲಿ ಹೇಳುವುದಾದರೆ ''ಭಾಷೆಯೊಡನೆ ನಾವಾಡುವ ಆಟಗಳ ಹಿಂದೆಲ್ಲಾ ಮೂಲತಃ ಇರುವುದು ನಮ್ಮ ಕ್ರಿಯೆ.'' ಇವು ಸಾಮಾನ್ಯ ನಿರೂಪಣೆಗಳಲ್ಲ, ಅವಕ್ಕೆ ರಾಜಕೀಯ ಆಯಾಮಗಳಿವೆ. ಉದಾಹರಣೆಗೆ, ನಮ್ಮ ಚಿಂತನೆ ಮತ್ತು ಭಾವನೆಗಳನ್ನು ತೀವ್ರವಾಗಿ ಬದಲಾಯಿಸಿಕೊಳ್ಳಬೇಕಾದರೆ ಮೊದಲು ನಮ್ಮ ಕ್ರಿಯೆಗಳನ್ನು ಬದಲಾಯಿಸಿಕೊಳ್ಳಬೇಕು. ಮೂರು ಹೊತ್ತೂ ಜೂಜಿನಲ್ಲಿ ಅಥವಾ ಮೋಜಿನಲ್ಲಿ ನಿರತರಾಗಿದ್ದರೆ ತೀವ್ರ ಚಿಂತನೆ ಮತ್ತು ಭಾವನೆ ಹೇಗೆ

ಬಂದಾವು ! ಅದಕ್ಕೆ ಸುಮ್ಮನೆ ಅಧ್ಯಯನ ಮತ್ತು 'ಹೃದಯದ ಬದಲಾವಣೆ' ಎಂಬ ಮಾತು ಸಾಲುವುದಿಲ್ಲ. ನಮ್ಮ ಚಿಂತನೆಗೆ ಸಾಮಾಜಿಕ ಇರವು ಎಲ್ಲೆಗಳನ್ನು ಹಾಕಬಲ್ಲದು, ಆ ಎಲ್ಲೆಯನ್ನು ಮೀರಿ ಬೆಳೆಯಬೇಕಾದರೆ ಸಾಮಾಜಿಕ ಇರವಿನ ಬದಲಾವಣೆ ಅಗತ್ಯ. ಅಂದರೆ, ನಮ್ಮ ಜೀವನದ ಭೌತಿಕ ಸ್ವರೂಪ ಬದಲಾಗಬೇಕು. ಇನ್ನಷ್ಟು ಚಿಂತನೆ, ಮತ್ತಷ್ಟು ಚಿಂತನೆ, ಹೀಗೆ ಚಿಂತನೆಯಿಂದಲೇ ಚಿಂತನೆಯ ಸೀಮೆಗಳನ್ನು ಮೀರಿ ಹೋಗಲಾಗುವುದಿಲ್ಲ.

ಇದರಲ್ಲೊಂದು ಆಂತರಿಕ ವಿರೋಧವಿದೆ ಎನಿಸುವುದಿಲ್ಲವೆ ? ''ಸಾಮಾಜಿಕ ಜೀವಿಗಳು'' ಎಂದು ಯಾರನ್ನು ಕರೆಯುತ್ತೇವೋ ಅವರಲ್ಲಿ ಪ್ರಜ್ಞೆ ಇರಲೇಬೇಕಲ್ಲ. ಪ್ರಜ್ಞೆ ಒಂದು ಕಡೆ, ಸಾಮಾಜಿಕ ಕ್ರಿಯೆಗಳು ಇನ್ನೊಂದು ಕಡೆ ಎಂದಿರಲಾರದು. ಮತ ಚಲಾಯಿಸುವುದು, ಮುತ್ತು ಕೊಡುವುದು, ನಮಸ್ಕಾರ ಹೇಳುವುದು, ಬಿಹಾರದಿಂದ ಬಂದ ಕೂಲಿಯಾಳುಗಳ ಶೋಷಣೆ ಮಾಡುವುದು, ಇವೆಲ್ಲಾ ಅರ್ಥವಿಲ್ಲದೆ, ಆಶಯವಿಲ್ಲದೆ, ಜರುಗುವ ಕ್ರಿಯೆಗಳಲ್ಲ. ಇಂಥವೆಲ್ಲಾ ಸೇರಿಯೇ ''ಮಾನವ ಕ್ರಿಯೆ'' ಎನಿಸಿಕೊಳ್ಳುವುದು. ಮೆಟ್ಟಿಲಿನಿಂದ ಜಾರಿ ಬೀಳುವುದು ಉದ್ದೇಶಿತ ಕ್ರಿಯೆಯಲ್ಲ, ಆದರೆ ಅದೂ ಕ್ರಿಯೆಯೇ. ಅಂದರೆ, ಮಾರ್ಕ್ಸ್ ಪ್ರಜ್ಞೆಯನ್ನು ನಮ್ಮ ಪ್ರಾಯೋಗಿಕ ನಡತೆಯಲ್ಲಿ ಹುದುಗಿರುವಂಥದು ಎಂದು ಭಾವಿಸುತ್ತಾನೆ. ಆದಾಗ್ಯೂ ಭೌತಿಕ ಇರವು ಎಂಬುದು ಅರ್ಥಗಳು ಮತ್ತು ಭಾವನೆಗಳಿಗಿಂತಲೂ ಮೂಲಭೂತವಾದವು; ಅವನ್ನು ಭೌತಿಕ ಇರವಿನಿಂದ ವ್ಯಾಖ್ಯಾನಿಸಬಹುದು.

ಹಾಗೆಂದರೇನು ? ಮಾನವರಿಗೆ ಚಿಂತನೆಯು ಒಂದು ಭೌತಿಕ ಅವಶ್ಯಕತೆ. ಅಂತಹ ಚಿಂತನೆಗಿಂತ ಕಡಿಮೆ ಮಟ್ಟದಲ್ಲೇ ಆದರೂ ಹಂದಿ ಮತ್ತು ಚಿಟ್ಟೆ ಸಹ ಚಿಂತಿಸುತ್ತವೆ. ಭೌತಿಕ ಪ್ರಾಣಿಗಳಾಗಿ, ದೇಹವುಳ್ಳವರಾಗಿ, ಏನಾದರೊಂದನ್ನು ನಾವು ಗ್ರಹಿಸುತ್ತಲೇ ಇರುತ್ತೇವೆ. ಅಂತಹ ಗ್ರಹಿಕೆಗಳ ಫಲ ದುಡಿಮೆ, ಉದ್ಯಮ ಮತ್ತು ಪ್ರಯೋಗ. ''ಭಾವನೆ, ಪರಿಕಲ್ಪನೆ, ಪ್ರಜ್ಞೆ, ಇವೆಲ್ಲಾ ಭೌತಿಕ ಕ್ರಿಯೆ, ಮಾನವರ ಭೌತಿಕ ಪರಸ್ಪರ ಸಂಬಂಧ, ನಿಜ ಜೀವನದಲ್ಲಿನ ಭಾಷೆ, ಇವುಗಳೊಂದಿಗೆ ಹಾಸುಹೊಕ್ಕಾಗಿ ಬೆರೆತಿವೆ,'' ಎನ್ನುತ್ತಾನೆ ಮಾರ್ಕ್ಸ್. ತನ್ನ ರಸವತ್ತಾದ ಕವಳವನ್ನು ಪ್ರಕೃತಿಯು ಸುಮ್ಮನೆ ನಮ್ಮ ಬಾಯಿಗೆ ಸುರಿಯುವುದಿಲ್ಲ. ಇಡೀ ಜೀವನದಲ್ಲಿ ಒಮ್ಮೆ ಮಾತ್ರ ಉಂಡರೆ ಸಾಕೆಂದೇನಾದರೂ ಇದ್ದಿದ್ದರೆ ನಾವು ಹೆಚ್ಚು ಚಿಂತನೆ ನಡೆಸಬೇಕಾಗುತ್ತಿರಲಿಲ್ಲವೇನೊ. ಆಗ ಬೇಕಾದಂತೆ ಖುಷಿಯಲ್ಲಿ ಮೀಯುತ್ತಾ ಇರಬಹುದಿತ್ತು. ಆದರೆ ಪ್ರಕೃತಿ ಅಷ್ಟೊಂದು ದಯಾಮಯಿಯಲ್ಲ, ಮತ್ತು ಮಾನವ ಶರೀರದ ಅಗತ್ಯಗಳು ಕನಿಷ್ಠ ಮಟ್ಟದಲ್ಲಿಯಾದರೂ ಪೂರೈಕೆ ಆಗಲೇಬೇಕು. ಈ ಅಗತ್ಯಗಳು ನಮ್ಮ ಚಿಂತನೆಗೆ ಮೂಲ. ಅದೇ ತೋರಿಸುತ್ತದೆ, ಚಿಂತನೆಯೇ ಸರ್ವಸ್ವವಲ್ಲವೆಂಬುದನ್ನು. ಆದರೆ ಕುಚೋದ್ಯ ಹೇಗಿದೆ ನೋಡಿ, ಎಷ್ಟೋ ವೇಳೆ ಚಿಂತನೆಯೇ ಸರ್ವಸ್ವವೆಂಬ ಚಿಂತನೆ ಬಂದಿದೆ. ಮಾನವನ ಬೆಳವಣಿಗೆಯು ಮುಂದೆ ಸಾಗುತ್ತಿದ್ದಂತೆ ಶರೀರದ ಅಗತ್ಯಗಳಿಂದ ಸ್ವಲ್ಪಮಟ್ಟಿಗೆ ಭಾವನೆಗಳು ಮುಕ್ತವಾಗುತ್ತವೆ, ಎನ್ನುತ್ತಾನೆ ಮಾರ್ಕ್ಸ್. ಅದನ್ನೇ ನಾವು ಸಂಸ್ಕೃತಿ ಎನ್ನುತ್ತೇವೆ. ಭಾವನೆಗಳನ್ನು ಅವುಗಳಿಗಾಗಿಯೇ ಸವಿಯುವಂತಹ ಸ್ಥಿತಿ ಅದು. ಬರ್ಟೋಲ್ಟ್ ಬ್ರೆಕ್ಟ್ ಒಮ್ಮೆ ಹೇಳಿದ್ದ, ''ಚಿಂತನೆಯು ನಿಜವಾದ ಐಂದ್ರಿಯ ಸುಖವಾಗಬಲ್ಲದು,'' ಎಂದು. ಏನೇ ಇದ್ದರೂ ಜೈವಿಕ ಅಗತ್ಯದ ಹಿನ್ನೆಲೆ ಇಲ್ಲದೆ ಚಿಂತನೆ, ತರ್ಕ, ಹೊಮ್ಮುವುದಿಲ್ಲ. ಚಿಂತನೆ ಬಹು ಎತ್ತರಕ್ಕೇರಬಲ್ಲದು, ಆದರೆ ಅದರ ಉಗಮ ಮಾತ್ರ ಜೈವಿಕ ಅಗತ್ಯದಲ್ಲೇ. ಫ್ರೆಡ್ರಿಕ್ ನೀಶೆ ಅದನ್ನು ವಿವರಿಸಿದ ಪರಿ ಇದು : ''ಚಿಂತನೆಗೂ ಪ್ರಕೃತಿಯ ಮೇಲೆ ನಾವು ಚಲಾಯಿಸುವ ಅಧಿಕಾರಕ್ಕೂ ಅನ್ಯೋನ್ಯ ಸಂಬಂಧವಿದೆ.'' ಪರಿಸರವನ್ನು ಹೇಗೆ ನಿಭಾಯಿಸಿಕೊಳ್ಳುತ್ತೇವೆಂಬುದು ಜೀವನ್ಮರಣದ ಪ್ರಶ್ನೆ, ಆದರೆ ನಮ್ಮೆಲ್ಲ ಅಮೂರ್ತ ಬೌದ್ಧಿಕ ಚಟುವಟಿಕೆಗಳಿಗೂ ಪರಿಸರದ ನಿಭಾವಣೆಯು ಆದಿ ಎನ್ನಬಹುದು.

ಮಾನವನಲ್ಲಿ ಉದಾತ್ತತೆ ಮತ್ತು ಕೀಳುತನ ಎರಡೂ ಮನೆ ಮಾಡಿಕೊಳ್ಳಬಲ್ಲವು. ಯಾವುದು ನಿಚ್ಚಳವಾಗಿ ಪ್ರಕಟಗೊಳ್ಳುತ್ತದೆಂಬುದು ಕೇವಲ ಸದಿಚ್ಛೆಯ ವಿಷಯವಲ್ಲ. ಸಾಹಿತ್ಯ ವಿಮರ್ಶಕ ವಿಲಿಯಂ ಎಂಪ್ಸನ್ ಒಮ್ಮೆ ಹೇಳಿದ್ದ, ''ಅತಿ ಸರಳ ಆಶಯಗಳಲ್ಲಿ ಅತಿ ಸಂಸ್ಕೃತ ಆಶಯಗಳು ಹುದುಗಿರುತ್ತವೆ,'' ಎಂದು. ಅತ್ಯುದಾತ್ತವೆನ್ನಲಾದ ಪರಿಕಲ್ಪನೆಗಳ ಮೂಲದಲ್ಲಿ ಹಿಂಸೆ, ಆಸೆ, ಹಸಿವು, ರೋಷ, ಆಕ್ರಮಣ, ಕೊರತೆ, ಎಲ್ಲಾ ಇರುತ್ತವೆ. ನಾಗರಿಕತೆಯ ಬೆಳವಣಿಗೆಯ ಹಿಂದಿನ ಕಾಣದ ಕ್ರೌರ್ಯಕ್ಕೆ ಇದೇ ಕಾರಣ. ''ಸಂಸ್ಕೃತಿಯ ಮಹಾನ್ ಪ್ರತೀಕದ ಹಿನ್ನೆಲೆಯಲ್ಲಿ ಅದೆಂತಹ ಭಯಂಕರ ಸ್ಥಿತಿ'' ಎನ್ನುತ್ತಾನೆ ಥಿಯೋಡರ್ ಅಡೋರ್ನೊ. ಅದನ್ನೇ ವಾಲ್ಟರ್ ಬೆಂಜಮಿನ್ ಬೇರೆ ಮಾತುಗಳಲ್ಲಿ

ಹೇಳಿದ್ದಾನೆ : ''ಒರಟು ಭೌತಿಕ ಪದಾರ್ಥಗಳಿಗಾಗಿ ಸೆಣಸಾಟ ವರ್ಗ ಹೋರಾಟದಲ್ಲಿದೆ; ಆದರೆ ಅದಿಲ್ಲದೆ ನವಿರು ಮತ್ತು ಆಧ್ಯಾತ್ಮಿಕ ಸಂಪತ್ತು ಎಲ್ಲಿಂದ ಬಂದೀತು !'' ಬೆಂಜಮಿನ್ ಆಗಲಿ, ಮಾರ್ಕ್ಸ್ ಆಗಲಿ, ಸುಸಂಸ್ಕೃತ ಮನಸ್ಸು ಮತ್ತು ಭೌತಿಕೇತರ ವಿಷಯಗಳನ್ನು ತೆಗಳುವುದಿಲ್ಲ; ಅವನ್ನು ಚಾರಿತ್ರಿಕ ಸಂದರ್ಭದಲ್ಲಿರಿಸಿ ನೋಡಬೇಕೆನ್ನುವುದಷ್ಟೇ ಅವರ ಅಪೇಕ್ಷೆ. ಸುಮ್ಮನೆ ಉಜ್ವಲ ಭಾವನೆಗಳನ್ನು ಆರಾಧಿಸುವುದನ್ನು ಮಾರ್ಕ್ಸ್ ಇಷ್ಟಪಡಲಿಲ್ಲ, ಅಷ್ಟೆ. ಅದಕ್ಕೆ ಪ್ರತಿಯಾಗಿ ಅದೆಷ್ಟು ಮಠಾಧೀಶರು ಮತ್ತು ಸಾಂಪ್ರದಾಯಿಕ ರಾಜಕಾರಣಿಗಳಿದ್ದಾರೆ : ಅವರ ಮಾತೆಲ್ಲಾ ಆದರ್ಶ ಭಾವನೆಗಳದ್ದು, ಆದರೆ ಖಾಸಗಿ ಜೀವನದಲ್ಲಿ ಅವರಿಗಿಂತ ಹೆಚ್ಚು ಕೀಳಾಗಿ ಭೌತಿಕ ಸಂಪತ್ತನ್ನು ಶೇಖರಿಸುವವರು ವಿರಳ.

ಪ್ರಜ್ಞೆ ಮತ್ತು 'ಸಾಮಾಜಿಕ ಇರವು' ಎಂಬುದರ ವ್ಯಾಪ್ತಿಯಲ್ಲಿ ಇದೆಲ್ಲಾ ಸೇರಿದೆ. ನಾವೇನು ಮಾಡುತ್ತೇವೋ ಅದರಿಂದ ನಮ್ಮ ನಿಜವಾದ ತಿಳಿವಳಿಕೆ ತಿಳಿದುಬರುತ್ತದೆ. ಪ್ರಕಟವಾಗಿ ವ್ಯಕ್ತಪಡಿಸದ ಜ್ಞಾನವೊಂದು ನಮ್ಮಲ್ಲಿದೆ; ಅದನ್ನು ಪಡೆಯುವುದು ನಮ್ಮ ಕ್ರಿಯೆಗಳ ಮೂಲಕವೇ. ಅದನ್ನು ಸಿದ್ಧಾಂತ ರೂಪದಲ್ಲಿ ಇತರರಿಗೆ ವರ್ಗಾಯಿಸಲು ಸಾಧ್ಯವಿಲ್ಲ. ಕುರಿ ಅಟ್ಟಿಕೊಂಡು ಹೋಗುವವನಿಗೆ ಸಹಜವಾಗಿ 'ಟರ್ ಬ್ಯಾ' ಬರುವಂತೆ ಮ್ಯಾಕ್ಡೊನಾಲ್ಡ್ ಭಕ್ಷಕನಿಗೆ ಬರುವುದುಂಟೆ ! ಬಾಲಚಂದರ್ ವೀಣೆ ನುಡಿಸುವುದನ್ನು ಯಾರಿಂದಲೂ ಕಲಿಯಲಿಲ್ಲವಂತೆ, ಆದರೆ ''ನೀವೇ ಮಾಡಿ ನೋಡಿ'' ಪುಸ್ತಕದಿಂದ ಎಷ್ಟು ಮಂದಿ ಒಂದು ಕಾರು ತಯಾರಿಸಲು ಕಲಿಯಲು ಸಾಧ್ಯ ? ಬಾಲಚಂದರ್ ಸಹ ಒಮ್ಮೆಗೇ ಧೇನುಕ ರಾಗ ನುಡಿಸಿಬಿಡಲಿಲ್ಲ.

ಭೌತಿಕ ಸತ್ಯವು ಭಾವನೆಗಳಿಗಿಂತಲೂ ಹೆಚ್ಚಿನ ಸ್ಥಾನ ಪಡೆಯುವುದರಲ್ಲಿ ಇನ್ನೊಂದು ಅಂಶವಿದೆ. ಪ್ರಜ್ಞೆಯ ಬಗ್ಗೆ ಹೇಳುವಾಗ ಮಾರ್ಕ್ಸ್ ಕೇವಲ ಭಾವನೆಗಳು ಮತ್ತು ಮೌಲ್ಯಗಳನ್ನು ದೃಷ್ಟಿಯಲ್ಲಿರಿಸಿಕೊಳ್ಳುವುದಿಲ್ಲ. ಅವುಗಳಲ್ಲಿ ಕೆಲವು ನಮ್ಮ ದೈನಂದಿನ ಚಟುವಟಿಕೆಗಳಲ್ಲಿ ಅಂತರ್ಗತವಾಗಿವೆ. ರೊಟ್ಟಿ ತಿನ್ನುತ್ತಿರುವಾಗ ನಾಯಿಮರಿಗೆ ಒಂದು ತುಣುಕು ಹಾಕುವ ಸಹಜಕ್ರಿಯೆ ಅಂತಹದು. ಆದರೆ ಮಾರ್ಕ್ಸ್‌ನ ದೃಷ್ಟಿಯಲ್ಲಿರುವುದು ಹೆಚ್ಚು ಔಪಚಾರಿಕವಾದ ಸಂಗತಿಗಳ ಹಿನ್ನೆಲೆಯಲ್ಲಿ ಪ್ರಜ್ಞೆ ಮೂಡುವ ಪರಿ. ಉದಾಹರಣೆಗೆ, ಕಾನೂನು-ರಾಜಕೀಯ-ವಿಜ್ಞಾನ-ಬಡತನದ ಬಗೆಗಿನ ಭೋಳೆತನ, ಇತ್ಯಾದಿ. ಈ ರೂಪದ ಚಿಂತನೆಗೂ ಸಾಮಾಜಿಕ ಅಸ್ತಿತ್ವಕ್ಕೂ ಸಂಬಂಧವಿದೆ. ಅದನ್ನು ಕುರಿತ ಮಾರ್ಕ್ಸ್‌ನ ಒಂದು ವಿಶ್ಲೇಷಣೆಯನ್ನು ಬೇಕಾದಷ್ಟು ವಿರೂಪಗೊಳಿಸಿ ನಗೆಪಾಟಲಿಗೆ ಈಡು ಮಾಡಿದ್ದಾರೆಂಬುದು ಬೇರೆ ವಿಷಯ, ಆದರೆ ಅದರಲ್ಲಿ ಅಡಿಪಾಯ ಮತ್ತು ಮೇಲ್ಮೈ (ಅಥವಾ ಹೊರಮೈ)ಗಳ ನಡುವಣ ಸಾಮಾನ್ಯ ಸಂಬಂಧದ ನಿರೂಪಣೆ ಇದೆ. ಅವನ ಮಾತಿನ ಸಾರಾಂಶ ಇದು : ಮಾನವನ ಇರವಿನಲ್ಲಿ ಸಾಮಾಜಿಕ ಉತ್ಪಾದನೆ ಎಂಬುದಿದೆ. ಅದನ್ನು ಆಗುಮಾಡುವಾಗ ಮಾನವ ಅನೇಕ ಸಂಬಂಧಗಳನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಅದಕ್ಕೆ ಅವನ ಸಮ್ಮತಿ ಇಲ್ಲದಿದ್ದಾಗ್ಯೂ ಸಂಬಂಧ ಅನಿವಾರ್ಯ. ಅದೆಂತಹ ಸಂಬಂಧ ? ಉತ್ಪಾದನೆಯ ವಿಧಾನದಲ್ಲಿ ಭೌತಿಕ ಶಕ್ತಿಗಳು ಸದಾ ಒಂದೇ ಬಗೆಯವಲ್ಲ. ಕೋಲಿನಿಂದ ನೆಲ ಕೆರೆದು ತರಕಾರಿ ಬೆಳೆಯುವ ಹಂತ ಒಂದಾದರೆ, ಟ್ರ್ಯಾಕ್ಟರ್‌ನಿಂದ ಉಳುಮೆ ಮಾಡಿ ಫಸಲು ಪಡೆಯುವುದು ಬೇರೊಂದು ಹಂತ. ಎರಡು ಹಂತಗಳಲ್ಲೂ ಉತ್ಪಾದನಾ ಸಲಕರಣೆಗಳಿವೆ, ಉತ್ಪಾದನಾ ಸಂಬಂಧಗಳಿವೆ. ನೆಲ ಕೆರೆಯುವ ಕೋಲಿನ ಒಡೆಯ ಕೆರೆಯುವವನೇ ಆದಂತೆ, ಟ್ರ್ಯಾಕ್ಟರ್‌ನಿಂದ ಉಳುಮೆ ಮಾಡುವ ವ್ಯಕ್ತಿ ಅದರ ಒಡೆಯನೇ ಆಗಿಲ್ಲದಿರಬಹುದು. ಉತ್ಪಾದನಾ ಸಂಬಂಧಗಳನ್ನು ಒಟ್ಟಾಗಿ ನೋಡಿದಾಗ ಆಯಾ ಸಂದರ್ಭದಲ್ಲಿ ಸಮಾಜದ ಆರ್ಥಿಕ ಸಂರಚನೆ ಎಂಥದೆಂಬುದು ತಿಳಿಯುತ್ತದೆ. ಅದು ನಿಜವಾದ ಅಡಿಪಾಯ. ಅದರ ಮೇಲೆ ಕಟ್ಟಲಾಗುವುದನ್ನು ಮೇಲ್ಮೈ ಎನ್ನುತ್ತೇವೆ. ಅದರಲ್ಲಿ ಶಿಕ್ಷಣ, ಕಾನೂನು, ರಾಜಕೀಯ, ತತ್ತ್ವಶಾಸ್ತ್ರ, ಎಲ್ಲವೂ ಅಡಕಗೊಳ್ಳುತ್ತವೆ. ಆ ಮೇಲ್ಮೈಗೂ ನಿರ್ದಿಷ್ಟ ಸಾಮಾಜಿಕ ಪ್ರಜ್ಞೆಗೂ ನೇರ ಸಂಬಂಧ ಇರುತ್ತದೆ.

ಮಾರ್ಕ್ಸ್‌ನ ಪರಿಭಾಷೆಯಲ್ಲಿ, ಅಡಿಪಾಯವೆಂದರೆ ಉತ್ಪಾದನಾ ಸಾಧನಗಳು ಮತ್ತು ಸಂಬಂಧಗಳು; ಮೇಲ್ಮೈ ಎಂದರೆ ಪ್ರಭುತ್ವ, ಕಾನೂನು, ಮತಧರ್ಮ, ರಾಜಕೀಯ, ಸಂಸ್ಕೃತಿ, ಇತ್ಯಾದಿಗಳು. ಮೇಲ್ಮೈನ ಕಾರ್ಯವು ಅಡಿಪಾಯವನ್ನು ಬೆಂಬಲಿಸುವುದು, ಗಟ್ಟಿಗೊಳಿಸುವುದು, ಆಗಿದೆ. ಅಡಿಪಾಯವೆಂದರೆ ಪ್ರಸ್ತುತ ಆಯಾ ಸಂದರ್ಭಗಳಲ್ಲಿ ಅಸ್ತಿತ್ವದಲ್ಲಿರುವ ವರ್ಗ ವ್ಯವಸ್ಥೆ. ಮೇಲ್ಮೈನ ಅಂಗಗಳಾದ ಮತಧರ್ಮ, ಸಂಸ್ಕೃತಿ, ಮುಂತಾದವು ಆಯಾ ವ್ಯವಸ್ಥೆಯನ್ನು ಸಮರ್ಥಿಸಲು ಅಗತ್ಯವಾದ ಭಾವನೆಗಳನ್ನು ಉತ್ಪಾದಿಸುತ್ತವೆ. ಅದನ್ನು ''ಸಿದ್ಧಾಂತ'' (ಐಡಿಯಾಲಜಿ) ಎನ್ನುತ್ತೇವೆ. ''ದ ಜರ್ಮನ್ ಐಡಿಯಾಲಜಿ'' ಎಂಬ ಗ್ರಂಥದಲ್ಲಿ ಮಾರ್ಕ್ಸ್‌ನ ಒಂದು ಮಾತು ಹೀಗಿದೆ : ''ಪ್ರತಿಯೊಂದು ಯುಗ ಅಥವಾ ಕಾಲದಲ್ಲೂ ಅಂದಂದಿನ ಆಳುವ ವರ್ಗದ ಭಾವನೆಗಳು, ಆಯಾ ಯುಗದ ಆಳುವ ಭಾವನೆಗಳಾಗಿರುತ್ತವೆ.'' ಇದನ್ನು 'ಅ ಯಿಂದ ಳ ವರೆಗೆ' ಎಂಬಂತೆ ಅನ್ವಯಿಸುವುದು ಮಾರ್ಕ್ಸ್‌ನ ಉದ್ದೇಶವಲ್ಲ; ಸ್ಥೂಲವಾಗಿ ಹಾಗಿರುತ್ತದೆ ಎಂಬುದು ಅವನರ್ಥ. ಉದಾಹರಣೆಗೆ, ಊಳಿಗಮಾನ್ಯ ವ್ಯವಸ್ಥೆಯಡಿ ಅದನ್ನು ತೀವ್ರವಾಗಿ ವಿರೋಧಿಸುವ ಭಾವನೆಗಳು ಅಷ್ಟಾಗಿ ಇರುವುದಿಲ್ಲ; ಇದ್ದರೆ ಮಿತವಾಗಿ ಇರುತ್ತವೆ. ಅದಕ್ಕೆ ಒಂದು ಕಾರಣ, ಆ ವ್ಯವಸ್ಥೆಯಲ್ಲಿ ಭೌತಿಕ ಉತ್ಪಾದನೆಯನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿರುವವರು ಅಂದಿನ ಬೌದ್ಧಿಕ ಭಾವನೆಗಳನ್ನೂ ಉತ್ಪಾದಿಸುತ್ತಿರುತ್ತಾರೆ. ಇಂದಿನ ಸನ್ನಿವೇಶಕ್ಕೆ ಇದು ಇನ್ನೂ ಹೆಚ್ಚಿನ ಮಟ್ಟದಲ್ಲಿ ಅನ್ವರ್ಥವಾಗಿದೆ. ನಮ್ಮ ಕಾರ್ಪೊರೇಟ್ ಮಾಧ್ಯಮಗಳು, ಆಳುವ ವರ್ಗದಿಂದ ಪೋಷಿಸಲ್ಪಟ್ಟ ಮಠಾಧೀಶ ಮುಂತಾದ ಮುಖವಾಣಿಗಳು, ಪಠ್ಯಪುಸ್ತಕಗಳಲ್ಲಿ ತುಂಬಲಾಗುವ ಅ-ಚಾರಿತ್ರಿಕ ವಿಷಯಗಳು, ಎಲ್ಲಿಲ್ಲದ ದೇವತೆಗಳು-ಪೂಜೆಗಳು, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳ ಪುರೋಹಿತರ ಕಪಿಮುಷ್ಟಿ, ಹಿಂಸೆ ಮತ್ತು ಅಶ್ಲೀಲತೆ ಪ್ರಧಾನವಾಗಿರುವ ಚಲನಚಿತ್ರಗಳು, ಇತ್ಯಾದಿಗಳೆಲ್ಲಾ ಆಳುವ ವರ್ಗದ ಹಿತವನ್ನು ಕಾಪಾಡುವ ಸಿದ್ಧಾಂತಗಳನ್ನು ತಾನೆ ಪ್ರಚಾರ ಮಾಡುವುದು !

ಮೊದಲೇ ಹೇಳಿದಂತೆ ಅಡಿಪಾಯ - ಮೇಲ್ಮೈ ಸಂಬಂಧವು ಹೀಗೆ ಪೂರ್ಣವಾಗಿ ನಿಬದ್ಧವಾದ ಸೂತ್ರವಲ್ಲ. ಅದನ್ನು ಮಾರ್ಕ್ಸ್‌ನ ವಿರೋಧಿಗಳು ಟೀಕಿಸಿರುವಂತೆ ಅವನ ಸಮರ್ಥಕರು ಸಹ ಟೀಕಿಸಿರುವುದುಂಟು. ಅದರ ಮೇಲಿನ ಒಂದು ಆಕ್ಷೇಪ, ಸ್ಥಗಿತವಾದ ಸಂಬಂಧವೆಂಬಂತೆ ಅದು ನಿರೂಪಣೆ ಮಾಡುತ್ತದೆ ಎಂಬುದು. ಇದು ಬೇರೆ ಹಲವು ಮಾದರಿಗಳ ಬಗೆಗೂ ನಿಜವಾದ ಟೀಕೆಯೇ. ಉದಾಹರಣೆಗೆ, ''ಧರ್ಮವು ನೈತಿಕತೆಯ ಮೂಲ'' ಎಂಬ ಸೂತ್ರವನ್ನು ನೋಡಿ. ಅದು ಸಹ ಸ್ಥಗಿತ ಸಂಬಂಧದ ನಿರೂಪಣೆಯೇ. ಜೊತೆಗೆ, ಅದು ಅವಾಸ್ತವಿಕ ನಿರೂಪಣೆ ಸಹ ! ಸಾಮಾಜಿಕ ಜೀವನದಲ್ಲಿ ಎರಡು ನಿರ್ದಿಷ್ಟ ಮತ್ತು ಪ್ರತ್ಯೇಕ ಹೋಳುಗಳಿವೆಯೆಂದು ಮಾರ್ಕ್ಸ್ ಹೇಳುತ್ತಿಲ್ಲ. ಅವೆರಡರ ನಡುವೆ ನಿರಂತರವಾದ ಪಾರಸ್ಪರಿಕ ಸಂಬಂಧವಿದೆಯೆಂಬುದು ಅವನ ಮಾತು. ಅಡಿಪಾಯವು ಮೇಲ್ಮೈಗೆ ಹಾದಿ ಮಾಡಿಕೊಡುತ್ತದೆ; ಆದರೆ ಅಡಿಪಾಯವು ಜೀವಂತವಾಗಿರಲು ಮೇಲ್ಮೈ ಸಹ ಅಗತ್ಯ. ಇದು ಕಟ್ಟಡದ ಅಡಿಪಾಯದಂತಲ್ಲ; ಅಲ್ಲಿ ಕಟ್ಟಡ ಕಟ್ಟದಿದ್ದರೂ ಅಡಿಪಾಯವು ಸಾಕಷ್ಟು ಕಾಲ ಅಸ್ತಿತ್ವದಲ್ಲಿರಲು ಸಾಧ್ಯ. ಸಾಮಾಜಿಕ ಜೀವನದಲ್ಲಿನ ಅಡಿಪಾಯ ಮತ್ತು ಮೇಲ್ಮೈ ಅದರಂತಲ್ಲ. ಬದಲಾಗಿ, ಒಂದಕ್ಕೆ ಇನ್ನೊಂದು ಪೂರಕ ಮತ್ತು ಪೋಷಕ. ಪ್ರಭುತ್ವ, ಕಾನೂನು ವ್ಯವಸ್ಥೆ, ರಾಜಕೀಯ ಪಕ್ಷಗಳು, ಬಂಡವಾಳಶಾಹಿಯನ್ನು ಶ್ಲಾಘಿಸುವ ಮಾಧ್ಯಮಗಳು, ಇವೆಲ್ಲಾ ಮೇಲ್ಮೈನ ಭಾಗಗಳು. ಆದರೆ ಅವಿಲ್ಲದಿದ್ದರೆ ಅಡಿಪಾಯವಾದ ಆಸ್ತಿ ಸಂಬಂಧಗಳು ಕುಸಿದುಬೀಳುತ್ತವೆ. ಆದ್ದರಿಂದ ಇಲ್ಲಿ ದ್ವಿಮುಖ ಚಲನೆ ಇದೆ. ಹಿಂದಿನ ಸಾಮಾಜಿಕ ಸಂರಚನೆಗಳಿಗೆ ಸಹ ಇದು ಅನ್ವಯವಾಗುತ್ತದೆ;

Ëa¯P¥

## ಲೊಳಲೊಟ್ಟೆ

ಬೃಹತ್ ಸುಸಜ್ಜಿತ ಮಠದ ಸಭಾಂಗಣ. ಹುಲಿಚರ್ಮದ ಮೇಲೆ ಆಸೀನರಾಗಿದ್ದ ಸ್ವಾಮೀಜಿ – ''ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ ...'' ವಾಕ್ ಪ್ರವಾಹ ಹರಿಸಿದ್ದರು. ಸಭಿಕರಲ್ಲೊಬ್ಬ ಆಕಳಿಸಿ – ''ಎಲ್ಲ ಲೊಳಲೊಟ್ಟೆ'' ಎಂದು ಮುಖ ಕಿವುಚಿಕೊಂಡ.

**ಮ. ಶ್ರೀ. ಮುರಳಿಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜ ಗಾರ್ಡನಿಯಾ ಲೇಔಟ್
ತುರಹಳ್ಳಿ ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು - ೬೧

ಉದಾಹರಣೆಗೆ, ಗುಲಾಮಿ ವ್ಯವಸ್ಥೆ, ಊಳಿಗಮಾನ್ಯ ವ್ಯವಸ್ಥೆ, ಇತ್ಯಾದಿ.

ಇನ್ನೂ ಒಂದು ವಿಚಾರವಿದೆ: ಅಡಿಪಾಯವು ಮುಖ್ಯ, ಮೇಲ್ಮೈ ಗೌಣ, ಎಂಬ ಮಾತಿಗೆ ಇಲ್ಲಿ ಆಸ್ಪದವಿಲ್ಲ. ಬ್ಯಾಂಕು, ಕಲ್ಲಿದ್ದಲು ಗಣಿ, ಕಾಡು ಕಡಿದು ನಾಡು ಕಟ್ಟುವುದು, ರೈತನ ಹೊಲ ಕಿತ್ತುಕೊಂಡು ಉದ್ದಿಮೆ ಸ್ಥಾಪಿಸುವುದು, ಇವೆಲ್ಲಾ ಎಷ್ಟು ಸತ್ಯವೋ ಅಷ್ಟೇ ಸತ್ಯವಾದುವು ಚರ್ಚು, ಮಠ, ಮಸೀದಿ, ಕಾರಾಗೃಹ, ಶಾಲೆ, ಮಾಧ್ಯಮ, ಮುಂತಾದವು. ಒಂದು ಅಡಿಪಾಯ, ಇನ್ನೊಂದು ಮೇಲ್ಮೈ ಎಂದು ಅವುಗಳ ಪ್ರಾಮುಖ್ಯತೆಯಲ್ಲಿ ವ್ಯತ್ಯಾಸವಿಲ್ಲ. ಹಾಗಿದ್ದರೆ ಅಡಿಪಾಯವು ಮೇಲ್ಮೈಗಿಂತ ಯಾವ ಅರ್ಥದಲ್ಲಿ ಹೆಚ್ಚು ಮುಖ್ಯ? ಒಂದು ದೃಷ್ಟಾಂತದಿಂದ ಇದನ್ನು ಅರ್ಥ ಮಾಡಿಕೊಳ್ಳೋಣ. ಕಡುಬು ಮಾಡುವ ಹೊಸ ವಿಧಾನವೊಂದು ಅಸ್ತಿತ್ವಕ್ಕೆ ಬರುತ್ತದೆನ್ನಿ; ಅದು ಅಡಿಪಾಯದ ವಿಸ್ತರಣೆ. ಅದೇ ಒಂದು ಹೊಸ ಕವನವೋ ಚಿತ್ರಕಲೆಯೋ ಬಂದರೆ ಅದು ಮೇಲ್ಮೈನ ವಿಸ್ತರಣೆ. ಸಾಂಸ್ಕೃತಿಕವಾಗಿ ಹೊಸ ಕವನವು ಕಡುಬು ಮಾಡುವ ಹೊಸ ವಿಧಾನಕ್ಕಿಂತಲೂ ಹೆಚ್ಚು ಮುಖ್ಯ. ಅಂದರೆ, ಮೇಲ್ಮೈ ಎಂಬುದು ಅಡಿಪಾಯಕ್ಕಿಂತಲೂ ಹೆಚ್ಚು ಪ್ರಮುಖ ಸ್ಥಾನ ಪಡೆಯುತ್ತದೆ. ಆದರೆ, ಚರಿತ್ರೆಯಲ್ಲಿ ಒಂದು ಹೊಸ ಯುಗದ ಆವಿಷ್ಕಾರವಾಗುವುದು ಮೇಲ್ಮೈ ಆದ ಭಾವನೆಗಳು, ವಿಚಾರಗಳು ಮತ್ತು ನಂಬಿಕೆಗಳಿಂದ ಅಲ್ಲ. ಅದಕ್ಕೆ ಭೌತಿಕ ಶಕ್ತಿಗಳು ಮೂಲಕಾರಣ. ಒಂದು ನಿದರ್ಶನ ನೋಡಿ: ಬಸವಣ್ಣನವರ ವಿಚಾರಕ್ರಾಂತಿ ಅನನ್ಯವಾದ್ದು; ಅದು ಸಾಮಾಜಿಕ ಕ್ರಾಂತಿಗೆ ಕರೆಕೊಟ್ಟಿತು, ಪ್ರೇರಣೆ ನೀಡಿತು. ಈಗಲೂ ಅದನ್ನು ಮಾಡುವ ಸಾಮರ್ಥ್ಯ ಬಸವಣ್ಣನವರ ವಿಚಾರಗಳಿಗೆ ಇದೆ. ಆದರೆ ಅವರ ಕಾಲದ ಊಳಿಗಮಾನ್ಯ ವ್ಯವಸ್ಥೆಯಡಿ ಭೌತಿಕ ಶಕ್ತಿಗಳು ಅವರ ವೈಚಾರಿಕ ಕ್ರಾಂತಿಗೆ ಶಕ್ಯವಾದ, ಮೂರ್ತವಾದ, ಇಂಬು ನೀಡದಾದುವು. ಇಂದಿನ ಭೌತಿಕ ಶಕ್ತಿಗಳಿಗೆ ಆ ಸಾಧ್ಯತೆಯುಂಟು, ಆದರೆ ಮಠಗಳ ಹಿಡಿತವು ಬಸವಣ್ಣನವರ ವಿಚಾರಗಳಿಗೆ ಲಗಾಮಿನಂತಾಗಿಬಿಟ್ಟಿದೆ. ಅಂದರೆ, ವಿಚಾರಕ್ಕೆ ಪೂರಕವಾಗಿ ಭೌತಿಕ ಶಕ್ತಿಗಳು ಕೈ ಜೋಡಿಸಿದಾಗ ಮಾತ್ರ ಹೊಸ ಚರಿತ್ರೆಯ ಆವಿರ್ಭಾವವು ಸಾಧ್ಯ.

ಅಶೋಕ, ಸಮುದ್ರಗುಪ್ತ, ಶ್ರೀಹರ್ಷ, ಮುಂತಾದವರು ಯುದ್ಧ ಮಾಡಿದ್ದೇಕೆ? ''ಧರ್ಮಪ್ರಚಾರಕ್ಕಾಗಿ'' ಎಂಬ ಉತ್ತರ ಇತಿಹಾಸದ ಪುಸ್ತಕಗಳಲ್ಲಿರಲು ಶಕ್ಯ. ಅದು ರಾಜ್ಯವನ್ನು ವಿಸ್ತರಿಸಿಕೊಂಡು, ಹೆಚ್ಚಿನ ತೆರಿಗೆ ವಸೂಲು ಮಾಡಿ, ಸಂಪತ್ತು ಮತ್ತು ಅಧಿಕಾರ ಹೆಚ್ಚಿಸಿಕೊಳ್ಳಲು ಅಗತ್ಯವೆಂದು ''ಅರ್ಥಶಾಸ್ತ್ರ'' ಬರೆದ ಕೌಟಿಲ್ಯ ಹೇಳಿಯಾನು. ಮಾರ್ಕ್ಸ್‌ಗೆ ಬಹಳ ಮುಂಚೆಯೇ ಅನೇಕ ಇತಿಹಾಸಕಾರರು ಇತಿಹಾಸವನ್ನು ಭೌತಿಕ ಸಿದ್ಧಾಂತಗಳ ಆಧಾರದಿಂದ ವಿವರಿಸಿದ್ದಾರೆಂಬುದು ಗಮನಾರ್ಹ. ಈಗ ಇನ್ನೊಂದು ಪ್ರಶ್ನೆ: ಯಾವುದೇ ಸಂಗತಿಯೂ ಅಡಿಪಾಯ ಇಲ್ಲವೆ ಮೇಲ್ಮೈಗೆ ಸೇರಿರಬೇಕೆಂಬ ನಿಯಮವೇನಾದರೂ ಉಂಟೆ? ಮಠಗಳು ಅದಕ್ಕೆ ಉತ್ತರ ನೀಡುತ್ತವೆ. ಮಠವು ಆದಾಯದ ಖನಿ, ಅಂತೆಯೇ ಅದು ವ್ಯವಸ್ಥೆಯ ಸಮರ್ಥಕ. ಕಲೆ, ಶಿಕ್ಷಣ, ಚಲನಚಿತ್ರ, ಇವೆಲ್ಲಾ ಇಂದು ಅಡಿಪಾಯ ಮತ್ತು ಮೇಲ್ಮೈ ಎರಡರ ಲಕ್ಷಣಗಳನ್ನೂ ಹೊಂದಿವೆ. ಹಾಗಿದ್ದರೆ, ಇರುವ ವಸ್ತುಗಳನ್ನು ಮತ್ತು ಸಂಗತಿಗಳನ್ನು ಇಡಿಯಾಗಿ ಅಡಿಪಾಯ ಮತ್ತು ಮೇಲ್ಮೈಗಳಡಿ ವಿಂಗಡಿಸಲು ಸಾಧ್ಯವೆ? ಸರ್ವಥಾ ಅಸಾಧ್ಯ. ಭೌತಿಕ ಉತ್ಪಾದನೆಯಲ್ಲದ ಮತ್ತು ಮೇಲ್ಮೈಗೂ ಸೇರದ ಅನೇಕವಿವೆ: ಭಾಷೆ, ಲೈಂಗಿಕ ಪ್ರೇಮ, ಮೊಳಕಾಲಿನ ಎಲುಬು, ಶುಕ್ರಗ್ರಹ, ಹಿಮಾಲಯ ಪರ್ವತಶ್ರೇಣಿ, ಡೊಳ್ಳು ಕುಣಿತ, ಹೀಗೆ ಅವು ಅಸಂಖ್ಯ. ಮಾರ್ಕ್ಸ್‌ವಾದವು ಎಲ್ಲದರ ಬಗೆಗೂ ಸಿದ್ಧಾಂತ ರಚಿಸಿಕೊಡುತ್ತದೆ ಎಂಬುದನ್ನು ಮೊದಲು ಅಳಿಸಿಹಾಕಬೇಕು. ಸಂಸ್ಕೃತಿ ಮತ್ತು ವರ್ಗ ಹೋರಾಟಗಳ ನಡುವೆ ಸಂಬಂಧವಿದೆ, ಹಾಗೆಂದು ಪುರಂದರದಾಸರ ಕೀರ್ತನೆ ಕೇಳಬಾರದೆಂದರೆ ಹೇಗೆ? ಕೀರ್ತನೆ ಕೇಳಲಡ್ಡಿಯಿಲ್ಲ, ಆದರೆ ಕೀರ್ತನೆಯನ್ನು ಬಂಡವಾಳ ಮಾಡಿಕೊಂಡು ಯಾರೂ ನಮ್ಮ ಮನಸ್ಸನ್ನು ಆಕ್ರಮಿಸುವಂತಿರಕೂಡದು, ಅಷ್ಟೆ. ಲೈಂಗಿಕ ಪ್ರೇಮವಿಲ್ಲದೆ ನಾಳೆಯ ಉತ್ಪಾದಕರಾಗುವ ಮಕ್ಕಳು ಅಸ್ತಿತ್ವಕ್ಕೆ ಬರುವುದಿಲ್ಲವಾದ್ದರಿಂದ ಪ್ರೇಮವು ಅಡಿಪಾಯದ ಭಾಗವೆಂದು ವಾದಿಸುವುದು ತಾಂತ್ರಿಕವಾಗಿ ಸರಿ ಎನಿಸಬಹುದು, ಆದರೆ ಆ ವಾದದಲ್ಲಿ ಮೂರ್ಖತನವು ಸಾಂದ್ರವಾಗಿದೆಯೆಂದರೆ ತಪ್ಪಲ್ಲ. ಒಂದು ಕತೆ ಇದೆ: ಮಾರ್ಸೆಲ್ ಪ್ರೌಸ್ಟ್ ಯೂರೋಪಿನ ಒಬ್ಬ ದೊಡ್ಡ ಸಾಹಿತಿ. ೧೮೭೦ರ ಫ್ರಾನ್ಸ್ ಕ್ರಾಂತಿಯಲ್ಲಿ 'ಪ್ಯಾರಿಸ್ ಕಮ್ಯೂನ್' ಅಸ್ತಿತ್ವಕ್ಕೆ ಬಂದಿತ್ತು. ಆಗ ಪ್ರೌಸ್ಟ್‌ನ ತಾಯಿ ಗರ್ಭಿಣಿ. ಅವಳಿಗೆ ಕ್ರಾಂತಿಯು ಯಾತನೆಯುಂಟುಮಾಡಿತ್ತು. ಆದ್ದರಿಂದ ಪ್ರೌಸ್ಟ್ ಜೀವನವಿಡೀ ಅಸ್ತಮಾದಿಂದ ನರಳಿದ, ಎಂದು ವಾದಿಸುವವರಿದ್ದಾರೆ. ಮುಂದುವರಿದು ಅವರು ಹೇಳುತ್ತಾರೆ, ಉಸಿರಾಟದ ತೊಂದರೆ ಇದ್ದುದರಿಂದ ಪ್ರೌಸ್ಟ್ ಅತಿದೀರ್ಘ ವಾಕ್ಯಗಳನ್ನು ರಚಿಸುತ್ತಿದ್ದ, ಎಂದು. ಆದ್ದರಿಂದ ಪ್ರೌಸ್ಟ್‌ನ ವಾಕ್ಯರಚನೆಗೆ ಪ್ಯಾರಿಸ್ ಕಮ್ಯೂನ್ ಕಾರಣ! ಇಂಥ ವಾದಕ್ಕೆ ಪುಷ್ಟಿ ನೀಡಿದ ಹುಚ್ಚ ಯಾರೇ ಇರಬಹುದು, ಅವನು ಮಾರ್ಕ್ಸ್ ಅಂತೂ ಖಂಡಿತ ಅಲ್ಲ.

ಇಷ್ಟಕ್ಕೂ ಮೇಲ್ಮೈನ ಎಲ್ಲವೂ ಅಡಿಪಾಯವನ್ನು ಗಟ್ಟಿಗೊಳಿಸಬೇಕೆಂಬ ಉದ್ದೇಶದಿಂದ ಮೂಡಿರುವೇನಲ್ಲ. ಪ್ರಭುತ್ವಕ್ಕೆ ಆ ಉದ್ದೇಶವಿದೆ, ಆದರೆ ಕಲೆಗಲ್ಲ, ಶಿಕ್ಷಣ, ಮಾಧ್ಯಮ, ಮಠ-ಮಸೀದಿ-ಚರ್ಚು, ಇವೆಲ್ಲಾ ಸದಾ ಅಂದಂದಿನ ಸಾಮಾಜಿಕ ವ್ಯವಸ್ಥೆಯನ್ನು ಸಮರ್ಥಿಸುತ್ತಲೇ ಬಂದಿವೆಯೆನ್ನುವುದು ಸಹ ಸುಳ್ಳು. ''ನೀನು ನೀಲಿ ಬಟ್ಟೆ ತೊಡಬೇಕು'' ಎಂದು ವಿದ್ಯಾರ್ಥಿಯನ್ನು ಶಿಕ್ಷಣ ಸಂಸ್ಥೆಯು ಆಗ್ರಹಿಸಿದರೆ, ಅಥವಾ ''ನಾಳೆ ಮಳೆ ಬರುತ್ತದೆ'' ಎಂದು ಆಕಾಶವಾಣಿಯು ಬಿತ್ತರಿಸಿದರೆ, ಮೇಲ್ಮೈನ ಯಾವುದೋ ಅಂಶವನ್ನು ಸಮರ್ಥಿಸಿದಂತೆ ಎನ್ನಲಾದೀತೆ? ಅವಕ್ಕೂ ಉತ್ಪಾದನಾ ಸಂಬಂಧಗಳಿಗೂ ಸಂಬಂಧವಿಲ್ಲ. ನೀಲಿ ಬಟ್ಟೆ ತಯಾರಿಸುವ ಸಂಸ್ಥೆಗೆ ಅನುಕೂಲವಾಗಲೆಂದೇ ಅಂತಹ ಆಜ್ಞೆ ನೀಡಿದ್ದರೆ ಅದು ಬೇರೆ ವಿಷಯ. ಮಂಗಳೂರಿನ ಮಾಧ್ಯಮ ಪ್ರತಿನಿಧಿ ಸೂರಿಂಜೆಯವರ ಬಿಡುಗಡೆಗಾಗಿ ಪ್ರತಿಭಟನೆ ನಡೆಸಿದರೆ ಪೊಲೀಸರು ಬೆತ್ತ ಪ್ರಹಾರ ಮಾಡಿಯಾರು, ಆದರೆ ಶಾಲೆಯಿಂದ ತಪ್ಪಿಸಿಕೊಂಡು ಹೋದ ಮಗುವನ್ನು ಪತ್ತೆ ಮಾಡಲು ಸಹ ಅವರು ಮುಂದಾಗುತ್ತಾರೆ. ಬಾಳ ಠಾಕ್ರೆ ''ಲುಂಗೀವಾಲಾ''ಗಳನ್ನು ಜರಿದು ಪ್ರಚೋದಿಸಿದಾಗ ಮೇಲ್ಮೈನ ಕೆಲಸ ಮಾಡಿದ್ದು ನಿಜ, ಆದರೆ ಸ್ಕೂಟರಿನಿಂದ ಬಿದ್ದು ಯಾರೋ ಗತಿಸಿದನೆಂದು ವರದಿ ಮಾಡಿದರೆ ಅದು ಮೇಲ್ಮೈನ ಪರವಾದ ಮಾಹಿತಿಯಲ್ಲ. ಕಮ್ಯುನಿಸ್ಟ್ ಪಕ್ಷದ ಪತ್ರಿಕೆಯೊಂದು ರಸ್ತೆ ಅಪಘಾತಗಳಿಗೆಲ್ಲಾ ''ವರ್ಗದೃಷ್ಟಿ'' ಹೇರುತ್ತಾ ಹೋದರೆ ಅದಕ್ಕೆ ಮಾರ್ಕ್ಸ್ ಸಮರ್ಥನೆ ನೀಡಲಾರ. ಪುತಿನ ಅವರು ''ಗೋಕುಲ ನಿರ್ಗಮನ'' ಬರೆದಿದ್ದಾರೆ, ಡಿವಿಜಿ ''ಮಂಕುತಿಮ್ಮನ ಕಗ್ಗ'' ಬರೆದಿದ್ದಾರೆ. ಅವನ್ನು ಮೇಲ್ಮೈನ ಭಾಗವಾಗಿ ಪರಿಗಣಿಸುವುದು ಅಬದ್ಧ. ಆದರೆ ಅವನ್ನು ಆ ದೃಷ್ಟಿಯಿಂದ ಬಳಸಲಾಗದೆಂದು ಹೇಳಲಾಗುವುದಿಲ್ಲ. ಯಾವುದು, ಯಾವಾಗ, ಮೇಲ್ಮೈನ ಉದ್ದೇಶಿತ ಭಾಗವೆಂಬುದನ್ನು ಆಯಾ ಸಂದರ್ಭಗಳಲ್ಲಿನ ಪರಿಣಾಮದಿಂದ ನಿರ್ಧರಿಸಬಹುದೆಂದು ತೋರುತ್ತದೆ. ಇಂದು ಇಲ್ಲದ ಉದ್ದೇಶ ನಾಳೆ ಇರಲಾಗದೆಂಬ ನಿರ್ಬಂಧವೇನೂ ಇಲ್ಲ.

ಮಾರ್ಕ್ಸ್‌ನ ಮಂಡನೆಯಲ್ಲಿ ಹರಿತವಿಲ್ಲವೆಂದು ಇದರಿಂದ ತೀರ್ಮಾನಿಸಬಾರದು.

ಮಾವಿನಹಣ್ಣನ್ನು ಚೆನ್ನಾಗಿರುವುದು, ಕೊಳೆತದ್ದು, ಎಂದು ವಿಂಗಡಿಸಿಬಿಡುವ ಕ್ರಮ ಇಲ್ಲಿ ಅಸಂಗತ. ಕಾನೂನು, ರಾಜಕೀಯ, ಮತಧರ್ಮ, ಸಂಸ್ಕೃತಿ, ಇತ್ಯಾದಿಗಳು ವರ್ಗ ಸಮಾಜಗಳಲ್ಲಿ ಸಾಮಾನ್ಯವಾಗಿ ಒಂದಲ್ಲ ಒಂದು ರೀತಿಯಲ್ಲಿ ಅವಕ್ಕೆ ಬೆಂಬಲ ನೀಡುವಂಥವು ಎಂಬುದರಲ್ಲಿ ಮಾರ್ಕ್ಸ್ ಡೋಲಾಯಮಾನ ಮತಿ ಹೊಂದಿಲ್ಲ. ಯಾವ ಬಂಡವಾಳಶಾಹಿ ನಾಗರಿಕತೆಯಲ್ಲೂ ಖಾಸಗಿ ಆಸ್ತಿಯನ್ನು ರದ್ದುಗೊಳಿಸುವ ಕಾನೂನು ಇಲ್ಲ; ಮಕ್ಕಳಿಗೆ ಆ ವ್ಯವಸ್ಥೆಯ ''ಶ್ರೇಷ್ಠತೆ''ಯನ್ನು ಉಪದೇಶಿಸದ ಶಿಕ್ಷಣವೂ ಇಲ್ಲ. ಸಾಹಿತ್ಯದಲ್ಲಿ ಇಂತಹುದನ್ನು ವಿರೋಧಿಸಿರುವುದು ಹೇರಳವಾಗಿದೆ. ಬೇಂದ್ರೆ, ಕುವೆಂಪು, ನಿರಂಜನ, ಕಟ್ಟೀಮನಿ, ಬಲ್ಲಾಳ, ರಾವ್ ಬಹದ್ದೂರ್, ಮುಂತಾದವರೆಲ್ಲಾ ಆಳುವ ವರ್ಗದ ಪರವಾದ ದನಿಗಳನ್ನೆತ್ತಿದವರಲ್ಲ. ಆದರೆ ಅವರೆಲ್ಲರೂ ಖಾಸಗಿ ಆಸ್ತಿಯ ಆಳ್ವಿಕೆಯನ್ನು ಒಂದೇ ರೀತಿಯಲ್ಲಿ ವಿರೋಧಿಸಿಲ್ಲ. ಈ ಬಗ್ಗೆ ಶಿವರಾಮ ಕಾರಂತರದು ಎರಡು ಪ್ರತ್ಯೇಕ ದನಿಗಳು; ಆ ಕಡೆ, ಈ ಕಡೆ, ಎರಡೂ ಕಡೆ ಅವರ ಒಲವಿದೆ. ಇಂಗ್ಲಿಷ್ ಕಾದಂಬರಿಗಳಲ್ಲಿ ಥಾಮಸ್ ಹಾರ್ಡಿಯ ''ಜೂಡ್ ದ ಅಬ್‌ಸ್ಕ್ಯೂರ್'' ಎಂಬುದೊಂದಿದೆ. ಜೂಡ್‌ನ ಒಳ ಆರ್ತನಾದ ನಮ್ಮ ದೇಶದ ಸಾವಿರಾರು ಮಕ್ಕಳ ರೋದನ ಎನ್ನಬಹುದು : ''ನಾನು ಜ್ಞಾನಭಾರತಿಯ ಬಳಿ ಒಂದು ಗುಡಿಸಲಲ್ಲಿ ವಾಸಿಸುತ್ತೇನೆ, ಆದರೆ ಒಳಕ್ಕೆಂದೂ ನನಗೆ ಪ್ರವೇಶವಿಲ್ಲ. ನನ್ನಂಥವರು ನೂರಾರು ಮಂದಿ ಇಲ್ಲಿದ್ದೇವೆ. ನಮ್ಮನ್ನು ಈ ನಗರದ ನಿವಾಸಿಗಳೆಂದು ಯಾರೂ ಗುರುತಿಸುವುದಿಲ್ಲ. ಆದರೆ ನಾವಿಲ್ಲದಿದ್ದರೆ ಜ್ಞಾನಭಾರತಿಯ ವಿದ್ವಾಂಸರು ಏನನ್ನೂ ಅಧ್ಯಯನ ಮಾಡಲಾಗುತ್ತಿರಲಿಲ್ಲ, ದೊಡ್ಡ ಚಿಂತಕರಾಗಿ ಹೆಸರು ಮಾಡುತ್ತಿರಲಿಲ್ಲ'' ಇದು ಅಡಿಪಾಯ ಮತ್ತು ಮೇಲ್ಮೈ ನಡುವಣ ಸಂಬಂಧವೆಂದು ಮಾರ್ಕ್ಸ್ ಹೇಳಬಹುದಿತ್ತು. ಆದರೆ ಪೂರ್ಣವಾಗಿ ವಿಷಯ ಹಾಗಿಲ್ಲ. ದೈಹಿಕ ದುಡಿಮೆ ಇಲ್ಲದೆ ಬೌದ್ಧಿಕ ದುಡಿಮೆ ಇಲ್ಲವೆಂಬುದು ಅದರ ಸಾರ. ಜ್ಞಾನಭಾರತಿಯು ಮೇಲ್ಮೈ ಮತ್ತು ಗುಡಿಸಲು ಅಡಿಪಾಯ. ವಿದ್ವಾಂಸರೇ ಅಡಿಗೆ ಮಾಡಿಕೊಳ್ಳಬೇಕಾಗಿದ್ದರೆ ಅಥವಾ ಮನೆ ಕಟ್ಟಿಕೊಳ್ಳಬೇಕಿದ್ದರೆ ಅಥವಾ ಅವರ ಪುಸ್ತಕಗಳನ್ನು ಅವರೇ ಅಚ್ಚು ಮಾಡಿಕೊಳ್ಳಬೇಕಾಗಿದ್ದರೆ? ಆದರೆ ಮಾರ್ಕ್ಸ್ ಅಷ್ಟನ್ನು ಮಾತ್ರ ಹೇಳಿಲ್ಲ. ಗೀತೆ ಓದುವ ಮುನ್ನ ಮಠದ ಸ್ವಾಮಿ ದ್ರಾಕ್ಷಿ-ಗೋಡಂಬಿ ಭಕ್ಷಿಸಬೇಕು! ಅಷ್ಟೇ ಅಲ್ಲ, ಭೌತಿಕ ಉತ್ಪಾದನೆಯು ಹೇಗೆ ಸಂಘಟಿಸಲ್ಪಟ್ಟಿದೆಯೋ ಅದರಂತೆ ಉತ್ಪಾದಕನ ಬಗೆಗಿನ ಚಿಂತನೆ ಇರುತ್ತದೆ. ಜ್ಞಾನಭಾರತಿಯಲ್ಲಿ ಸದ್ಯಕ್ಕೆ ಚಿಂತನೆಯ ಮಾತೇ ವ್ಯರ್ಥ, ಆದರೆ ಅದಂತಿರಲಿ. ಅಲ್ಲಿಯ ವಿದ್ವಾಂಸರ ಚಿಂತನೆಗೆ ಇಂದಿನ ಭೌತಿಕ ಸತ್ಯತೆಗಳು ರೂಪ ಕೊಡುತ್ತವೆ. ಗೀತೆಯ ವ್ಯಾಖ್ಯಾನ ಮಾಡುವಾಗ ಅವರಲ್ಲಿ ಎಷ್ಟು ಮಂದಿ ಖಾಸಗಿ ಆಸ್ತಿಯ ಉಪಟಳವನ್ನು ಸ್ಮರಿಸಿಯಾರು? ಎಷ್ಟು ಮಂದಿ ಭಿನ್ನವಾದ ಸಾಮಾಜಿಕ ವ್ಯವಸ್ಥೆಗಾಗಿ ತಹತಹಿಸಿಯಾರು? ಗುಡಿಸಿಲಿನ ಹುಡುಗ ಹೋಗಿ ತನಗೆ ಯಾವಾಗ ಅಲ್ಲಿಗೆ ಪ್ರವೇಶವೆಂದು ಕೇಳಿದರೆ ಬಹುಮಂದಿ ''ವಿದ್ವಾಂಸರು'' ನೀನಲ್ಲೇ ಇದ್ದರೆ ಒಳಿತು ಎಂದಾರು!

ಅದೆಲ್ಲಾ ಸರಿ, ಆದರೆ ಮೇಲ್ಮೈ ಇರಬೇಕಾದರೂ ಏಕೆ? ಕಲೆ, ಕಾನೂನು, ಮತಧರ್ಮ, ಇವೆಲ್ಲಾ ಏಕಿವೆ ಎಂಬುದಲ್ಲ ಪ್ರಶ್ನೆ; ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನು ಸಮರ್ಥಿಸಲು ಇಷ್ಟೆಲ್ಲಾ ಕಲೆ ಮುಂತಾದ ಪರಿಕರಗಳು ಏಕೆ ಬೇಕೆಂಬುದು ಪ್ರಶ್ನೆ. ಅದಕ್ಕೆ ಉತ್ತರ: ಅಡಿಪಾಯ ಎಂಬುದು ಅಷ್ಟು ಒಡಕಿನದು, ವಿಭಜಿತವಾದ್ದು, ಉತ್ಪಾದನಾ ಸಂಬಂಧಗಳಲ್ಲಿ ಶೋಷಣೆಗೆ ಅವಕಾಶವಿದ್ದಾಗ ಸಂಘರ್ಷಗಳು ಸಂಭವಿಸುತ್ತವೆ. ಅವನ್ನು ನಿಯಂತ್ರಿಸಲು ಮತ್ತು ಸಮರ್ಥಿಸಲು ಮೇಲ್ಮೈ ಬೇಕು. ಶೋಷಣೆ ಇರುವಾಗ ಮೇಲ್ಮೈ ಇರಲೇಬೇಕು. ಅದಿಲ್ಲದೆಯೂ ಕಲೆ, ಕಾನೂನು, ಬಹುಶಃ ಮತಧರ್ಮ, ಎಲ್ಲವೂ ಇರಬಲ್ಲವು. ಆದರೆ ಅವು ಶೋಷಣೆಯ ಸಮರ್ಥನೆಗೆ ಅಸ್ತ್ರಗಳಾಗಿ ಇರುವುದಿಲ್ಲ. ಆದಿಮ ಬುಡಕಟ್ಟುಗಳ ಆಂತರಿಕ ವ್ಯವಸ್ಥೆ ಇದಕ್ಕೊಂದು ಉದಾಹರಣೆ.

ಕೊನೆಯದಾಗಿ ಹೇಳಬೇಕಾದ್ದಿದು: ಭೌತವಾದಿಗಳು ಚೈತನ್ಯರಹಿತರಲ್ಲ. ಹಾಗೇನಾದರೂ ಆಗಿದ್ದರೆ ಅದಕ್ಕೆ ಅವರು ಭೌತವಾದಿಗಳಾಗಿರುವುದು ಕಾರಣವಲ್ಲ. ಮಾರ್ಕ್ಸ್ ಸ್ವತಃ ಇದಕ್ಕೊಂದು ನಿದರ್ಶನ. ಅವನು ಹೇಳುತ್ತಿದ್ದ: ''ಈ ಹಾಳು ''ಬಂಡವಾಳ'' ಎಂಬ ಪುಸ್ತಕವನ್ನು ಬೇಗ ಬರೆದು ಮುಗಿಸಿದರೆ ಸಾಕು, ಆಮೇಲೆ ಬಾಲ್ಜಾಕ್ ಮೇಲಿನ ಪುಸ್ತಕ ಬರೆಯಲು ಬಿಡುವಾಗುತ್ತದೆ.'' ಅದೆಂದೂ ಆಗಲಿಲ್ಲ, ಬಿಡಿ. ''ಬಂಡವಾಳ'' ಎಂಬ ಗ್ರಂಥ ಬರೆಯಲು ಮಾರ್ಕ್ಸ್ ತ್ಯಾಗ ಮಾಡಿದ್ದು ಒಂದೇ, ಎರಡೇ : ಆರೋಗ್ಯ, ಸುಖ, ಕುಟುಂಬ, ಎಲ್ಲಾ. ಆದರೆ, ಅದನ್ನು ಬರೆಯದಿದ್ದಿದ್ದರೆ ನಾನೊಬ್ಬ ''ಕೋಣ'' ಆಗಿರುತ್ತಿದ್ದೆ, ಎಂದು ಹೇಳಿದ. ಏಕೆ ಕೋಣ? ಮಾನವ ಜನಾಂಗದ ದುಃಖಕ್ಕೆ ವಿಮುಖನಾಗುವುದರಿಂದಾಗಿ. ಹಣದ ಬಗ್ಗೆ ಅವನು ಬರೆದಷ್ಟು ಬರೆದವರು ಬಹಳ ಇಲ್ಲ, ಆದರೆ ಅವನಲ್ಲಿದ್ದ ಹಣ ಬಹಳ ಕಮ್ಮಿ. ಆದರೆ ಮಾನವನಾಗಿ ಅವನು




ಭಾವನಾಪೂರಿತ ಸಭ್ಯ, ವ್ಯಂಗ್ಯದಲ್ಲಿ ಎತ್ತಿದ ಕೈ, ಹಾಸ್ಯಪ್ರಿಯ, ಚಟುವಟಿಕೆಯ ಆಗರ, ಸ್ನೇಹಪರ, ಜಗಳದಲ್ಲಿ ರಮಿಸುವವನು. ಮತ್ತು, ಶುದ್ಧ ನಾಸ್ತಿಕ. ಮತಧರ್ಮವಿಲ್ಲದೆಯೂ ಜಗತ್ತಿನ ವಿಸ್ಮಯಗಳಿಂದ ಬೆರಗಾಗಲು, ತದೇಕಚಿತ್ತದಿಂದ ಧ್ಯಾನಿಸಲು ಸಾಧ್ಯ ಎಂಬುದನ್ನು ಮನಗಾಣಿಸಿದವನು ಅವನು. ನ್ಯಾಯಪರತೆ, ವಿಮುಕ್ತಿ, ಶಾಂತಿ, ಸಮೃದ್ಧಿ, ಇವೆಲ್ಲಾ ವ್ಯಕ್ತಿಗಾಗಿ ಮಾತ್ರವಲ್ಲ, ಅದು ಸಮಷ್ಟಿಗಾಗಿ ಎಂದು ಜೀವಿಸಿದವನು ಮಾರ್ಕ್ಸ್. ಯಹೂದಿ ಮಾರ್ಕ್ಸ್‌ವಾದಿ, ಇಸ್ಲಾಮಿ ಮಾರ್ಕ್ಸ್‌ವಾದಿ, ಕ್ರೈಸ್ತ ಮಾರ್ಕ್ಸ್‌ವಾದಿ, ಹಿಂದು ಮಾರ್ಕ್ಸ್‌ವಾದಿ, ಹೀಗೆ ವಿಂಗಡಣೆ ಸಾಧ್ಯ. ಆದರೆ ಅವರೆಲ್ಲಾ ಭೌತವಾದಿಗಳೇ. ಮಾರ್ಕ್ಸ್‌ವಾದಿ ಭೌತವಾದವೆಂದರೆ ''ಎಲ್ಲವೂ ಪರಮಾಣುಗಳಿಂದ ಮಾಡಲ್ಪಟ್ಟಿವೆ'' ಅಥವಾ ''ದೇವರಿಲ್ಲ'', ಎಂದು ಹೇಳುವುದಲ್ಲ. ಚರಿತ್ರೆಯಲ್ಲಿ ಮಾನವ ಹೇಗೆ ವರ್ತಿಸುತ್ತಾನೆಂದು ತಿಳಿಸುವ ಸಿದ್ಧಾಂತ ಅದು. ವೈಜ್ಞಾನಿಕ ವಿಶ್ಲೇಷಣೆಗೆ ಕಟ್ಟುಬಿದ್ದಿದ್ದ ಮಾರ್ಕ್ಸ್ ನೀತಿಶಾಸ್ತ್ರ ಕುರಿತ ಒಂದು ಗ್ರಂಥ ಬರೆಯಬೇಕೆಂದಿದ್ದ. ಬಂಡವಾಳಶಾಹಿ ಮತ್ತು ಸ್ವಾರ್ಥಪರತೆ ಸದಾ ಜೊತೆ ಜೊತೆ. ಅಂತಹ ವ್ಯವಸ್ಥೆಯ ನೈತಿಕತೆಯ ಸೋಗು ಅಸಹ್ಯದ್ದೆಂದು ಮಾರ್ಕ್ಸ್ ಭಾವಿಸಿದ್ದ. ಸ್ನೇಹಿತರನ್ನು, ಮಕ್ಕಳನ್ನು, ಹೀನಾಯವಾಗಿ ನಡೆಸಿಕೊಳ್ಳುವುದಿಲ್ಲ, ಅಲ್ಲವೆ? ಹಾಗಿದ್ದರೆ ಇತರರನ್ನು ಏಕೆ ಹಾಗೆ ನಡೆಸಿಕೊಳ್ಳಬೇಕು?

ಮಾರ್ಕ್ಸ್ ನೈತಿಕತೆಯನ್ನು ಟೀಕಿಸುತ್ತಿದ್ದನೆಂಬ ಆಕ್ಷೇಪ ಇದೆ. ಅವನಿಗೆ ಅಸಹನೆ ಉಂಟಾಗುತ್ತಿದ್ದುದು ಚಾರಿತ್ರಿಕ ದೃಷ್ಟಿಯ ಅಭಾವವನ್ನು ಕಂಡಾಗ. ನೈತಿಕತೆಯನ್ನು ಭೌತಿಕ ಅಂಶಗಳಿಂದ ಹೊರತುಪಡಿಸಿ ಅದೊಂದು ಚಿರ ಸ್ವಾಯತ್ತ ಘಟಕವೆಂದು ಚಿತ್ರಿಸುವುದನ್ನು ಅವನು ವಿರೋಧಿಸಿದ. ಅವನು ಟೀಕಿಸಿದ್ದು ನೈತಿಕತೆಯನ್ನಲ್ಲ, ನೀತಿಯ ಸೋಗು ಹಾಕುವುದನ್ನು. ''ನೈತಿಕ ಮೌಲ್ಯ''ವೆಂಬುದು ಚಾರಿತ್ರಿಕ ಸಂದರ್ಭಗಳಿಗೆ ತಕ್ಕಂತೆ ಬದಲಾಗದೆ ಶಾಶ್ವತವಾಗಿ ಏಕಪ್ರಕಾರದಿಂದ ಇರುತ್ತದೆಂಬ ಮಿಥ್ಯೆಯನ್ನಷ್ಟೇ ಅವನು ಜರಿದಿದ್ದು. ಮಾನವಿಕ ಮೌಲ್ಯ, ನಡತೆ, ಸಂಬಂಧಗಳು ಮತ್ತು ವ್ಯಕ್ತಿತ್ವದ ಲಕ್ಷಣಗಳು ಸಾಮಾಜಿಕ ಮತ್ತು ಚಾರಿತ್ರಿಕ ಶಕ್ತಿಗಳಿಂದ ರೂಪಿಸಲ್ಪಡುತ್ತಿರುತ್ತವೆ. ವೈಜ್ಞಾನಿಕ ವಿಶ್ಲೇಷಣೆಯನ್ನು ತೊರೆದು ಕೇವಲ ನೈತಿಕ ತೀರ್ಮಾನ ಕೊಡುವುದು ಸಲ್ಲದೆಂಬುದು ಮಾರ್ಕ್ಸ್‌ನ ನಿಲುವು. ಅರಿಸ್ಟಾಟಲನ ಪರಂಪರೆಯಲ್ಲಿ ನೈತಿಕತೆಯು ಮೂಲಭೂತವಾಗಿ ಕಾನೂನು, ನಿಯಮ, ನಿಷೇಧ, ಇತ್ಯಾದಿಗಳಿಂದ ನಿರ್ಧಾರವಾಗುವುದಿಲ್ಲ; ಬದಲಾಗಿ, ವ್ಯಕ್ತಿಯು ಪರಿಪೂರ್ಣವಾದ ಮತ್ತು ಮುಕ್ತವಾದ ರೀತಿಯಲ್ಲಿ ಜೀವಿಸುವುದು ನೈತಿಕತೆ. ಮಾರ್ಕ್ಸ್ ಆ ಪರಂಪರೆಗೆ ಸೇರಿದವನು. ಮಾನವ ಏಕಾಕಿಯಾಗಿ ಜೀವಿಸುವುದಿಲ್ಲವಾಗಿ ಅವನಿಗೆ ನೈತಿಕತೆಯು ರಾಜಕೀಯವನ್ನೂ ಒಳಗೊಂಡದ್ದಾಗಿರಬೇಕು. ಅಧ್ಯಾತ್ಮವು ಪರಲೋಕದ ದೃಷ್ಟಿಯುಳ್ಳದ್ದು ಎನ್ನುತ್ತಾರೆ. ಮಾರ್ಕ್ಸ್‌ಗೆ ಆ ಅರ್ಥದಲ್ಲಿ ಅಧ್ಯಾತ್ಮದ ನಿಷ್ಠೆ ಅಪಾರವಾಗಿದೆ. ಆದರೆ ಪರಲೋಕವೆಂದರೆ ''ಗರುಡ ಪುರಾಣ''ದಂತಹ ಕ್ಷುದ್ರ ಗ್ರಂಥ ಹೇಳುವ ಪರಲೋಕವಲ್ಲ. ಅದು ನಾಳಿನ ಪರಲೋಕ, ಸಮಾಜವಾದಿಗಳ ದೃಷ್ಟಿಯಲ್ಲಿರುವ ಭವಿಷ್ಯದ ಲೋಕ. ಅಂತಹ ಪರಲೋಕದ ಬಗ್ಗೆ ತೀವ್ರ ಆಸಕ್ತಿ ಇಲ್ಲದವರು ತಮ್ಮ ಸದ್ಯದ ಇಹಲೋಕವನ್ನು ಸರಿಯಾಗಿ, ಪೂರ್ತಿಯಾಗಿ, ನೋಡಿಲ್ಲ.

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

‘ಆಧುನಿಕ ಭಾರತದ ರತ್ನಗಳು’ – ಎಂದು ಅಭಿಮಾನದಿಂದ ಹೇಳಿಕೊಳ್ಳಬಹುದಾಗಿದ್ದ ಸಾರ್ವಜನಿಕ ಸ್ವಾಮ್ಯದ ಉದ್ಯಮಗಳ ಸಾಲಿಗೆ, ನೀಲಗಿರಿ ಜಿಲ್ಲೆಯ ಉದಕಮಂಡಲದ (ಊಟಿ) ಸಮೀಪದಲ್ಲಿರುವ ಹಿಂದುಸ್ಥಾನ್ ಫೋಟೋ ಫಿಲ್ಮ್ಸ್ ಸಂಸ್ಥೆಯೂ ಸೇರುತ್ತದೆ.

ಮೈಸೂರು - ಊಟಿ ರಸ್ತೆಯಲ್ಲಿ ಊಟಿಯಿಂದ ಐದು ಕಿ.ಮೀ. ಮೊದಲೇ ಬರುವ ಆ ಪ್ರದೇಶಕ್ಕೆ ಹಿಂದೆ ‘ಕಾಕಾ ತೋಪು’ – ಎಂಬ ಹೆಸರಿತ್ತು. ಈಗ ‘ಇಂದು ನಗರ’ – ಎಂದು ಪರಿಚಿತವಾಗಿದೆ. ಅಥವಾ ‘ಎಚ್‌ಪಿಎಫ್’ – ಎಂದರೂ ಗುರುತಾಗುತ್ತದೆ.

ಸುಮಾರು ೩೦೩ ಎಕರೆಯಷ್ಟು ವಿಸ್ತಾರ ಪ್ರದೇಶದಲ್ಲಿ ಇರುವ ಅದನ್ನು, ಅಲ್ಲಿನ ತಂಪು ಹವಾಮಾನ, ಧೂಳಿನಿಂದ ಮುಕ್ತವಾದ ಪ್ರಶಾಂತ ವಾತಾವರಣ, ಫೋಟೋ ಸೆನ್ಸಿಟಿವ್ (ದ್ಯುತಿಸಂವೇದಕ) ವಸ್ತುಗಳ ತಯಾರಿಕೆಗೆ ಅಗತ್ಯವಾದ ಮೃದು ನೀರಿನ ಲಭ್ಯತೆಯ ಕಾರಣ ಪ್ರಶಸ್ತ ತಾಣವೆಂದು ಗುರುತಿಸಿ ಆಯ್ಕೆ ಮಾಡಲಾಗಿತ್ತು.

ಔದ್ಯಮಿಕವಾಗಿ ಹಿಂದುಳಿದಿದ್ದ ನೀಲಗಿರಿಯ ಅಭಿವೃದ್ಧಿಗೆ ಮತ್ತು ಸ್ಥಳೀಯ ಮೂಲನಿವಾಸಿ ಜನರ ಏಳಿಗೆಗೆ ಸಹಾಯಕವಾಗುವುದಲ್ಲದೆ, ಫೋಟೋ ಸೆನ್ಸಿಟಿವ್ ವಸ್ತುಗಳ ತಯಾರಿಕೆಯಲ್ಲಿ ಸ್ವಾವಲಂಬನೆ ಸಾಧಿಸುವುದು – ಈ ಸಂಸ್ಥೆಯ ಸ್ಥಾಪನೆಯ ಮೂಲೋದ್ದೇಶ.

೧೯೬೧ರಲ್ಲಿ ಕಾರ್ಯಾರಂಭಗೊಂಡ ಇದು ಮೊದಲಿಗೆ ಪೂರ್ವ ಜರ್ಮನಿಯ ‘ಆರ್ಫ್ವೊ’ ಸಂಸ್ಥೆಯ ಸಹಯೋಗ ಹೊಂದಿತ್ತು. ಮುಂದೆ ಫ್ರಾನ್ಸಿನ ‘ಡುಪಾಂಟ್’ ಸಂಸ್ಥೆಯ ಸಹಯೋಗದೊಂದಿಗೆ ಕಾರ್ಯನಿರ್ವಹಿಸಿತು. ೧೯೬೭ರಲ್ಲಿ ಉತ್ಪಾದನೆಯನ್ನು ಪ್ರಾರಂಭಿಸಿದ ಹಿಂದುಸ್ಥಾನ್ ಫೋಟೋ ಫಿಲ್ಮ್ಸ್ ಸಂಸ್ಥೆ ಆ ಸಂದರ್ಭದಲ್ಲಿ ವಿಶಿಷ್ಟ ಬಗೆಯ ಪೂರ್ಣ ಸಂಯೋಜಿತ ವ್ಯವಸ್ಥೆಯನ್ನು ಹೊಂದಿದ್ದ, ಫೋಟೊ ಸೆನ್ಸಿಟಿವ್ ವಸ್ತುಗಳನ್ನು ತಯಾರಿಸುತ್ತಿದ್ದ ಜಗತ್ತಿನ ಆರು ಸಂಸ್ಥೆಗಳ ಸಾಲಿನಲ್ಲಿತ್ತು. ಇನ್ನಿತರ ಸಂಸ್ಥೆಗಳೆಂದರೆ ಕೊಡಾಕ್, ಆಗ್ಫ, ಫ್ಯೂಜಿ, ಕೋನಿಕಾ ಮತ್ತು ಇಲ್‌ಫೋರ್ಡ್ – ಮುಂತಾದ ಖ್ಯಾತ ಸಂಸ್ಥೆಗಳು.

ಬೆಟ್ಟದ ಮೇಲೆ ಆಧುನಿಕ ತಯಾರಕ ಘಟಕಗಳು, ಅಧಿಕಾರಿಗಳ ಬಂಗಲೆಗಳು, ಸಿಬ್ಬಂದಿಗಳ ವಸತಿಗೃಹಗಳು, ಶಾಲೆ, ಆಸ್ಪತ್ರೆ, ಕ್ರೀಡಾ ಮತ್ತು ಮನರಂಜನೆ ಸೌಲಭ್ಯಗಳು, ದೇವಾಲಯಗಳು – ಹೀಗೆ ‘ಇಂದು ನಗರ’ ಲವಲವಿಕೆ ಯಿಂದ ಕೂಡಿದ ಒಂದು ಟೌನ್‌ಷಿಪ್ ಆಗಿ ಬೆಳೆಯಿತು.

ವಿಜ್ಞಾನ ಶಿಕ್ಷಣದ ಹಿನ್ನೆಲೆಯ ಜೊತೆಗೆ ತರಬೇತು ಪಡೆದು ಬಂದ ನುರಿತ ಸಿಬ್ಬಂದಿ ವರ್ಗ, ಆಧುನಿಕ ಉತ್ಪಾದಕ ಘಟಕಗಳು, ತನ್ನದೇ ಆದ ಪ್ರಯೋಗಶಾಲೆ ಮತ್ತು ಅಲ್ಲಿ ತಯಾರಾಗುವ ಉತ್ಪನ್ನಗಳ ಗುಣಮಟ್ಟದ ಬಗ್ಗೆ ಕಟ್ಟುನಿಟ್ಟಾದ ನಿಯಂತ್ರಣ – ಇವು ಸಂಸ್ಥೆಯ ಖ್ಯಾತಿಯನ್ನು ಹೆಚ್ಚಿಸಲು ಕಾರಣವಾದವು. ಸಂಸ್ಥೆಯು ಆರೋಗ್ಯ ರಕ್ಷಣೆ, ಶಿಕ್ಷಣ, ರಕ್ಷಣಾ ವ್ಯವಸ್ಥೆ ಹಾಗೂ ಮನರಂಜನೆಯ ಕ್ಷೇತ್ರಗಳಿಗೆ ಅಗತ್ಯವಾದ ಫೋಟೋ ಸೆನ್ಸಿಟಿವ್ ವಸ್ತುಗಳ ತಯಾರಿಕೆ ಯಲ್ಲಿ ಸ್ವಾವಲಂಬನೆ ಸಾಧಿಸುವ ಹಂತಕ್ಕೆ ತಲುಪಿತು.

೧೯೮೬ರಲ್ಲಿ ಜರ್ಮನಿಯ ಮ್ಯಾಗ್ನಾ ಸಂಸ್ಥೆಯ ಸಹಯೋಗದೊಂದಿಗೆ ಪಾಲಿಯಸ್ಟರ್ ಆಧಾರಿತ ಮೆಡಿಕಲ್ ಎಕ್ಸ್‌ರೇ, ಇಂಡಸ್ಟ್ರಿಯಲ್ ಎಕ್ಸ್‌ರೇ ಮತ್ತು ಗ್ರಾಫಿಕ್ ಆರ್ಟ್ಸ್ ತಯಾರಿಕೆಗಾಗಿ ಅತ್ಯಾಧುನಿಕ ಘಟಕವೊಂದನ್ನು, ಸುಮಾರು ರೂ. ೨ ಕೋಟಿ ವೆಚ್ಚದಲ್ಲಿ ತನ್ನದೇ ಆದ ಆರ್‌ಅಂಡ್‌ಡಿ ಘಟಕವನ್ನು ಸ್ಥಾಪಿಸಿಕೊಂಡಿತು. ವಿಸ್ತರಣೆಯ ಒಂದು ಭಾಗವಾಗಿ ಮದರಾಸು ಸಮೀಪದ ಅಂಬತ್ತೂರಿನಲ್ಲಿ ಕಲರ್ ಕನ್‌ವರ್ಷನ್ ಘಟಕವನ್ನು ಸ್ಥಾಪಿಸಿತು.

ಮೆಡಿಕಲ್ ಎಕ್ಸ್‌ರೇ (ಪಾಲಿಯಸ್ಟರ್) ಸಿನಿ ಪಾಸಿಟಿವ್, ಸಿನಿ ಸೌಂಡ್ ನೆಗೆಟಿವ್, ಕಪ್ಪು ಬಿಳುಪು ರೋಲ್ ಫಿಲ್ಮ್, ಆಡಿಯೋ ಪ್ರೊಫೆಶನಲ್ ಟೇಪ್, ಆಡಿಯೋ ಡೊಮೆಸ್ಟಿಕ್ ಟೇಪ್, ಕಂಪ್ಯೂಟರ್ ಟೇಪ್, ಇಂಡಸ್ಟ್ರಿಯಲ್ ಎಕ್ಸ್‌ರೇ, ಗ್ರಾಫಿಕ್ ಆರ್ಟ್ಸ್, ಬ್ರೊಮೈಡ್ ಫೋಟೋ ಪೇಪರ್, ಸಂಸ್ಕರಣ ರಾಸಾಯನಿಕಗಳು ಹಾಗೂ ಇನ್ನಿತರ ವಸ್ತುಗಳು ತಯಾರಾಗುತ್ತಿದ್ದವು. ಅವು ‘ಇಂದು’ ಎಂಬ ಹೆಸರಿನಿಂದ ಗುರುತಿಸಲ್ಪಡುತ್ತಿದ್ದವು. ಒಂದು ಅವಧಿಯಲ್ಲಿ ಸಿನೆಮಾ ತಯಾರಕರು, ಕಪ್ಪು ಬಿಳುಪು ಮತ್ತು ವರ್ಣ ಫಿಲ್ಮ್‌ಗಳಿಗಾಗಿ ಪೂರ್ತಿಯಾಗಿ ‘ಇಂದು’ವನ್ನು ನೆಚ್ಚಿಕೊಂಡಿದ್ದರು. ಹಿಂದುಸ್ಥಾನ್ ಫೋಟೋ ಫಿಲ್ಮ್ಸ್ ಸಂಸ್ಥೆಯಲ್ಲಿ ತಯಾರಾ ಗುತ್ತಿದ್ದ ಫೋಟೋ ಸೆನ್ಸಿಟಿವ್ ವಸ್ತುಗಳು ಭಾರತಕ್ಕೆ ಭಾರಿ ಮೊತ್ತದ ವಿದೇಶೀ ವಿನಿಮಯ ಉಳಿತಾಯ ಮಾಡಲು ಸಹಾಯಕವಾದವು.

೧೯೭೦ರ ದಶಕದಲ್ಲಿ ನಷ್ಟದಲ್ಲಿ ನಡೆಯುತ್ತಿದ್ದ ಸಂಸ್ಥೆ ೮೦ರ ದಶಕದಲ್ಲಿ ಆ ನಷ್ಟವನ್ನು ಅಳಿಸಿ ಹಾಕಿ ಲಾಭ ಸಂಪಾದಿಸತೊಡಗಿತು. ೧೯೯೨ರಲ್ಲಿ ಅದರ ವಾರ್ಷಿಕ ವಹಿವಾಟು ರೂ. ೨೩೮ ಕೋಟಿಯಷ್ಟಾಯಿತು. ನಷ್ಟದಲ್ಲಿ ನಡೆಯುತ್ತಿದ್ದ ಸಂಸ್ಥೆ ಲಾಭಾಂಶ ಹಂಚುವ ಹಂತಕ್ಕೆ ತಲುಪಿತು. ೧೯೯೪ರಲ್ಲಿ ಈ ಸಂಸ್ಥೆ ಐಎಸ್‌ಒ ೯೦೦೨ ಮಾನ್ಯತೆ ಗಳಿಸಿತು.

ನೀಲಗಿರಿಯ ಮೂಲ ನಿವಾಸಿಗಳಾದ ಬಡಗ, ತೊದವ, ಕೋತ ಮತ್ತು ಕುರುಬ ಜನಾಂಗದವರಲ್ಲದೆ, ಅಲ್ಲಿ ಸಾಕಷ್ಟು ಮಂದಿ ಕನ್ನಡಿಗರು, ತಮಿಳರು, ಮಲಯಾಳಿಗಳು ಸೇರಿದಂತೆ ಮಿನಿ ಭಾರತ ಎನ್ನಬಹುದಾದ ಸುಮಾರು ೪೩೦೦ ಸಿಬ್ಬಂದಿ ವರ್ಗವಿತ್ತು.

# ಹಿಂದುಸ್ಥಾನ್ ಫೋಟೋ ಫಿಲ್ಮ್ಸ್

## – ಮುಂದುವರಿದ ಹೋರಾಟ

**ಪರಂಜ್ಯೋತಿ**



ಹಿಂದುಸ್ಥಾನ್ ಫೋಟೋ ಫಿಲ್ಮ್ಸ್ ಸಂಸ್ಥೆ



*ಮಹಿಳೆಯರ ಉಪವಾಸ ಸತ್ಯಾಗ್ರಹ*



*ಹೋರಾಟ ನಿರತ ಸಿಬ್ಬಂದಿ : ಇಂಕ್ವಿಲಾಬ್ ಜಿಂದಾಬಾದ್*

ಇವರಲ್ಲಿ ಅನೇಕರು ವಿವಿಧ ಕ್ರೀಡಾ ಚಟುವಟಿಕೆಗಳಲ್ಲಿ ಭಾಗವಹಿಸುತ್ತ ಎಚ್‌ಪಿಎಫ್ ಖ್ಯಾತಿಯನ್ನು ಹೆಚ್ಚಿಸಿದ್ದರು.

ಆದರೆ ಭಾರತ ಸರಕಾರ ೧೯೯೧ರ ನಂತರ ಅನುಸರಿಸತೊಡಗಿದ ಉದಾರೀಕರಣದ ನೀತಿಯಿಂದಾಗಿ ಶೀಘ್ರಗತಿಯಲ್ಲಿ ಅಭಿವೃದ್ಧಿ ಸಾಧಿಸತೊಡಗಿದ್ದ ಈ ಸಂಸ್ಥೆ ಅಂತರರಾಷ್ಟ್ರೀಯ ಕಂಪನಿಗಳ ತೀವ್ರ ಪೈಪೋಟಿಯನ್ನು ಎದುರಿಸಬೇಕಾಯಿತು. ಆಗಷ್ಟೆ ಮೊದಲ ಹೆಜ್ಜೆ ಇರಿಸಲು ಪ್ರಾರಂಭಿಸಿದ್ದ ಮನೆಯ ಮಗುವನ್ನು ಬೀದಿ ಧಾಂಡಿಗರು ಹಿಗ್ಗಾಮುಗ್ಗ ಥಳಿಸುವುದನ್ನು ನೋಡುತ್ತ ಸರಕಾರ ಮೌನ ಸಂತೋಷ ಅನುಭವಿಸತೊಡಗಿತು ! ಫೋಟೋ ಸೆನ್ಸಿಟಿವ್ ವಸ್ತುಗಳ ತಯಾರಿಕೆಯಲ್ಲಿ ಸ್ವಾವಲಂಬನೆ ಸಾಧಿಸಿದ್ದ ಹಿಂದುಸ್ಥಾನ್ ಫೋಟೋ ಫಿಲ್ಮ್ಸ್ ಸಂಸ್ಥೆ ಒಮ್ಮೆಲೇ ಉಸಿರುಗಟ್ಟಿದಂಥ ಪರಿಸ್ಥಿತಿಗೆ ತಲುಪಿತು. ಅದೇ ಅವಧಿಯಲ್ಲಿ ಬಳಕೆಗೆ ಬಂದ ಡಿಜಿಟಲ್ ತಂತ್ರಜ್ಞಾನ ಫಿಲ್ಮ್ ಬಳಕೆಯನ್ನು ತಗ್ಗಿಸಲು ಕಾರಣವಾಯಿತು.

ತಾನು ಅತ್ಯುತ್ಸಾಹದಿಂದ ಕಟ್ಟಿ ಬೆಳೆಸಿದ ಸಂಸ್ಥೆ, ಫೋಟೋ ಸೆನ್ಸಿಟಿವ್ ವಸ್ತುಗಳ ತಯಾರಿಕೆಯಲ್ಲಿ ಸ್ವಾವಲಂಬನೆ ಸಾಧಿಸಿದ್ದ ಸಂಸ್ಥೆ ಕ್ರಮೇಣ ನಿಷ್ಕ್ರಿಯಗೊಳ್ಳತೊಡಗಿದ ಬಗ್ಗೆ ಸರಕಾರಕ್ಕೆ ಏನೂ ಅನ್ನಿಸಲಿಲ್ಲ. ಅದರ ಸಂಪೂರ್ಣ ಬದ್ಧತೆ ಉದಾರೀಕರಣಕ್ಕೆ !

ಅನಿಶ್ಚಿತತೆಯಿಂದ ಕಂಗೆಟ್ಟ ಸಿಬ್ಬಂದಿ ತಮ್ಮ ಸಂಸಾರ ಮತ್ತು ಮಕ್ಕಳ ಭವಿಷ್ಯದ ದೃಷ್ಟಿಯಿಂದ ಸ್ವಯಂ ನಿವೃತ್ತಿ ಪಡೆದು ಒಬ್ಬೊಬ್ಬರಾಗಿ ನಿರ್ಗಮಿಸತೊಡಗಿದರು. ಸರಕಾರದ್ದು ಅದನ್ನು ರೋಗಪೀಡಿತ ಘಟಕವಾಗಿ ಘೋಷಿಸಿ ಕೈತೊಳೆದುಕೊಳ್ಳುವ, ಅಥವಾ ಅದು ತನ್ನಷ್ಟಕ್ಕೆ ಸಾಯಲಿ ಎಂದು ಕಾಯುವ ಹುನ್ನಾರವಿರಬಹುದು. ಆದರೆ, ಅದನ್ನು ಪುನರುಜ್ಜೀವನಗೊಳಿಸಲು ಸರಕಾರ ನೇಮಿಸಿದ್ದ ಸಮಿತಿಯ ಶಿಫಾರಸು ಸರಕಾರದ ನೀತಿಗೆ ಅನುಗುಣವಾಗಿರಲಿಲ್ಲ. ಅಲ್ಲಿ ಬೇರೆಯೇ ಉತ್ಪನ್ನಗಳನ್ನು ತಯಾರಿಸುವ ಸಾಧ್ಯತೆಗಳಿರುವ ಬಗ್ಗೆ ಸಮಿತಿ ಶಿಫಾರಸು ಮಾಡಿತು.

ಈಗ ಸುಮಾರು ೭೦೦ರಷ್ಟು ಸಿಬ್ಬಂದಿಗಳಿದ್ದಾರೆ. ಅವರ ಮತ್ತು ಅವರ ಕುಟುಂಬದವರ ಭವಿಷ್ಯದ ಬಗ್ಗೆ ಸರಕಾರ ಯಾವುದೇ ರೀತಿಯ ಕಾಳಜಿ ತೋರಿಸುತ್ತಿಲ್ಲ. ಈ ಕಾರಣದಿಂದ ಸಿಬ್ಬಂದಿ ದಿಕ್ಕು ತೋಚದ ಸ್ಥಿತಿಯಲ್ಲಿ ಮುಂದುವರಿದಿದ್ದಾರೆ. ಅವರು ತಪ್ಪದೆ ಕೆಲಸಕ್ಕೆ ಹಾಜರಾಗುತ್ತಿದ್ದಾರೆ. ಉತ್ಪಾದನೆ ಸ್ಥಗಿತಗೊಂಡಿದೆ. ತಮ್ಮದು ಹೆಮ್ಮೆಪಡುವಂಥ ಸಾಧನೆ ಎಂದುಕೊಳ್ಳುತ್ತಿದ್ದ ಅವರಿಗೆ ೧೯೮೭ರಿಂದ ವಾರ್ಷಿಕ ಭತ್ಯೆ ಅಥವಾ ವೇತನದಲ್ಲಿ ಹೆಚ್ಚಳವಾಗಿಲ್ಲ. ಈ ವರ್ಷಗಳಲ್ಲಿ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳು ತಮ್ಮ ಸಿಬ್ಬಂದಿಯ ವೇತನ ಮತ್ತು ಭತ್ಯೆಗಳನ್ನು ಹೆಚ್ಚಿಸಿವೆ. ಆದರೆ ಇವರಿಗೆ ಅಂಥ ಅದೃಷ್ಟ ಇನ್ನೂ ಒಲಿದು ಬಂದಿಲ್ಲ. ಆದರೂ ಸಂಸ್ಥೆಯನ್ನು ಸರಕಾರ ಪುನರುಜ್ಜೀವನಗೊಳಿಸಲು ಕ್ರಮ ಕೈಗೊಳ್ಳಬಹುದು ಎಂಬ ಆಶಯ ಅವರದು.

ಹಿಂದುಸ್ಥಾನ್ ಫೋಟೋ ಫಿಲ್ಮ್ಸ್ ಸಿಬ್ಬಂದಿಗಳು ಟ್ರೇಡ್ ಯೂನಿಯನ್‌ಗಳ ನೇತೃತ್ವದಲ್ಲಿ ತಮಗೆ ನ್ಯಾಯ ದೊರಕಿಸಿಕೊಳ್ಳಲು ಹೋರಾಟ ನಡೆಸಿದ್ದಾರೆ. ಏಳು ಟ್ರೇಡ್ ಯೂನಿಯನ್‌ಗಳು, ರಾಜಕೀಯ ಪಕ್ಷಗಳು, ಮ್ಯಾನೇಜ್‌ಮೆಂಟ್‌ನವರು ಸಹ ಸಿಬ್ಬಂದಿಯ ಬೆಂಬಲಕ್ಕಿದ್ದಾರೆ. ಆ ಸಂಸ್ಥೆಯ ಏಳಿಗೆಯನ್ನು ಕಂಡಿದ್ದ ಸ್ಥಳೀಯ ಸಾರ್ವಜನಿಕರ ಸಹಾನುಭೂತಿಯ ಬೆಂಬಲವೂ ಅವರಿಗಿದೆ. ಆದರೆ ಸರಕಾರದ ಹೃದಯ ಕಲ್ಲಾಗಿದೆ. ಆದರೂ ಸಿಬ್ಬಂದಿ ಭರವಸೆ ಕಳೆದುಕೊಳ್ಳದೆ ಹೋರಾಟ ಮುಂದುವರಿಸಿದೆ. ಪ್ರತಿದಿನ ಮುಂಜಾನೆ ಕೆಲಸಕ್ಕೆ ಹಾಜರಾಗುವ ಮುನ್ನ ಸಭೆ ಸೇರಿ ತಮ್ಮ ಬೇಡಿಕೆಯನ್ನು ಸರಕಾರದ ಗಮನಕ್ಕೆ ತರಲು ಪ್ರತಿಭಟನೆ ನಡೆಸುತ್ತಾರೆ. ಕೆಲವರು ಸರದಿ ಉಪವಾಸ ವ್ರತ ಪ್ರಾರಂಭಿಸುತ್ತಾರೆ. ಅವರದು ಅಹಿಂಸಾತ್ಮಕ, ಗಾಂಧಿ ಮಾರ್ಗದ ನೈತಿಕ ಹೋರಾಟ.

ತಮ್ಮ ಅಹವಾಲು ಹೇಳಿಕೊಳ್ಳಲು ಸಿಬ್ಬಂದಿ ವರ್ಗದ ಪ್ರತಿನಿಧಿಗಳು ದಿಲ್ಲಿಯಲ್ಲಿ ಹದಿನೇಳು ದಿನಗಳ ಕಾಲ ತಪಸ್ಸು ಮಾಡಿದರೂ ಹಣಕಾಸು ಮಂತ್ರಿಗಳು ಅವರಿಗೆ ದರ್ಶನ ನೀಡಲಿಲ್ಲ! ಅವರ ದೂರು ಆಲಿಸಲು ಕೃಪೆ ತೋರಿಸಲಿಲ್ಲ. ಪ್ರತಿನಿಧಿಗಳು ನಿರಾಶರಾಗಿ ಹಿಂದಿರುಗಬೇಕಾಯಿತು. ಇಷ್ಟಕ್ಕೂ ಹಣಕಾಸು ಮಂತ್ರಿಗಳು ಸಹ ತಮಿಳ್ನಾಡಿಗೆ ಸೇರಿದವರೇ.

ತನ್ನ ಉದಾರೀಕರಣ ನೀತಿಗೆ ಬದ್ಧವಾಗಿರುವ ಸರಕಾರ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಯ ಸಿಬ್ಬಂದಿಯ ಬಗ್ಗೆ ಇಷ್ಟು ನಿರ್ದಯ ತೋರಿಸಬಾರದಿತ್ತು.


**ಪರಂಜ್ಯೋತಿ**

ನಂ. ೧೦, ೧ನೇ ಮಹಡಿ, ೩ನೇ ಕ್ರಾಸ್ , ಶ್ರೀರಾಮ ದೇವಾಲಯ ರಸ್ತೆ, ದೇವಾಲಯದ ಎದುರು,
ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು - ೫೬೦ ೦೪೭



# ಇಂಡಿಯಾ ಸಿನಿಮಾ :
## ಸಾಮಾಜಿಕ, ಆರ್ಥಿಕ ಉದ್ದೇಶ, ಗುರಿಗಳದೇ ಸಮಸ್ಯೆ!







ಮನರಂಜನೆ ಎನ್ನುವುದು ತುಂಬ ಮುಖ್ಯವಾದ ಮನೋವೈಜ್ಞಾನಿಕ ಆಯಾಮ. ಅದು ಮನೋಲ್ಲಾಸದ ಒಂದೇ ಉದ್ದೇಶವನ್ನೇನೂ ಹೊಂದಿರುವುದಿಲ್ಲ, ಅದೊಂದು ಚಿಕಿತ್ಸಕ ಕ್ರಮವೂ ಹೌದು. ಸಂಗೀತ, ನಾಟಕ, ಸಿನಿಮಾಗಳಿಗೆ ಮನರಂಜನೆಯ ಜತೆಗೆ ಸಮಾಜದ ಸ್ವಾಸ್ಥ್ಯ ಕಾಪಾಡುವ ಶಕ್ತಿಯೂ ಇದೆ. ಸಂಗೀತ ಈತನಕ ಸ್ಪಿರಿಚುಯೆಲ್ ಆಗಿದ್ದುಕೊಂಡೇ ಮಾನಸಿಕ ಸ್ವಾಸ್ಥ್ಯದ ಉದ್ದೇಶವನ್ನು ಸಾಕಾರಗೊಳಿಸುತ್ತ ಬಂದಿತ್ತು. ಆದರೆ ಅದಕ್ಕೀಗ ವ್ಯಾಪಾರದ ಸರಕಾಗುವ ಖಯಾಲಿ ಹೆಚ್ಚಿದೆ. ಹೀಗಾಗಿ ಚೀಪ್ ಎಂಟರ್‌ಟೇನ್ಮೆಂಟ್ ಬೋನಿಗೆ ಬಿದ್ದುಬಿಟ್ಟಿದೆ. ಕ್ಲಾಸಿಕಲ್ ಸಂಗೀತ ಕೂಡ ಷೋಕಿ, ಪುರೋಹಿತಶಾಹಿ ಕಪಿಮುಷ್ಟಿಗಳಿಗೆ ಸರಿಯುತ್ತಿರುವ ಅಪಾಯವನ್ನೂ ನಾವೀಗೀಗ ಕಾಣುತ್ತಿದ್ದೇವೆ. ನಾಟಕರಂಗ ತನ್ನ ಪ್ರತಿಕ್ರಿಯಾತ್ಮಕ ಧೋರಣೆಯನ್ನು ಕಳೆದುಕೊಂಡು ಪ್ರಯೋಗಕ್ಕಷ್ಟೇ ಸೀಮಿತಗೊಳ್ಳುತ್ತಿದೆ. ಇವುಗಳ ಜತೆಗೆ ಸಿನಿಮಾ, ಸಂಪೂರ್ಣ ವ್ಯಾಪಾರೀಕರಣಕ್ಕೊಳಪಟ್ಟು ತನ್ನ ಅಂತಃಸತ್ವವನ್ನೇ ಕಳೆದುಕೊಳ್ಳುವ ಅಪಾಯದಲ್ಲಿದೆ. ಜನಪದ ಕಲೆಯಂತೆ ಬೆಳೆದು ಬರುತ್ತಿರುವ ಸಿನಿಮಾ ಮಾಧ್ಯಮ ಯಾಕೆ ಹೀಗಾಗುತ್ತಿದೆ ?

ಸಿನಿಮಾಗೆ ಆರಂಭದಲ್ಲಿ ಸ್ಪಷ್ಟವಾದ ಉದ್ದೇಶಗಳೇ ಇರಲಿಲ್ಲ. ಇಂಡಿಯಾದಲ್ಲಿ ಸಿನಿಮಾದ ಆರಂಭವೇ ಮೈಥಾಲಜಿ ಕಥೆಗಳನ್ನು ರೀಲು ಸುತ್ತಿ ಜನತೆಯ ಮುಂದೆ ಪ್ರದರ್ಶಿಸುವ ಮೂಲಕವಾಗಿದ್ದು. ಲುಮಿರೇ ಬ್ರದರ್ಸ್ ಕಂಡುಕೊಂಡ ಸಿನಿಮಾ ಕ್ಯಾಮೆರಾ, ಬದುಕಿನ ಕೌತುಕ ಮತ್ತು ರೋಚಕತೆಯನ್ನು ಸೆಳೆಯುವತ್ತ ಮುಖ ಮಾಡಿ ನಿಂತಿತ್ತು. ಅದನ್ನು ಇಂಡಿಯಾ ದೇಶಕ್ಕೆ ಪರಿಚಯಿಸಿದ ಮಹನೀಯರು ಮೈಥಾಲಜಿಯತ್ತ ತಿರುಗಿಸಿಕೊಂಡರು. ಫಾಲ್ಕೆಯಂಥವರು ಸತ್ಯಹರಿಶ್ಚಂದ್ರ ದಂತಕಥೆಗಳನ್ನು ಸಿನಿಮಾ ಮಾಡಿ ಪರದೆಯ ಮೋಹಕ ಜಾಲವನ್ನು ಬಹುಬೇಗ ಹರಡಿಬಿಟ್ಟರು. ಅದರ ಯಶಸ್ಸು ಹೆಚ್ಚು ಹೆಚ್ಚು ಲಾಭ ತರುವುದೆಂಬ ಅಂಶ ಖಾತ್ರಿಯಾಗುವುದಕ್ಕೆ ಬಹಳ ಕಾಲವೇನೂ ಬೇಕಾಗಲಿಲ್ಲ. ಆ ನಂತರದ ಸಿನಿಮಾಗಳೆಲ್ಲ ವ್ಯಾಪಾರಿ ಉದ್ದೇಶಗಳನ್ನಿಟ್ಟುಕೊಂಡೇ ಬಿಡುಗಡೆಗೊಳ್ಳತೊಡಗಿದವು. ಹೀಗಾಗಿ ಎಲ್ಲ ಮನರಂಜನೆಯ ಕಲೆಗಳಂತೆ ಸಿನಿಮಾ ಕೂಡ ಒಂದು ಮನರಂಜನಾ ಕಲೆ ಎಂದು ನಮ್ಮಲ್ಲಿ ಪರಿಗಣಿತವಾಯ್ತಷ್ಟೆ.

ಧಾರ್ಮಿಕ ಚಿಂತನೆಗಳನ್ನು ಹರಡುವ ಮಾಧ್ಯಮವಾಗಿ ಸಿನಿಮಾ ಬಳಕೆಯಾಗಿದ್ದು ನಮ್ಮ ದೇಶದಲ್ಲೇ ಹೆಚ್ಚು. ಪಶ್ಚಿಮ ರಾಷ್ಟ್ರಗಳ ಸಿನಿಮಾಗಳೂ ಇದಕ್ಕೆ ಹೊರತಾಗಿಲ್ಲ. ಪಶ್ಚಿಮದ ರಾಷ್ಟ್ರಗಳಲ್ಲಿ ಕ್ರೈಸ್ತ ಸಂದೇಶಗಳು ಮತ್ತು ಬೈಬಲ್ ಮೌಲ್ಯಗಳನ್ನು ಸಿನಿಮಾ ಮೂಲಕ ವಿಶ್ವಕ್ಕೆ ಉಣಬಡಿಸುವ ಸಾಹಸಗಳು ಮುಂಚಿನಿಂದ ನಡೆಯುತ್ತಲೇ ಬಂದಿವೆ. ಈಗಲೂ ಪ್ರಳಯದ ಭೀತಿಯನ್ನು ಹುಟ್ಟುಹಾಕುವ ಮೂಲಕ ಏಸು ಮಾತ್ರ ಈ ಜಗತ್ತನ್ನು ಉಳಿಸಬಲ್ಲ ಎನ್ನುವ ನಂಬುಗೆಯನ್ನು ಬೆಳೆಸುವುದಕ್ಕೆ ಸಿನಿಮಾ ಮಾಧ್ಯಮವನ್ನು ಬಳಸಿಕೊಳ್ಳುತ್ತಿರುವ ಉದಾಹರಣೆಗಳು ಕಣ್ಮುಂದೆಯೇ ಇವೆ. ರೋನಾಲ್ಡ್ ಎಮೆರಿಕ್ ನಿರ್ದೇಶನದ '೨೦೧೨' ಸಿನಿಮಾ ಭೂಮಿ ಮೇಲೆ ಆಫ್ರಿಕಾ ಒಂದುಳಿದು ಮಿಕ್ಕೆಲ್ಲವೂ ಜಲಾವೃತಗೊಳ್ಳಲಿವೆ ಎನ್ನುವ ಭೀತಿಯನ್ನು ಹರಡಿಬಿಟ್ಟಿತು. ಸಾಗರತೀರದ ಎಲ್ಲ ನಗರಗಳು ಮುಳುಗಲಿವೆ ಎನ್ನುವ ಪುಕಾರು ವಿಶ್ವದ ನಿದ್ದೆಗೆಡಿಸುವಂತೆ ಬೆಳೆದು ನಿಂತಿದ್ದು ಈ ಸಿನಿಮಾ ಮೂಡಿಸಿದ ಪರಿಣಾಮಕ್ಕೆ ಸಾಕ್ಷಿ. ಆದರೆ ಅದಕ್ಕೆ ಹೊರತಾಗಿಯೂ ಈಗಿನ ಬಹುತೇಕ ವಿಶ್ವ ಸಿನಿಮಾಗಳು ವಿಜ್ಞಾನ, ತಂತ್ರಜ್ಞಾನ, ಪರಿಸರ ಕಾಳಜಿ, ಮನೋವಿಜ್ಞಾನಕ್ಕೆ ಸಂಬಂಧಪಟ್ಟಂತೆ ನಿರ್ಮಾಣಗೊಳ್ಳುತ್ತಿವೆ. ಮಿಲಿಟರಿ ಸಾಹಸಗಳ ಜತೆಗೆ ಅನೇಕ ಕ್ರಾಂತಿಕಾರಿ ಬದಲಾವಣೆಗಳನ್ನು ತರಬಲ್ಲ ಸಿನಿಮಾಗಳೂ ಇಂದು ಪರದೆಯ ಮೇಲೆ ಮೂಡುತ್ತಿವೆ.

ಮಯಾನ್ ಕಿಂಗ್‌ಡಂ ಜಮಾನಾದಲ್ಲಿ ಬುಡಕಟ್ಟುಗಳ ನಡುವಿನ ಜನಾಂಗಿಕ ಹಿಂಸೆಗಳು, ರಕ್ತಪಾತ ಮತ್ತು ದೇವರು, ದೈವತ್ವದ ಹೆಸರಲ್ಲಿ ನಡೆಯುತ್ತಿದ್ದ ಸಾಮೂಹಿಕ ನರಬಲಿಯಂಥ ೮ನೇ ಶತಮಾನದ ವಸ್ತು ವೊಂದನ್ನಿಟ್ಟುಕೊಂಡು ರೂಪಿಸಿದ 'ಅಪೊಕ್ಯಾಲಿಪ್ಟೊ' ಸಿನಿಮಾ (ನಿರ್ದೇಶನ : ಮೆಲ್ ಗಿಬ್ಸನ್, ಚಿತ್ರಕಥೆ : ಫರ್ಹಾದ್ ಸಫಿನಿಯಾ ಮತ್ತು ಗಿಬ್ಸನ್) ವರ್ತಮಾನದಲ್ಲಿ ನಡೆಯುತ್ತಿರುವ ಧರ್ಮ ಮತ್ತು ಜನಾಂಗಿಕ ಕಲಹಗಳಿಗೆ ಸಾಮ್ಯತೆಯನ್ನು ಕಟ್ಟಿಕೊಡುತ್ತದೆ. ಜನಾಂಗವೊಂದರ ಅವನತಿ ಅದರ ಒಳಗಿನ ಬೆಳವಣಿಗೆಯಿಂದಲೇ ಆಗಬಹುದೇ ವಿನಾ ಬೇರೊಂದು ದಾಳಿ ಅದನ್ನು ನಾಶಪಡಿಸಲಾಗದು ಎನ್ನುವುದು ಸಿನಿಮಾದ ಸಂದೇಶ. ಪ್ರಸ್ತುತ ಜಗತ್ತಿನಲ್ಲಿ

**ಸಾಹಿರ್ ಡಿ. ಆರ್.**









ನಡೆಯುತ್ತಿರುವ ಆಯಾ ಜನಸಂಸ್ಕೃತಿಗಳ ಮೇಲೆ ಧರ್ಮ ಮತ್ತು ವ್ಯಾಪಾರದ ಹೆಸರಲ್ಲಿ ನಡೆಯುತ್ತಿರುವ ದಾಳಿಗಳನ್ನು ಪರೋಕ್ಷವಾಗಿ ಸಾಂಕೇತಿಸುತ್ತದೆ. ಸಿನಿಮಾದ ಕಡೆಯ ದೃಶ್ಯದಲ್ಲಿ ತನ್ನ ಜನಾಂಗ ಮತ್ತು ಕುಟುಂಬದ ಉಳಿವಿಗೆ ಸಂಘರ್ಷ ನಡೆಸುವ ಜಾಗ್ವಾರ್ ಯಶಸ್ಸನ್ನು ಕಾಣುತ್ತಾನೆ. ಕಾಡಿನಂಚಿಗೆ ಕಾಣುವ ಸಾಗರ ತೀರದಲ್ಲಿ ಶಿಲುಬೆಯನ್ನು ಹೊತ್ತ ಹಡಗು ಜಾಗ್ವಾರ್ ಇರುವ ಜಾಗದತ್ತ ಸಾಗಿಬರುತ್ತಿರುತ್ತದೆ. ಅದು ಜಗದ ರಕ್ಷಕ ಏಸು ಎನ್ನುವ ಕ್ರೈಸ್ತ ಸಂದೇಶದೊಂದಿಗೆ ರಕ್ಷಣೆಯ ಆಮಿಷ ಹೊತ್ತು ಬಂದಂತೆ ಕಾಣಿಸುತ್ತದೆ. ಜಾಗ್ವಾರ್ ಅದನ್ನು ಅಪ್ಪಿಕೊಳ್ಳದೇ ಮತ್ತೆ ತನ್ನ ಕಾಡಿಗೆ, ಜನಸಂಸ್ಕೃತಿಗೆ ಮರಳುವ ನಿರ್ಧಾರ ಮಾಡುವ ಮೂಲಕ ವೈವಿಧ್ಯಮಯ ಜಗತ್ತಿಗೆ ಮರುಜೀವ ತುಂಬುತ್ತಾನೆ.

ಹೀಗೆ ಒಂದು ಸಿನಿಮಾದ ಮೂಲಕ ಸೂಕ್ಷ್ಮ ಮನೋಧರ್ಮ, ವಿಶ್ವಮಾನವ ಸಂದೇಶ ಸಾರುವ ಕೆಲಸವನ್ನು ವಿಶ್ವ ಸಿನಿಮಾ ಮಾಡುವುದಾದರೆ, ಪ್ರಸ್ತುತ ಇಂಡಿಯಾ ಸಿನಿಮಾ ತನ್ನ ನಡುವಿನ ಸಮಸ್ಯೆಗಳಿಗೆ ಉತ್ತರ ಹುಡುಕುವ ಮತ್ತು ಮಾನವಿಕ ಅಭಿವೃದ್ಧಿಯತ್ತ ಮುಖ ಮಾಡುವ ಧೈರ್ಯ ಯಾಕೆ ಮಾಡುತ್ತಿಲ್ಲ ಎನ್ನುವ ಪ್ರಶ್ನೆ ಕಾಡುತ್ತದೆ.

* * *

೪೦ ಮತ್ತು ೫೦ರ ದಶಕದ ಇಂಡಿಯಾ ಸಿನಿಮಾಗಳಲ್ಲಿ ಕೆಲವು ಮಹತ್ವದ ಬೆಳವಣಿಗೆಗಳು ವಸ್ತುಗಳ ಆಯ್ಕೆ ವಿಷಯದಲ್ಲಿ ಆದವು. ೮೦ ವರ್ಷಗಳ ಹಿಂದೆ 'ಆಲಂ ಆರಾ' (೧೯೩೧) ಚಿತ್ರದ ಮೂಲಕ ಇಂಡಿಯನ್ ಪರದೆಗೆ ಮಾತು ಬಂತು. ಮೊದಲ ಸಲ ಹಾಡು (ದೇದೇ ಖುದಾ ಕೆ ನಾಮ್ ಪೆ... ಎನ್ನುವುದು ನಮ್ಮ ಸಿನಿಮಾದ ಮೊಟ್ಟ ಮೊದಲ ಗೀತೆ. ಹಾಡಿದವರು: ವಜೀರ್ ಮೊಹಮ್ಮದ್ ಖಾನ್), ಸಂಗೀತ ಕೇಳಿಸಿಕೊಂಡಿದ್ದು ಕೂಡ ಆಗಲೇ. ಅರ್ದೇಶಿರ್ ಇರಾನಿ ಅವರ ಪ್ರಯತ್ನದ ಫಲವಿದು. ಸಿನಿಮಾಗೆ ಬಂದ ಈ ಮಾತು ಮುಂದೆ ಜನಪರವಾದ ದೊಡ್ಡ ದನಿಯಾಗಿಯೂ ಬೆಳೆದು ನಿಂತಿದ್ದಕ್ಕೆ ಹಲವು ಚಿತ್ರಗಳು ಸಾಕ್ಷಿಯಾಗಿವೆ.

ಇಂಡಿಯಾದಲ್ಲೇ ಸಂಪೂರ್ಣವಾಗಿ ರೂಪುಗೊಂಡ ಮೊದಲ ವರ್ಣಚಿತ್ರ ಕಿಸಾನ್ ಕನ್ಯಾ (೧೯೩೭), ಸಾದತ್ ಹಸನ್ ಮಾಂಟೋ ಕಾದಂಬರಿ ಆಧಾರಿತ ಸಿನಿಮಾ. (ನಿರ್ದೇಶನ: ಮೋತಿ ಬಿ ಗಿದ್ವಾನಿ, ನಿರ್ಮಾಣ: ಇಂಪೀರಿಯಲ್ ಫಿಲ್ಮ್ ಕಂಪೆನಿ. ಅಭಿನಯ: ಪದ್ಮಾದೇವಿ, ಜಿಲ್ಲೂ, ಗುಲಾಂ ಮೊಹಮ್ಮದ್, ನಿಸಾರ್, ಸಯಿದ್ ಅಹಮದ್ ಮತ್ತು ಗನಿ)

ಭೂಮಾಲಿಕನಿಂದ ಶೋಷಣೆಗೊಳಗಾಗುತ್ತಲೇ ಬಂದ ರೈತ ರಾಮು ಮತ್ತವನ ಮಗಳ ಸುತ್ತ ಹೆಣೆದ ಕಥೆ ಇದು. ಕಥೆಯಲ್ಲಿ ಭೂಮಾಲೀಕನ ಕೊಲೆಯಾಗುತ್ತದೆ. ಜನ ರಾಮನೇ ಕೊಲೆಗಾರನೆಂದು ಸಂಶಯಪಡುವುದು ಈ ಚಿತ್ರದ ಟ್ರಾಜಿಡಿ ಟ್ರ್ಯಾಕ್. ರೈತರ ಸಮಸ್ಯೆಯನ್ನು ತೆರೆಯ ಮೇಲೆ ಬಿಚ್ಚಿಡುವ ಬಹುಮುಖ್ಯವಾದ ಯತ್ನವೊಂದಕ್ಕೆ ನಾಂದಿಯಂತೆ ಈ ಚಿತ್ರ ಗಮನ ಸೆಳೆಯುತ್ತದೆ.

ಅಚ್ಯುತ ಕನ್ಯಾ (ಅಸ್ಪೃಶ್ಯ ಕನ್ಯೆ) ಎನ್ನುವ ಮತ್ತೊಂದು ಪ್ರಮುಖ ಚಿತ್ರ ೧೯೩೬ರಲ್ಲಿ ತೆರೆಗೆ ಬಂದಿತ್ತು. ಹಿಮಾಂಶು ರಾಯ್ ನಿರ್ಮಿಸಿದ ಈ ಚಿತ್ರವನ್ನು ಫ್ರಾಂಜ್ ಓಸ್ಟನ್ ನಿರ್ದೇಶಿಸಿದ್ದರು. ದಲಿತರ ಸ್ಥಿತಿ ಮತ್ತು ಅಸ್ಪೃಶ್ಯತೆಯ ಸುತ್ತ ರೂಪಿಸಿದ ಚಿತ್ರ. ಆಗಿನ ಕಾಲದ ಅತ್ಯಂತ ಸುಧಾರಣಾವಾದಿ ಸಿನಿಮಾ ಆಗಿ ಇದು ಗಮನ



ಸೆಳೆದಿತ್ತು. ಚಿತ್ರೋತ್ಸವಗಳಲ್ಲಷ್ಟೇ ನೋಡಬಹುದಾದ ಈ ಚಿತ್ರದ ಪ್ರಿಂಟ್ ನಶಿಸಿಹೋಗುವ ಹಂತಕ್ಕೆ ಬಂದಿದೆ.

೫೦ರ ದಶಕದಲ್ಲಿ ಇಡೀ ದೇಶ ನೆಹರೂ ಅವರು ಪ್ರಾರಂಭಿಸಿದ ಕೈಗಾರಿಕೀಕರಣದ ಗುಂಗಿನಲ್ಲಿತ್ತು ಎನ್ನುವುದನ್ನು ಇತಿಹಾಸ ಹೇಳುತ್ತದೆ. ಆ ಸಂದರ್ಭದಲ್ಲಿ ನೆಹರೂ ಚಿಂತನೆಗಳು ತುಂಬ ಟೀಕೆಗೊಳಗಾದವು. ಅದಕ್ಕೆ ಇಂಡಿಯಾ ಸಿನಿಮಾ ಅತ್ಯಂತ ಪ್ರತಿಕ್ರಿಯಾತ್ಮಕ ಧೋರಣೆಯನ್ನು ತಾಳಿತ್ತು ಎನ್ನುವುದು ಗಮನಿಸಲೇ ಬೇಕಾದ ಅಂಶ. ಸಿನಿಮಾ ಮಾಧ್ಯಮವೊಂದು ಅತ್ಯಂತ ಜವಾಬ್ದಾರಿಯಿಂದ ತನ್ನ ನೆಲದ ಮೌಲ್ಯಗಳನ್ನು ಮತ್ತು ಚಿಂತನೆಗಳನ್ನು ಒರೆಗೆ ಹಚ್ಚುವಂತೆ ಆಡಳಿತವನ್ನು ಎಚ್ಚರಿಸುವ ದಿಟ್ಟತನ ತೋರಿದ್ದು ಗಮನಾರ್ಹ. ಆ ಸಂದರ್ಭದಲ್ಲಿ ಬಂದ ದೋ ಬಿಘಾ ಜಮೀನ್ ಅತ್ಯಂತ ಪ್ರಮುಖವಾದ ಕಮ್ಯುನಿಸಂ ಧೋರಣೆಯ ಚಿತ್ರ. ೧೯೫೩ರಲ್ಲಿ ತೆರೆಕಂಡ ದೋ ಬಿಘಾ ಜಮೀನ್ (ನಿರ್ದೇಶನ: ಬಿಮಲ್ ರಾಯ್, ಅಭಿನಯ: ಬಲರಾಜ್ ಸಹಾನಿ, ನಿರುಪಾ ರಾಯ್, ಮೀನಾಕುಮಾರಿ, ಮೆಹಮೂದ್, ಜಗದೀಪ್).

ಬಿಮಲ್ ರಾಯ್ ಅವರ ದೋ ಬಿಘಾ ಜಮೀನ್ (ಎರಡೆಕರೆ ಭೂಮಿ) ಅವತ್ತಿನ ಸಂದರ್ಭದಲ್ಲಿ ನೆಹರು ರಾಜಕೀಯ ಚಿಂತನೆಗೆ ಪ್ರತಿಕ್ರಿಯೆಯ ರೂಪದಲ್ಲಿ ರೂಪುಗೊಂಡಿತ್ತು. ರೈತ ಶಂಭೂ ಮಹಾತೊ (ಬಲರಾಜ್ ಸಹಾನಿ), ಪತ್ನಿ ಪಾರ್ವತಿ ಮಹಾತೊ (ನಿರುಪಾ ರಾಯ್) ಮತ್ತವರ ಮಗ ತಮ್ಮ ಎರಡೆಕರೆ ಭೂಮಿಯನ್ನು ಕೈಗಾರಿಕೋದ್ಯಮಿಯಿಂದ ಉಳಿಸಿಕೊಳ್ಳುವುದಕ್ಕೆ ಹೆಣಗುವ ಮತ್ತು ಅಂತ್ಯದಲ್ಲಿ ಸೋಲು ಕಾಣುವ ಪರಿ ಒಟ್ಟು ರೈತಾಪಿ ಜನರ ಶೋಚನೀಯ ಮತ್ತು ಅಸಹಾಯಕ ಸ್ಥಿತಿಯನ್ನು ಹೇಳುವಂತಿದೆ. ಇದಕ್ಕೆಲ್ಲ ನೆಹರೂ ಆರ್ಥಿಕ ನೀತಿಗಳೇ ಕಾರಣ ಎನ್ನುವ ನೇರ ಆರೋಪ ಬೆಳ್ಳಿಪರದೆ ಮೇಲೆ ಆಗ ರಾರಾಜಿಸಿತ್ತು. ಈ ಚಿತ್ರದ ಕಥೆ ಸಂಗೀತ ನಿರ್ದೇಶಕ ಸಲೀಲ್ ಚೌಧರಿ ಅವರದು (ಕನ್ನಡದಲ್ಲಿ ಇತ್ತೀಚೆಗೆ ಬಂದ 'ಪುಟ್ಟಕ್ಕನ ಹೈವೇ' ಚಿತ್ರದ ಕಥೆಯೂ ಕೂಡ ಇದನ್ನೇ ಹೋಲುತ್ತದೆ).

ಕಥೆ ಮತ್ತು ಚಿತ್ರದ ಆಶಯ ಎಷ್ಟು ಸೂಕ್ಷ್ಮವಾಗಿದೆ ನೋಡಿ. ಶಂಭು ತನ್ನ ಎರಡು ಎಕರೆ ಜಮೀನಿನಲ್ಲಿ ಬದುಕಿನ ಬಂಡಿ ಸಾಗಿಸಿಕೊಂಡು ಬಂದವ. ಮಳೆಯನ್ನೇ ನೆಚ್ಚಿಕೊಂಡು ಬೆಳೆ ಬೆಳೆಯುವ ಆತನ ಕುಟುಂಬಕ್ಕೆ ಬರಗಾಲದಿಂದ ಸಾಲದ ಹೊರೆ ಬೀಳುತ್ತಲೇ ಹೋಗುತ್ತದೆ. ಬರದಿಂದ

ತತ್ತರಿಸಿದ್ದ ಭೂಮಿಗೆ ಮಳೆ ಬೀಳುವುದು ಶಂಭೂನಂಥ ಅಸಂಖ್ಯ ರೈತರಲ್ಲಿ ನೆಮ್ಮದಿ ಮೂಡಿಸಿರುತ್ತದೆ. ಬಿತ್ತನೆಯ ಕೆಲಸ ಭರದಿಂದಲೇ ನಡೆಯುತ್ತದೆ. ಆ ವೇಳೆಯಲ್ಲೇ ಕೈಗಾರಿಕೆ ಸ್ಥಾಪಿಸುವ ಕನಸು ಹೊತ್ತು ಉದ್ಯಮರಂಗ ಹಳ್ಳಿಗೆ ಕಾಲಿಡುತ್ತದೆ. ಸ್ಥಳೀಯ ಜಮೀನುದಾರನ ಸಹಾಯದಿಂದ ಕೃಷಿ ಭೂಮಿಯೊಂದನ್ನು ಉದ್ಯಮಿ ಆಯ್ಕೆ ಮಾಡಿಕೊಳ್ಳುತ್ತಾನೆ. ಅದು ಶಂಭೂವಿಗೆ ಸೇರಿದ ಭೂಮಿ. ಭೂಮಿಯ ಮಾರಾಟವನ್ನು ಶಂಭೂ ವಿರೋಧಿಸುತ್ತಾನೆ. ''ಜಮೀನ್ ಕೊ ಬೇಚನಾ ಮಾ ಕೋ ಬೇಚನೇಕಾ ಬರಾಬರ್ ಹೈ'' (ಭೂಮಿ ಮಾರುವುದೆಂದರೆ ತಾಯಿಯನ್ನೇ ಮಾರಿದಂತೆ) ಎನ್ನುವ ನಿಲುವಿಗೆ ಶಂಭೂ ಬಂದಿರುತ್ತಾನೆ. ಊರ ಜಮೀನುದಾರನ ಕಣ್ಣು ಶಂಭೂ ಮೇಲೆ ಬೀಳುತ್ತದೆ. ಆತನ ಭೂಮಿ ಖಾಲಿ ಮಾಡಿಸುವುದು ಅವನಿಗೆ ಅಂಥ ಕಷ್ಟಕರವೇನೂ ಅಲ್ಲ. ಶಂಭು ಮಾಡಿದ ಸಾಲ ಬಡ್ಡಿಗೆ ಬಡ್ಡಿ, ಮತ್ತವನ ತಂತ್ರದ ಬಡ್ಡಿ ಸೇರಿ ಬೆಟ್ಟದಷ್ಟಾಗಿ ಹೊಲ ಉಳಿಸಿಕೊಳ್ಳುವುದೇ ಕಷ್ಟಕರ ಎನಿಸುವಂತೆ ಆಗಿಬಿಟ್ಟಿರುತ್ತದೆ. ಒಟ್ಟು ಸಾಲದ ಮೊತ್ತವನ್ನು ಈಗಲೇ ನೀಡುವಂತೆ ಜಮೀನುದಾರ ತಾಕೀತು ಮಾಡುತ್ತಾನೆ. ಶಂಭೂ ಕಾಲಾವಕಾಶ ಕೋರುತ್ತಾನೆ. ಅದನ್ನು ಒಪ್ಪಿಕೊಂಡ ಜಮೀನುದಾರ ಮೂರು ತಿಂಗಳ ವಾಯಿದೆ ನೀಡುತ್ತಾನೆ. ಅಷ್ಟು ಅವಧಿಯಲ್ಲಿ ಸಾಲದ ಹಣ ಹೊಂದಿಸಲು ಶಂಭೂ ಹಳ್ಳಿ ಬಿಟ್ಟು ಕೊಲ್ಕತ್ತ ಶಹರಿಗೆ ಹೊರಡುವ ನಿರ್ಧಾರ ಕೈಗೊಳ್ಳುತ್ತಾನೆ. ಕೊಲ್ಕತ್ತಾದಲ್ಲಿ ಕೂಲಿ, ತಳ್ಳುವ ರಿಕ್ಷಾ ಕೆಲಸ ಮಾಡಿಕೊಂಡು ಹಣ ಕೂಡಿಸಿಡತೊಡಗುತ್ತಾನೆ, ತಂದೆಯ ಕಷ್ಟಕ್ಕೆ ಮಗನೂ ನೆರವಾಗಲು ಶಹರು ಸೇರಿ ಬೂಟ್ ಪಾಲಿಶ್ ಕೆಲಸದಲ್ಲಿ ತೊಡಗಿಕೊಳ್ಳುತ್ತಾನೆ. ಇತ್ತ ಹೆಂಡತಿ ಹಳ್ಳಿಯಲ್ಲಿ ಕಾಯಿಲೆಯಿಂದ ಬಳಲುತ್ತಿರುವ ಮಾವನನ್ನು ನೋಡಿಕೊಳ್ಳುವುದರ ಜತೆಗೆ, ಊರ ಸಾಹುಕಾರ ಜನರ ಕೆಂಗಣ್ಣಿನಿಂದ ಬಚಾವಾಗುತ್ತ ಬದುಕುತ್ತಿರುತ್ತಾಳೆ. ಗಂಡ ಕಳುಹಿಸುವ ಹಣದಲ್ಲೇ ಬದುಕು ನಡೆಯಬೇಕು, ಮಾವನ ಔಷಧಿಯ ವ್ಯವಸ್ಥೆಯನ್ನೂ ಮಾಡಿಕೊಳ್ಳಬೇಕು. ಇದವಳಿಗೆ ಕಷ್ಟವಾಗಿಬಿಡುತ್ತದೆ. ಆಕೆಯೂ ಕೂಲಿ ಕೆಲಸ ಮಾಡಿ ಸಾಲದ ಮೊತ್ತ ಸೇರಿಸುವ ಗುರಿಗೆ ಸಾಥ್ ಆಗುತ್ತಾಳೆ. ಒಂದಷ್ಟು ಹಣ ಕೂಡಿಸಿಕೊಂಡು ಗಂಡನನ್ನು ಹುಡುಕುತ್ತ ಆಕೆ ಕೊಲ್ಕತ್ತಾ ಶಹರು ಸೇರಿಕೊಳ್ಳುತ್ತಾಳೆ. ಆಕಸ್ಮಿಕವಾಗಿ ಅಪಘಾತಕ್ಕೀಡಾಗುತ್ತಾಳೆ. ಕೊನೆಯಲ್ಲಿ ಅಂತೂ ಗಂಡ, ಹೆಂಡತಿ ಮತ್ತು ಮಗ ಒಂದೆಡೆ ಸೇರುತ್ತಾರೆ. ಕೂಡಿಟ್ಟ ಹಣದೊಂದಿಗೆ ಹಳ್ಳಿಗೆ ಮರಳುತ್ತಾರೆ. ಅವರಿಗೆ ಇಲ್ಲಿ ಒಂದು ಆಘಾತ ಕಾದಿರುತ್ತದೆ. ಶಂಭೂ ಜಮೀನಿನಲ್ಲಿ ಈಗ ಕೈಗಾರಿಕೆಯ ಕಟ್ಟಡ ಕಾಮಗಾರಿ ಭರದಿಂದ ಸಾಗುತ್ತಿರುತ್ತದೆ. ಭೂಮಿಯ ಸುತ್ತ ತಂತಿ ಬೇಲಿ! ಶಂಭೂ ಬೇಲಿಯೊಳಕ್ಕೆ ಹಿಡಿ ಮಣ್ಣಿಗಾಗಿ ಕೈಹಾಕುತ್ತಿದ್ದರೆ ಉದ್ಯಮಿಯ ಗಾರ್ಡ್ ತಡೆಯೊಡ್ಡುತ್ತಾನೆ. ಕೊನೆಯ ದೃಶ್ಯದಲ್ಲಿ ನೆಲವನ್ನೊಮ್ಮೆ ನೋಡಿದ ಶಂಭು ಮತ್ತವನ ಪರಿವಾರ ಬಂದ ದಾರಿ ಹಿಡಿದು ಸಾಗುತ್ತದೆ. ಚಿತ್ರ ರೈತನ ದಾರುಣ ಸ್ಥಿತಿಯನ್ನು ಮತ್ತು ಅದಕ್ಕೆ ಕಾರಣವಾಗುವ ಭೂಮಾಲೀಕರ ದರ್ಪವನ್ನು ಮನದಟ್ಟುಮಾಡಿಕೊಡುತ್ತದೆ.

ರೈತಾಪಿ ಜನರ ಬವಣೆಯನ್ನೇ ಆಧಾರವಾಗಿಟ್ಟುಕೊಂಡ ಮೆಹಬೂಬ್ ಖಾನ್ ಅವರ ಔರತ್ ಚಿತ್ರ ತೆರೆಗೆ ಬಂದಿತ್ತು. ಮುಂದೆ ಅದನ್ನೇ ನವೀಕರಿಸಿ ಮದರ್ ಇಂಡಿಯಾ (೧೯೫೭) ಚಿತ್ರವಾಗಿಸಿದವರು ನಿರ್ದೇಶಕ, ನಿರ್ಮಾಪಕ: ಮೆಹಬೂಬ್ ಖಾನ್. ನರ್ಗಿಸ್ (ರಾಧಾ), ಸುನೀಲ್ ದತ್ (ಬಿರ್ಜು), ರಾಜೇಂದ್ರಕುಮಾರ್ (ರಾಮು), ರಾಜಕುಮಾರ್ (ಶಾಮು), ಸಾಜಿದ್ ಖಾನ್ (ಯುವ ಬಿರ್ಜು) ಮುಂತಾದವರ ದೊಡ್ಡ ತಾರಾಗಣವೇ ಚಿತ್ರದಲ್ಲಿತ್ತು. ೧೯೫೭ರಲ್ಲಿ ತೆರೆಕಂಡ ಮದರ್ ಇಂಡಿಯಾ ದೇಶದ ಮೂಲೆ ಮೂಲೆಯ ರೈತರಲ್ಲಿ ನೋವು, ಹತಾಶೆಯ ಜತೆಗೆ ಕೆಚ್ಚು ಮೂಡಿಸಿದ್ದು ಸುಳ್ಳಲ್ಲ.

೫೦ ಮತ್ತು ೬೦ರ ದಶಕದಲ್ಲಿ ಇಂಡಿಯನ್ ಸಿನಿಮಾ ಹೆಚ್ಚಾಗಿ ಕೃಷಿ ಮತ್ತು ರೈತರ ಸಮಸ್ಯೆಗಳ ಮೇಲೆಯೇ ಕ್ಯಾಮೆರಾ ಪ್ಯಾನ್ ಮಾಡಿತು. ಆಗಿನ ದೇಶದ ಚಿತ್ರಣ ಗಮನಿಸಿದರೆ ರೈತರ ಸಮಸ್ಯೆಗೆ ಭಾವನಾತ್ಮಕವಾಗಿ ಸಿನಿಮಾ ಸ್ಪಂದಿಸಿದ್ದು ಸಹಜವೇ ಆಗಿದೆ. ಆಗ ಜವಾಹರಲಾಲ್ ನೆಹರು ಸರ್ಕಾರವಿತ್ತು. ನೆಹರು ಆರಂಭದಲ್ಲಿ ಇಡೀ ದೇಶವನ್ನು ಕೈಗಾರಿಕೆಗಳ ನಿರ್ಮಾಣದತ್ತ ಮುಖಮಾಡಿ ನಿಲ್ಲಿಸಿದ್ದರು. ಆರ್ಥಿಕ ಸ್ವಾವಲಂಬನೆಯ ಹಿನ್ನೆಲೆಯಲ್ಲಿ ಇದು ಅನಿವಾರ್ಯ ಎನ್ನುವಂಥ ಸ್ಥಿತಿಯೂ ನಿರ್ಮಾಣಗೊಂಡಿತ್ತು. ಆಗ ಕೈಗಾರಿಕೆಗಳು ಬೆಳೆಯುವುದಕ್ಕೆ ಕೃಷಿಭೂಮಿಯೇ ಹೆಚ್ಚು ಬಳಕೆಯಾಯ್ತು. ಇದರಿಂದಾಗಿ ಭೂಮಿಯನ್ನೇ ನಂಬಿಕೊಂಡ ರೈತರು ಕಂಗಾಲಾಗಬೇಕಾಯಿತು. ಪರಿಹಾರವಾಗಿ ಅವರ ಕೈಗೆ ದಕ್ಕುತ್ತಿದ್ದುದು ತುಂಬ ಕಮ್ಮಿ ರಖಂ. ಭೂಮಿಗೆ ಬೆಲೆ ಕೇಳುವುದಕ್ಕಿಂತ ಮಿಗಿಲಾಗಿ ಭೂಮಿ ಜತೆಗಿನ ಭಾವನಾತ್ಮಕ ನಂಟನ್ನು ರೈತರು ಹೆಚ್ಚಾಗಿ ಬಯಸಿದರು. ಜನಪರವಾದ ಈ ದನಿಯನ್ನೇ ಸಿನಿಮಾ ತನ್ನ ಜೀವ ದ್ರವ್ಯವಾಗಿಸಿಕೊಂಡಿತು. ಆ ಅವಧಿಯ ಇಡೀ ಇಂಡಿಯನ್ ಸಿನಿಮಾ ಅವಲೋಕಿಸಿದಾಗ ಇಡೀ ಉದ್ಯಮ ನೆಹರು ರಾಜಕೀಯದ ವಿರುದ್ಧ ಸಿಡಿದೆದ್ದಂತೆ ಕಾಣಿಸುವುದು ಅತ್ಯಂತ ಸ್ಪಷ್ಟ.

ಇದರ ನಡುವೆಯೂ ಆದ ಕೈಗಾರಿಕೆಗಳ ಬೆಳವಣಿಗೆಯಿಂದ ಕಾರ್ಮಿಕ ವರ್ಗದ ಸಂಖ್ಯಾಬಲವೂ ಹೆಚ್ಚಾಯ್ತು. ಹಾಗೆ ನೋಡಿದರೆ ರೈತರು, ಕೂಲಿ ಕಾರ್ಮಿಕರ ಜತೆ ಕೈಗಾರಿಕೆಗಳ ಕಾರ್ಮಿಕರೂ ಸೇರಿದ್ದರಿಂದ ಆರ್ಥಿಕ ಸ್ವಾವಲಂಬನೆಗೆ ಬಂಡವಾಳ ಮತ್ತು ದುಡಿಯುವ ವರ್ಗದ ಶಕ್ತಿ ಸಮನಾಗಿ ಬೆಳೆದು ನಿಲ್ಲುವಂಥ ನಿಜವಾದ ಅಭಿವೃದ್ಧಿಯ ಪರಿಕಲ್ಪನೆಯೊಂದು ಬೆಳೆದು ನಿಲ್ಲಬೇಕಿತ್ತು. ಹಾಗಾಗಲಿಲ್ಲ. ಬದಲಾಗಿ ದುಡಿಯುವ ವರ್ಗದ ಶೋಷಣೆಯೇ ದೊಡ್ಡ ವ್ಯವಸ್ಥೆಯಾಗಿ ಬೆಳೆದು ನಿಂತಿತು. ಬಂಡವಾಳಶಾಹಿಗಳು ಆರ್ಥಿಕ ಶಕ್ತಿಯಾಗಿ ಅಭಿವೃದ್ಧಿಯ ಹರಿಕಾರರಾಗಿ ಬೆಳೆದುನಿಂತರು. ಹಣದ ವ್ಯಾಮೋಹಕ್ಕೆ ಧರ್ಮದ ಶಕ್ತಿ ಬಂದುಬಿಟ್ಟಿತು. ಅದು ಮೌಲ್ಯಗಳನ್ನು ಸೃಷ್ಟಿಸಿ ಅದಕ್ಕೆ ಅಧೀನರಾಗಬಲ್ಲವರನ್ನು ಮಾತ್ರ ಸಲಹುವ ಮನೋಧರ್ಮ ರೂಪಿಸಿಕೊಂಡಿತು. ರೈತರು ಕೈಗಾರಿಕೆಗಳಿಗಾಗಿ ಭೂಮಿ ಕಳೆದುಕೊಳ್ಳಬೇಕಾಯ್ತು. ಜೀವನಾಧಾರವಾಗಿದ್ದ ಕೃಷಿ ಅವರ ಕೈಯಿಂದ ಬಿಟ್ಟುಹೋಯ್ತು. ಭೂಮಾಲೀಕರ ದರ್ಪದ ಜತೆಗೆ ಉದ್ಯಮಿಗಳ ಅಟ್ಟಹಾಸವೂ ಸೇರಿಕೊಂಡು ರೈತರು, ಬಡವರು, ಕೂಲಿ ಕಾರ್ಮಿಕರ ಬದುಕೇ ದುಸ್ತರಗೊಂಡಿತು. ಈ ದಾರುಣ ಸ್ಥಿತಿಯನ್ನೇ ಆಗಿನ ಸಿನಿಮಾಗಳು ಮುಖ್ಯ ವಸ್ತುವಾಗಿಟ್ಟುಕೊಂಡವು. ಹೀಗಾಗಿ ದೋ ಬೀಘಾ ಜಮೀನ್, ಮದರ್ ಇಂಡಿಯಾ, ಔರತ್ ನಂತರದ ೭೦, ೮೦ರ ದಶಕದಲ್ಲಿ ಕೂಲಿ, ರೋಟಿ ಕಪಡಾ ಔರ್ ಮಕಾನ್ ಚಿತ್ರಗಳು ನಿರ್ಮಾಣಗೊಂಡವು. ಇವು ಆಗಿನ ರೈತರ, ಬಡವರ, ಕಾರ್ಮಿಕರ ದಾರುಣ ಚಿತ್ರಣವನ್ನು ಅತ್ಯಂತ ನೈಜವಾಗಿ ಕಣ್ಮುಂದೆ ಕಟ್ಟಿಬಿಟ್ಟವು. ಇದು ಆತ್ಮಾನುಕಂಪ ಹೆಚ್ಚಿಸುವಷ್ಟಕ್ಕೇ ಸೀಮಿತಗೊಂಡಿದ್ದು ಇವುಗಳ ಮಿತಿಯೂ ಹೌದು. ಆನಂತರದ ಇಂಡಿಯಾ ಸ್ಥಿತಿ ಹೆಚ್ಚು ಬದಲಾವಣೆಯನ್ನೇನೂ ಕಾಣಲಿಲ್ಲ. ನೆಹರು ಕೈಗಾರಿಕಾ ಕ್ರಾಂತಿ ಒಂದರ್ಥದಲ್ಲಿ ವಿಫಲವಾದರೂ ಆರಂಭದ ಅದರ ಭರಾಟೆಗೆ ಬಡವರ ಬದುಕು ಮಾತ್ರ ಅತ್ಯಂತ ಪ್ರಪಾತಕ್ಕಿಳಿಯಿತು. ಇಂದಿರಾ ಗಾಂಧಿ ಮುಂದೆ ಗರೀಬಿ ಹಟಾವೋ ಆಂದೋಲನ ಶುರುವಿಟ್ಟುಕೊಂಡಿದ್ದು ಅಪ್ಪನ ತಪ್ಪುಗಳನ್ನು ತಿದ್ದಿಕೊಳ್ಳುವ ಮತ್ತು ಆ ಮೂಲಕ ನೆಹರೂ ಮೇಲೆ ಕೆಂಡವಾಗಿದ್ದ ಬಡವರ ಅನುಕಂಪವನ್ನು ಗಳಿಸಿಕೊಳ್ಳುವ ನಡೆಯಾಗಿಯೂ ಕಂಡಿತು.

೧೯೪೬ರಲ್ಲಿ ಬಂದ ನೀಚಾ ನಗರ್ ಎನ್ನುವ ಸಿನಿಮಾ, ಸಾಮಾಜಿಕ ಸತ್ಯದರ್ಶನದ ಯತ್ನ ಮಾಡಿತು. ಇಪ್ಟಾ ಸಂಗಾತಿ ಚೇತನ್ ಆನಂದ್ ಈ ಚಿತ್ರವನ್ನು ನಿರ್ದೇಶಿಸಿದ್ದರು. ರಚನೆ : ಖ್ವಾಜಾ ಅಹ್ಮದ್ ಅಬ್ಬಾಸ್ (ಕೆ. ಎ. ಅಬ್ಬಾಸ್), ಹಯಾತುಲ್ಲಾ ಅನ್ಸಾರಿ, (ಅಭಿನಯ : ಉಮಾ, ಆನಂದ್, ರಫೀಕ್ ಅಹ್ಮದ್, ಜೋಹ್ರಾ ಸೈಗಲ್) ಸೋಷಲ್ ರಿಯಲಿಸಂ ಹೇಳುವ ಯತ್ನಗಳು ಈ ಸಿನಿಮಾ ಮೂಲಕ ಆರಂಭಗೊಂಡಿತು. ಪ್ಯಾರಲಲ್ ಸಿನಿಮಾಗೆ ಇದು ಬಹುದೊಡ್ಡ ದಾರಿ ಮಾಡಿಕೊಟ್ಟಿತು. ಆ ನಂತರದಲ್ಲೂ ನಿರ್ಮಾಣಗೊಂಡ ಇಂಥ ಬಹುತೇಕ ಸಿನಿಮಾಗಳಿಗೆ ಕಥೆ ಕೊಟ್ಟವರು ಕೆ. ಎ. ಅಬ್ಬಾಸ್ ಅನ್ನುವುದು ಗಮನಾರ್ಹ. ಹಲವಾರು ನಿರ್ದೇಶಕರು ಇಂಥ ಸೋಷಲ್ ಸತ್ಯದರ್ಶನಕ್ಕೆ ಬೆಳ್ಳಿಪರದೆಯನ್ನು ಬಳಸಿಕೊಂಡ ಉದಾಹರಣೆಗಳು ೭೦ ಮತ್ತು ೮೦ರ ದಶಕಗಳಲ್ಲಿ ಕೂಡ ಸಾಕಷ್ಟಿವೆ.

ಕೆ. ಎ. ಅಬ್ಬಾಸ್ ಅವರಂಥವರು ಕಥೆ, ಚಿತ್ರಕಥೆಗಳನ್ನು ಬರೆಯುವುದಕ್ಕೆ ರೈತರ,



ಬಡವರ ಬವಣೆಗಳನ್ನೇ ವಸ್ತುವಾಗಿಟ್ಟುಕೊಂಡಿದ್ದು ಆಗಿನ ಸಿನಿಮಾ ಅದೆಷ್ಟು ಜೀವಪರ ಮತ್ತು ಸೃಜನಾತ್ಮಕವಾಗಿತ್ತು ಎನ್ನುವುದಕ್ಕೆ ಪ್ರಮುಖ ಸಾಕ್ಷಿಯಂತೆ ಕಾಣಿಸುತ್ತದೆ. ಉಪಖಂಡದ ಪ್ರಮುಖ ಲೇಖಕ ಸಾದತ್ ಹಸನ್ ಮಾಂಟೋ ಕಾದಂಬರಿ ಆಧಾರಿತ ಕಿಸಾನ್ ಕನ್ಯಾ ಚಿತ್ರ ರೈತರ ಜೀವನದ ಮೌಲ್ಯಗಳನ್ನು ಮತ್ತು ಭೂಮಾಲೀಕರ ದರ್ಪವನ್ನು ಹೇಳಿತ್ತು. ಆ ನಂತರದಲ್ಲಿ ದೋ ಬೀಘಾ ಜಮೀನ್, ಔರತ್, ಮದರ್ ಇಂಡಿಯಾ ಚಿತ್ರ ಬರುವಷ್ಟೊತ್ತಿಗೆ ರೈತರ ಸ್ಥಿತಿ ಇನ್ನೂ ಶೋಚನೀಯ ಗೊಂಡಿತ್ತು. ಮೆಹಬೂಬ್ ಖಾನ್ ಅವರ ಮದರ್ ಇಂಡಿಯಾ ಚಿತ್ರ ರೈತರು ವ್ಯವಸ್ಥೆಯನ್ನು ಎದುರಿಸುವುದಕ್ಕೆ ಮಾನಸಿಕ ಸ್ಥೈರ್ಯ ಮತ್ತು ಛಲ ಎಷ್ಟು ಮುಖ್ಯ ಎನ್ನುವುದನ್ನು ಸಾರಿತು. ಮುಖ್ಯವಾಗಿ ತೃತೀಯ ಜಗತ್ತಿನ ಮಹಿಳೆ ತುಂಬ ಜವಾಬ್ದಾರಿಯುತವಾಗಿ ನಡೆದುಕೊಂಡರೆ ಸಾಮಾಜಿಕ ವ್ಯವಸ್ಥೆಯನ್ನೇ ಬದಲಾಯಿಸಬಹುದು ಎನ್ನುವುದನ್ನು ಮದರ್ ಇಂಡಿಯಾ ಚಿತ್ರ ನರ್ಗಿಸ್ ಪಾತ್ರದ ಮೂಲಕ ಮನದಟ್ಟು ಮಾಡಿಕೊಟ್ಟಿತ್ತು. ನರ್ಗಿಸ್ ಆ ಚಿತ್ರದ ಮೂಲಕ ಇಂಡಿಯಾದ ಮಾದರಿ ಮಹಿಳೆಯಾಗಿ ಕಾಣಿಸಿದರು. ಅದನ್ನೇ ಇಂದಿರಾ ಗಾಂಧಿ ಅನುಸರಿಸಿದ ರೇನೋ? ಮದರ್ ಇಂಡಿಯಾದಲ್ಲಿ ನರ್ಗಿಸ್ ತನ್ನಿಬ್ಬರು ಮಕ್ಕಳಲ್ಲಿ ಒಬ್ಬ ಮಗನ ಹಿಂಸಾ ಮಾರ್ಗವನ್ನು ಧಿಕ್ಕರಿಸಿ ಸೌಮ್ಯ ಮಾರ್ಗವನ್ನು ಆಯ್ದುಕೊಂಡು ಹೊಸ ಹಿಂದೂಸ್ತಾನ್ ಕಟ್ಟುವ ಮಾರ್ಗವೊಂದನ್ನು ತೋರಿಸಿದರು. ಇಂದಿರಾ ಗಾಂಧಿಯ ರಾಜಕೀಯ ನಡೆಯಲ್ಲಿ ಈ ಚಿತ್ರದ ಪ್ರಭಾವವನ್ನು ಸೂಕ್ಷ್ಮವಾಗಿ ಗಮನಿಸಬಹುದು. ಆದರೆ ಅದೇ ಇಂದಿರಾ ಗಾಂಧಿ ಮುಂದೆ ಸರ್ವಾಧಿಕಾರದ ಧೋರಣೆಯನ್ನು ಅನುಸರಿಸುವ ಮೂಲಕ ಇಂಡಿಯಾ ರಾಜಕಾರಣಕ್ಕೆ ದರ್ಪದ ಮತ್ತು ಏಕಸ್ವಾಮ್ಯದ ಮನೋ ಧರ್ಮವನ್ನು ತುಂಬಿಬಿಟ್ಟರು. ಸಿನಿಮಾರಂಗ ಇಂದಿರಾ ಗಾಂಧಿಯ ನಡೆಯನ್ನು ವಿಮರ್ಶಿಸುವ ಗೋಜಿಗೆ ಹೋಗಲಿಲ್ಲ. ಅವರ ವೈಯಕ್ತಿಕ ವಿಷಯಗಳನ್ನಿಟ್ಟುಕೊಂಡು 'ಆಂಧಿ'ಯಂಥ ಸಿನಿಮಾ ಮಾಡಿತಷ್ಟೆ.

ಶತರಂಜ್ ಕೆ ಖಿಲಾಡಿ, ಎಂ. ಎಸ್. ಸತ್ಯು ಅವರ 'ಗರಂ ಹವಾ' ರೀತಿಯ ಚಿತ್ರಗಳು ಸಮಾಜೋ-ರಾಜಕೀಯ ಚಿಂತನೆಗಳನ್ನು ಬೇರೆಯದೇ ನೆಲೆಯಲ್ಲಿ ಕಟ್ಟಿಕೊಟ್ಟವು. ೯೦ರ ದಶಕದಲ್ಲಿ ಬಂದ ಮಣಿರತ್ನಂ ನಿರ್ದೇಶನದ ಬಾಂಬೆ ಸಿನಿಮಾ ಕೂಡ ಕೋಮುವಾದ ಮತ್ತು ಸಾಮರಸ್ಯದಂಥ ಸೂಕ್ಷ್ಮ ವಿಷಯಗಳನ್ನು ಸಮಾಜೋ-ರಾಜಕೀಯ ನೆಲೆಯಲ್ಲಿ ನೋಡಿತು. ಇಂಡಿಯಾದ ಮನೋಧರ್ಮ ಯಾವುದೋ ಒಂದು ಧರ್ಮ ಮತ್ತು ಜಾತಿಯ ಮೇಲೆ ನೆಲೆ ಕಂಡುಕೊಳ್ಳಲು ಸಾಧ್ಯವಿಲ್ಲ. ಅದಕ್ಕೆ ಸಾಮರಸ್ಯವೇ ಸೂಕ್ತವಾಗುವಂಥದು ಎನ್ನುವ ಸಂದೇಶವನ್ನು ಬಾಂಬೆ ಮನದಟ್ಟು ಮಾಡಿಕೊಡಲು ಯತ್ನಿಸಿತು. ಬಾಬ್ರಿ ಮಸೀದಿ ಧ್ವಂಸದಂಥ ದಾಳಿಯಿಂದ ಇಂಡಿಯಾದ ಸೆಕ್ಯುಲರಿಸಂ ಮನೋಧರ್ಮವನ್ನು ನಾಶಗೊಳಿಸಿ ಮತೀಯ ಮಾರ್ಗವೊಂದನ್ನು ರೂಪಿಸುವ ಯತ್ನ ನಡೆದ ಸಂದರ್ಭ ಅದಾಗಿತ್ತು. ಭಯೋತ್ಪಾದನೆ, ಉಗ್ರವಾದದ ಮೂಲಕ ಹಿಂಸೆಗಳು ದೊಡ್ಡ ಸವಾಲಾಗಿ ನಿಲ್ಲಲಾರಂಭಿಸಿದ ಸಂದರ್ಭವೂ ಅದಾಗಿತ್ತು. ಮಣಿರತ್ನಂ ಈ ವಿಷಯಗಳ ಮೇಲೆ ದಿಟ್ಟವಾದ ನಿಲುವುಗಳನ್ನು ರೋಜಾ, ದಿಲ್ ಸೇ ಮತ್ತಿತರ ಚಿತ್ರಗಳ ಮೂಲಕವೂ ಪ್ರಕಟಿಸುವ ಧೈರ್ಯ ಮಾಡಿದರು. ತುಂಬ ಕ್ರಾಂತಿಕಾರಕ ಯತ್ನವಲ್ಲವಾದರೂ ಅತ್ಯಂತ ಡಿಪ್ಲೊಮ್ಯಾಟಿಕ್ ಆಗಿ ಆ ಸಂದರ್ಭಗಳನ್ನು ಸಿನಿಮಾದ ಮೂಲಕ ಎದುರಿಸಿದರು. ಇಂಥ ಕನಿಷ್ಠ ಜವಾಬ್ದಾರಿಯಾದರೂ ೯೦ರ ದಶಕದವರೆಗಿನ ಸಿನಿಮಾ ಗಳಲ್ಲಿ ಉಳಿದಿತ್ತು. ಈಗ ?

ಪ್ರಸ್ತುತ ಇಂಡಿಯಾದ ಮನರಂಜನಾ ಉದ್ಯಮದಲ್ಲಿ ರಂಜನೆಯ ಬೆನ್ನಲ್ಲೇ ಕೊಡವಿಹಾಕುವ ಉದ್ದೇಶಗಳೂ ಮಿಸುಕಾಡುತ್ತಿರುತ್ತವೆ. ಕಿರುತೆರೆಯ ಸೀರಿಯಲ್‌ಗಳನ್ನು ಒಮ್ಮೆ ಗಮನಿಸಿ. ಇವುಗಳ ಮೂಲಕ ಗ್ರಾಹಕ ಮನೋಧರ್ಮವನ್ನು ಬೆಳೆಸುವ ಹುನ್ನಾರು ವ್ಯವಸ್ಥಿತವಾಗೇ ನಡೆಯುತ್ತಿರುವುದು ಢಾಳಾಗೇ ಕಾಣಸಿಗುತ್ತದೆ. ಡ್ರೆಸ್, ಕಾಸ್ಮೆಟಿಕ್ಸ್, ಗ್ಯಾಜೆಟ್ಸ್, ಆಭರಣಗಳು ಮತ್ತು ಬಳಕೆಯ ವಸ್ತುಗಳ ವ್ಯಾಮೋಹವನ್ನು ಬೆಳೆಸುತ್ತ ಉದ್ಯಮಗಳಿಗೆ ಪೂರಕವಾಗಿ ಜನರ ಮನಃಸ್ಥಿತಿಯನ್ನು ರೂಪಿಸುವ ಕೆಲಸದಲ್ಲಿ ಇವು ತೊಡಗಿಕೊಂಡಿವೆ. ಆ ಮೂಲಕ ಸಹಜ, ಸರಳ ಕೌಟುಂಬಿಕ ಜೀವನದಲ್ಲಿ ಅಂತಸ್ತು ಮತ್ತು ಮಟಿರಿಯಲಿಸ್ಟಿಕ್ ವ್ಯಾಮೋಹಗಳನ್ನು ಪೋಷಿಸ ಹೊರಟಂತೆ ಇವು ಕಾಣಿಸುತ್ತವೆ.

೨೪ ತಾಸುಗಳ ಚಾನೆಲ್‌ಗಳಂತೂ ನಮ್ಮಲ್ಲಿ ಮಟಿರಿಯಲಿಸ್ಟಿಕ್ ನೆಲೆಯಲ್ಲಿ ರಂಜನೆಯ ಹಸಿವನ್ನು

ಬಿತ್ತುತ್ತಿವೆ. ಹಣ ಸಂಪಾದನೆ ಮತ್ತು ಅದರಿಂದ ಹೆಚ್ಚು ವಸ್ತುಗಳನ್ನು ಕೊಂಡುಕೊಳ್ಳುವುದು ನಮ್ಮ ಮನೋಬಲ ವೃದ್ಧಿಯ ಸಂಕೇತ ಎನ್ನುವಂಥ ಹುಸಿ ಮನೋಧರ್ಮ ಗಳನ್ನು ಡೈಲಿ ಸೋಪ್‌ಗಳ ಮೂಲಕ ಬಿತ್ತಲಾಗುತ್ತಿದೆ. ಸುದ್ದಿ ಚಾನೆಲ್‌ಗಳು ಕೂಡ ದಿನದ ವಿದ್ಯಮಾನಗಳನ್ನು ಮನರಂಜನೆಯನ್ನಾಗಿ ಪರಿವರ್ತಿಸಿಕೊಳ್ಳುತ್ತಿರುವ ಅಪಾಯ ಗಳನ್ನು ಕೂಡ ನಾವೀಗ ಕಾಣುತ್ತಿದ್ದೇವೆ.

ನಾವು ಹೆಚ್ಚು ಹೆಚ್ಚು ರಂಜನೆಯನ್ನು ಬಯಸುತ್ತಿದ್ದೇವೆ ಎಂದಾದರೆ ನಾವು ಅಷ್ಟು ದಣಿದಿದ್ದೇವೆ ಮತ್ತು ಆಲಸಿ ಯಾಗಿದ್ದೇವೆ ಎಂದರ್ಥ. ದುಡಿಯುವ ಜೀವಗಳು ದಣಿವಾರಿಸಿಕೊಳ್ಳಲು ರಂಜನೆ ಬಯಸುವುದಾದರೆ ಅದೊಂದು ಆರೋಗ್ಯಕರ ರಿಕ್ರಿಯೇಷನ್. ಆಲಸಿಗಳು ರಂಜನೆ ಬಯಸುತ್ತಿದ್ದಾರೆ ಎಂದಾದರೆ ಅದೊಂದು ಮಾದಕ ವ್ಯಸನದಂತೆ.

ನಮ್ಮ ಇಂಡಿಯಾ ದೇಶದಲ್ಲಿ ದುಡಿಯುವ ವರ್ಗಕ್ಕಿಂತ ಶ್ರೀಮಂತ ಹಾಗೂ ಮೇಲ್ಮಧ್ಯಮ ವರ್ಗ ದಲ್ಲಿನ ಆಲಸಿಗಳ ಸಂಖ್ಯೆ ಹೆಚ್ಚುತ್ತಿದೆ. ಇದು ಯುವ ಜನಾಂಗದಲ್ಲೇ ಹೆಚ್ಚು. ಈ ಬಹುಮುಖ್ಯವಾದ ಬೆಳವಣಿಗೆಯನ್ನು ಗಮನಿಸಲೇಬೇಕು. ಶ್ರೀಮಂತ, ಮೇಲ್ಮಧ್ಯಮವರ್ಗವೊಂದು ಇಲ್ಲಿ ನಿಧಾನಕ್ಕೆ ತನ್ನ ಸಂಖ್ಯೆ ವೃದ್ಧಿಸಿಕೊಳ್ಳುತ್ತಿದೆ. ಈ ವರ್ಗಕ್ಕೆ ಮೂಲ ಆದಾಯಕ್ಕಿಂತ ಹೆಚ್ಚಿನ ರಕಂ ಇತರೆ ಆದಾಯಗಳಿಂದ ದಕ್ಕುವಂತಾಗು ತ್ತಿರುವುದು ನಮ್ಮ ವ್ಯವಸ್ಥೆಯ ಬಹು ಮುಖ್ಯವಾದ ಸ್ಥಿತಿ. ಭ್ರಷ್ಟಾಚಾರ ಬೆಳೆಯುತ್ತಿದೆ ಎಂದು ಆತಂಕಪಡುವು ದಾದರೆ ಈ ವರ್ಗದ ಸಂಖ್ಯೆ ಹೆಚ್ಚುತ್ತಿ ರುವುದರ ಮೇಲೂ ಒಂದು ನಿಗಾ ಇಡಬೇಕಾಗುತ್ತದೆ. ಕನಿಷ್ಠ ಇಂಥ ಹೆಚ್ಚುವರಿ ಹಣದ ಬಳಕೆ ಎಲ್ಲಿ, ಹೇಗಾಗುತ್ತಿದೆ ಎನ್ನುವುದು ಸಮಾಜೋ - ವೈಜ್ಞಾನಿಕ ಜವಾಬ್ದಾರಿಯ ಪ್ರಶ್ನೆ.

ನಮ್ಮ ಇಂಡಿಯಾ ಸಿನಿಮಾ ಅದರಲ್ಲೂ ಬಾಲಿವುಡ್ ಉದ್ಯಮದ ಟಾರ್ಗೆಟ್ ಆಡಿಯನ್ಸ್ ಇರೋದೇ ಇಲ್ಲಿ. ಈ ನೆಲೆಯಿಂದ ಬಂದ ಪ್ರೇಕ್ಷಕ ವರ್ಗಕ್ಕೆ ಅನಿರೀಕ್ಷಿತ ಖುಷಿ, ತಲ್ಲಣಗಳು ಬೇಕು. ಥ್ರಿಲ್ ಎನಿಸುವಂಥ ಪ್ರೀತಿ, ಪ್ರೇಮ, ಸೆಕ್ಸ್, ಹಿಂಸೆ, ಕೊಲೆ, ಸಂಚುಗಳು... ಬೇಕು. ಇದನ್ನು ಕೇಟರ್ ಮಾಡುವ ಜವಾಬ್ದಾರಿಯನ್ನು ಹೊತ್ತುಕೊಂಡಂತೆ ಸಿನಿಮಾ ಉದ್ಯಮ ಇಂದು ವರ್ತಿಸುತ್ತಿದೆ. ರಾಜ್, ಜಿಸ್ಮ್, ಸಿನ್, ಮರ್ಡರ್... ಮಾದರಿಯ ಚಿತ್ರಗಳು ಸಾಲಾಗಿ ಬರುತ್ತಿರುವುದು ಈ ನೆಲೆಯಲ್ಲೇ. ಹಾಕಿದ ಬಂಡವಾಳ ವಾಪಸ್ ಬರುವುದಷ್ಟೇ ಮುಖ್ಯವಲ್ಲ, ಅದಕ್ಕೆ ದುಪ್ಪಟ್ಟು ಹಣ ಬಾಚದಿದ್ದರೆ ಸಿನಿಮಾ ಮಾಡಿ ಏನು ಪ್ರಯೋಜನ ಎನ್ನುವ ಆರ್ಥಿಕ ಲೆಕ್ಕಾಚಾರಗಳು ಮನರಂಜನೆಯನ್ನು ಹೀಗೆ ಸಂಪೂರ್ಣ ಮಾರುಕಟ್ಟೆಯಾಗಿ ಪರಿವರ್ತಿಸಿಕೊಂಡಿವೆ. ಅದಕ್ಕೆ ಪೂರಕವಾಗೇ ಇತರ ಮಾಧ್ಯಮಗಳು, ಸಿನಿ ವಿಶ್ಲೇಷಣೆಗಳು ವರ್ತಿಸತೊಡಗಿವೆ.

ಶ್ರೀಮಂತ ಮತ್ತು ಮೇಲ್ಮಧ್ಯಮ ವರ್ಗದ ಸಂಖ್ಯೆ ವೃದ್ಧಿಯಾಗುತ್ತಿರುವ ಹಿನ್ನೆಲೆಯಲ್ಲಿ ಮಲ್ಟಿಪ್ಲೆಕ್ಸ್‌ಗಳು ಹೆಚ್ಚು ತಲೆ ಎತ್ತುತ್ತಿರುವುದು ಏನನ್ನು ಸೂಚಿಸುತ್ತದೆ? ನಮ್ಮ ಸಾಮಾನ್ಯ ಥಿಯೇಟರ್‌ಗಳೆಲ್ಲ ಏಕೆ ಮುಚ್ಚುತ್ತಿವೆ ಎನ್ನುವುದನ್ನು ಗುರುತಿಸಲು ಹೆಚ್ಚು ಕಷ್ಟಪಡಬೇಕಾದ್ದೇ ಇಲ್ಲ. ಐನಾಕ್ಸ್, ಪಿವಿಆರ್ ಇಂಟಿಮೇಟ್ ಥಿಯೇಟರ್



ಗಳೆಲ್ಲ ಭರ್ಜರಿ ವ್ಯಾಪಾರ ಮಾಡುತ್ತಿರುವುದನ್ನು ಗಮನಿಸಿದರೆ ಇದೆಲ್ಲ ಸ್ಪಷ್ಟವಾಗುತ್ತದೆ. ದುಬಾರಿ ಟಿಕೆಟ್ ಬೆಲೆ, ಅದಕ್ಕೆ ಪೂರಕವಾಗಿ ಸಿನಿಮಾ ವೀಕ್ಷಣೆ ಎಂದರೆ ಇತರ ಮೋಜಿನ ಸಮೇತ ಒಂದು ಸಣ್ಣ ಪಿಕ್ನಿಕ್ ಎನಿಸುವ ಹಾಗೆ ಪಾಪಕಾರ್ನ್, ಬರ್ಗರ್, ಪೆಪ್ಸಿ ಕೂಡ ಜತೆಯಲ್ಲಿರಬೇಕು. ಇದೊಂದು ತರಹದ ಲೈಫ್ ಸ್ಟೈಲ್ ಆಗಿ ಬೆಳೆದು ನಿಂತಿದೆ. ಸಿನಿಮಾ ನೋಡುವುದು ಎಂದರೆ ಕೇವಲ ಟಿಕೆಟ್‌ಗೆ ಹಣ ಹೊಂದಿಸಿಕೊಂಡರೆ ಸಾಲದು. ಅದರ ಜತೆಗೆ ಪಾಪಕಾರ್ನ್, ಪೆಪ್ಸಿಗೂ ದುಡ್ಡು ಹೊಂದಿಸಿಕೊಳ್ಳಬೇಕು ಎಂದಾಗಿದೆ. ಇವೆಲ್ಲ ಹೆಚ್ಚುವರಿ ಖರ್ಚನ್ನು ನಿಭಾಯಿಸುವ ತಾಕತ್ತು ದೇಶದ ಬಹುಪಾಲು ಜನರಿಗೆ ಇಲ್ಲ. ಹೀಗಾಗಿ ಅವರು ಸಿನಿಮಾದಿಂದಲೇ ದೂರ ಸರಿಯಬೇಕಾದ ಸ್ಥಿತಿ ಇದೆ. ಹೀಗಾಗಿ ಸಿನಿಮಾ, ಮಧ್ಯಮ, ಮೇಲ್ಮಧ್ಯಮ, ಶ್ರೀಮಂತ ವರ್ಗದ ಷೋಕಿಗಳನ್ನು ತಣಿಸುವ ಮಾಧ್ಯಮವಾಗಿ ಮಾರ್ಪಟ್ಟಿದೆ.

ಸಿನಿಮಾ ನೋಡುವ ವರ್ಗ ಯಾವುದು ಎನ್ನುವುದು ನಿರ್ಮಾಪಕರಿಗೆ ಮುಖ್ಯವಾಗುವುದು ಸಹಜವೇ. ಸಿನಿಮಾ ನಿರ್ಮಾಣವನ್ನೇ ಒಂದು ಉದ್ಯಮವಾಗಿ ತೆಗೆದು ಕೊಂಡವರು ಬ್ಯಾನರ್ ರೂಪಿಸಿಕೊಂಡು ತಮ್ಮದೇ ಪಡೆ, ಕೆಲಸಗಾರರನ್ನು ಇಟ್ಟುಕೊಂಡು ಸಿನಿಮಾ ರೂಪಿಸ ತೊಡಗಿದರು. ಇಲ್ಲಿ ಕಾರ್ಮಿಕರ ಹಿತಾಸಕ್ತಿಯ ಪ್ರಶ್ನೆಯೂ ಹುಟ್ಟಿಕೊಂಡಿತೆನ್ನಿ. ಅವರನ್ನೆಲ್ಲ ಸಲಹುವುದು ಆರ್ಥಿಕ ಸ್ಥಿತಿಯಿಂದಲೇ ಸಾಧ್ಯ ಎನ್ನುವುದು ವಾಸ್ತವ. ಒಪ್ಪೋಣ. ಆದರೆ ಅದರ ಜತೆಗೊಂದು ಮುಖ್ಯವಾಗಿ ಸಾಮಾಜಿಕ ಜವಾಬ್ದಾರಿಯೂ ಬೇಕಲ್ಲ...

ನಮ್ಮ ಸಿನಿಮಾದ ಮತ್ತೊಂದು ಸಮಸ್ಯೆ ಎಂದರೆ ಸ್ಟಾರ್‌ಗಿರಿ. ಪ್ರೇಕ್ಷಕರ ಆಸಕ್ತಿಗೆ ಲೇಬಲ್ ಅಂಟಿಸಿ ಅದರಲ್ಲೇ ಅವರನ್ನು ಭಾವುಕರನ್ನಾಗಿಸುವ ಮೂಲಕ ಸಿನಿ ಗ್ರಾಹಕರನ್ನಾಗಿಸುವ ವ್ಯವಸ್ಥಿತ ಲಾಬಿ. ಹೆಚ್ಚಾಗಿ ಹೀರೋಯಿಸಂಅನ್ನೇ ನೆಚ್ಚಿಕೊಂಡ ಇಂಡಿಯಾ ಸಿನಿಮಾ, ಪ್ರಮುಖ ತಾರೆಯರ ಸಿಲ್ವರ್ ಜ್ಯೂಬಿಲಿ, ಗೋಲ್ಡನ್ ಜ್ಯೂಬಿಲಿ ರಗಳೆಗಳಲ್ಲಿ ಮುಳುಗಿಹೋಗಿದ್ದ ಕಾಲವೂ ಇತ್ತು. ರಾಷ್ಟ್ರೀಯ ಮಟ್ಟದಲ್ಲಿ ದಿಲೀಪ್ ಕುಮಾರ್, ಅಮಿತಾಬ್, ಧರ್ಮೇಂದ್ರ... ಪ್ರಾದೇಶಿಕ ಮಟ್ಟದಲ್ಲಿ ಎನ್. ಟಿ. ರಾಮರಾವ್, ಅಕ್ಕಿನೇನಿ ನಾಗೇಶ್ವರರಾವ್, ಚಿರಂಜೀವಿ, ಮಮ್ಮೂಟಿ, ರಜನೀಕಾಂತ್, ಪ್ರೇಮ್ ನಜೀರ್ ಮತ್ತು ಕನ್ನಡದಲ್ಲಿ ಡಾ|| ರಾಜಕುಮಾರ್... ಹೀಗೆ ಸ್ಟಾರ್‌ಗಿರಿಯ ಜಮಾನಾವೂ ಒಂದಿತ್ತು. ಸಮಕಾಲೀನ ಸಂದರ್ಭದಲ್ಲೂ ಅದು ಸಲ್ಮಾನ್ ಖಾನ್, ಅಮೀರ್ ಖಾನ್, ಶಾರೂಕ್ ಖಾನ್, ಅಕ್ಷಯ ಕುಮಾರ್, ರಜನೀಕಾಂತ್, ಮಮ್ಮೂಟಿ, ಹೃತಿಕ್, ಶಿವರಾಜ ಕುಮಾರ್, ಪುನೀತ್, ವಿಜಯ್ ಹೀಗೆ ಸ್ಟಾರ್‌ಗಿರಿಯ ಇಮೇಜ್ ಕೆಲಸ ಮಾಡುತ್ತಿದೆ ಯಾದರೂ ಅದರ ಹಾವಳಿ ಮುಂಚಿನಷ್ಟು ಇಲ್ಲ. ಇದು ಪ್ರೇಕ್ಷಕರಲ್ಲಿ ಆಗುತ್ತಿರುವ ಬಹುಮುಖ್ಯವಾದ ಬದಲಾವಣೆ.

ಈ ಸ್ಟಾರ್‌ಗಿರಿಗಳನ್ನು ಹೊರತುಪಡಿಸಿದ ವಿಷಯಾ ಧಾರಿತ ಹಾಗೂ ಆಯಾ ಕಾಲ ಮತ್ತು ಪ್ರಾದೇಶಿಕ ಮೌಲ್ಯಗಳು, ಸಮಸ್ಯೆಗಳನ್ನು ಎತ್ತಿಕೊಂಡ ಸಿನಿಮಾಗಳು ಪ್ರೇಕ್ಷಕರನ್ನು ಸೆಳೆದವು. ಅದು ಅಮೀರ್‌ಖಾನ್ ನಿರ್ಮಾಣದ ಲಗಾನ್, ಶಾರೂಕ್‌ನ ಚಕ್ ದೇ ಇಂಡಿಯಾ, ನಸಿರುದ್ದೀನ್ ಷಾನ ವೆಡ್ನಸ್ಡೇ, ಖುದಾ ಕೆ ಲಿಯೇ, ಡ್ಯಾನಿ ಬಾಯ್ಲೆ ನಿರ್ದೇಶನದ ಸ್ಲಂ ಡಾಗ್ ಮಿಲಿಯನೇರ್ ಮುಂತಾದ ಚಿತ್ರಗಳು ಸ್ಟಾರ್‌ಗಿರಿಯನ್ನು ಮೀರಿ ವಿಷಯವನ್ನು ಮುಂಚೂಣಿಗೆ ತಂದು ಅದನ್ನು ವಿಶ್ಲೇಷಿಸುವ ಯತ್ನ ಮಾಡಿದವು.

ಈಗ ಬಂದಿರುವ ದಭಾಂಗ್-೧ ಮತ್ತು ದಭಾಂಗ್-೨ (ಅರ್ಬಾಜ್ ಖಾನ್ ನಿರ್ದೇಶನ, ಸಲ್ಮಾನ್ ಖಾನ್ ನಟನೆಯ ಜನಪ್ರಿಯ ಚಿತ್ರ) ಇಡೀ ವ್ಯವಸ್ಥೆಯಲ್ಲಿನ ಟೊಳ್ಳುತನ ಮತ್ತು ಢೋಂಗಿತನವನ್ನು ಲೇವಡಿ ಮಾಡುತ್ತಲೇ ಸತ್ಯವನ್ನು ಬಟಾಬಯಲು ಮಾಡಿಬಿಡುತ್ತದೆ. ಪೊಲೀಸ್ ಎಂದರೆ ಹಣ ಕೊಳ್ಳೆ ಹೊಡೆಯುವ ಮತ್ತು ದೌರ್ಜನ್ಯಕ್ಕೆ ಸಾಥ್ ಕೊಡುವ ದುಷ್ಟಶಕ್ತಿಗಳ ಬಲಗೈ ಭಂಟ ಎನ್ನುವ ಧೋರಣೆಯನ್ನು ನಮ್ಮ ಸಿನಿಮಾ ಈತನಕ ಪೋಷಿಸುತ್ತ ಬಂದಿದೆ. ಪೊಲೀಸ್ ಎನ್ನುವ ವ್ಯವಸ್ಥೆಯ ಬಗ್ಗೆ ನಮಗೆ ಸ್ಪಷ್ಟವಾದ ಕಲ್ಪನೆಗಳೇ ಇಲ್ಲ. ಇನ್‌ಸ್ಪೆಕ್ಟರ್, ಪೇದೆ, ಎಸ್ಪಿ, ಐಜಿ ಹುದ್ದೆಗಳು, ಖಾಕಿ ಸಮವಸ್ತ್ರ, ಲಾಕಪ್ ಇವಷ್ಟೇ ನಮಗೆ ಗೊತ್ತಿರುವ ಅದರ ಮೇಲ್ನೋಟದ ಸಾಂಕೇತಿಕ ಪ್ರಜ್ಞೆ ಅಷ್ಟೇ. ಅದರ ನಿಜವಾದ ಐಡೆಂಟಿಟಿ ನಮಗೆ ಗೊತ್ತೇ ಇಲ್ಲ. ರಾಜ ಮಹಾರಾಜರ ಆಡಳಿತ ಕೊನೆಗೊಂಡು ನಮ್ಮದೇ ಒಂದು ದೇಶ, ಅದಕ್ಕೆ ಬೇಕಾದ ಆಡಳಿತ ವ್ಯವಸ್ಥೆ ಯನ್ನು ರೂಪಿಸಿಕೊಂಡ ಸರ್ಕಾರ ಎನ್ನುವ ಪರಿಕಲ್ಪನೆ ನಮಗಿನ್ನೂ ಸ್ಪಷ್ಟಗೊಳ್ಳದ ಸ್ಥಿತಿ ಇದೆ. ಹೀಗಾಗಿ ಪೊಲೀಸ್ ಎಂದಾಕ್ಷಣ ನಮಗೆ ದೌರ್ಜನ್ಯದ್ದೇ ನೆನಪಾಗುವಂತೆ ಮಾಡಿಟ್ಟದ್ದು ನಿಜವಾದ ಭಯೋತ್ಪಾದನೆ. ಸಾರ್ವಜನಿಕರ ಮಾನ, ಆಸ್ತಿ, ಜೀವರಕ್ಷಣೆಗೆ ಕಾನೂನುಬದ್ಧವಾಗಿ ರೂಪಿಸಿ ಕೊಂಡ ವ್ಯವಸ್ಥೆ ಪೊಲೀಸ್ ಎನ್ನುವುದು ನಮಗಿನ್ನೂ ಅರಿವಿಗೆ ಬಂದಿಲ್ಲ. ದಭಾಂಗ್ ಚಿತ್ರದಲ್ಲಿ ಸಾರ್ವಜನಿಕರಲ್ಲಿ ಪೊಲೀಸ್ ಬಗ್ಗೆ ಇರುವ ಭಯವನ್ನು ನಿವಾರಣೆ ಮಾಡಿ ಅದನ್ನು ಜನ ಸಂಪರ್ಕದ ನೆಲೆಯಲ್ಲಿ ನೋಡುವ ಯತ್ನ ಮಾಡಿದೆ. ಇದು ಈಚೆಗಿನ ಸಿನಿಮಾದಿಂದ ಸಾಧ್ಯವಾಗಬಹುದಾದ ಒಂದು ಆರೋಗ್ಯಕರ ಬೆಳವಣಿಗೆ ಎನ್ನಬಹುದು. ರಂಜನೆಯ ಜತೆಗೆ ಇಂಥದೊಂದು ಸಹಜ ಪ್ರಜ್ಞೆ ಮೂಡಿಸುವ ಯತ್ನಗಳಾದರೂ ನಡೆಯಬೇಕಾದ್ದು ಕೂಡ ಅವಶ್ಯಕ.

**ಸಾಹಿರ್ ಡಿ. ಆರ್.**
ನಂ. ೧೪, ಜಿ. ಡಿ. ಪಾರ್ಕ್ ಬಡಾವಣೆ, ಬೆಂಗಳೂರು - ೫೬೦ ೦೦೩.

# ಕನ್ನಡತದ ಅಸ್ಮಿತೆಗೆ ಕನ್ನಡಿ ಕೋಚೆ

ಬಿಸಿಲನಾಡು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲೂಕು, ಕಾನಾಮಡುಗುವಿನಲ್ಲಿ ೨೭-೨-೧೯೨೨ರಲ್ಲಿ ಜನಿಸಿದವರು ಕೋ. ಚೆನ್ನಬಸಪ್ಪ. ಕವಿ, ಕತೆಗಾರ, ಕಾದಂಬರಿಕಾರ, ವಾಗ್ಮಿ, ವಿಮರ್ಶಕ, ಪ್ರಬಂಧಕಾರ, ದೇಶಭಕ್ತ, ಕರ್ನಾಟಕ ವತ್ಸಲ, ಸ್ವಾತಂತ್ರ್ಯಯೋಧ, ಏಕೀಕರಣವಾದಿ, ಹೋರಾಟಗಾರ, ನ್ಯಾಯವಾದಿ, ನ್ಯಾಯಾಧೀಶ, ತತ್ವಜಿಜ್ಞಾಸು, ಪತ್ರಿಕೋದ್ಯಮಿ, ಮಾನವತಾವಾದಿ ಇಷ್ಟೆಲ್ಲವುಗಳೂ ಸಂಗಮಿಸಿದ ವ್ಯಕ್ತಿತ್ವ ಕೋಚೆ ಅವರದು. ಕೋಚೆ ಚಾರಿತ್ರಿಕ ಮಹತ್ವದ ವ್ಯಕ್ತಿಗಳಲ್ಲೊಬ್ಬರು. ಭಾರತದ ರಾಜಕೀಯ ಇತಿಹಾಸದಲ್ಲಿ ೧೯೩೯ರಿಂದ ೧೯೪೭ರವರೆಗೆ ಮಹತ್ವದ ಕಾಲಾವಧಿ. ಆಗ ಅನಂತಪುರ ಮತ್ತು ಬೆಳಗಾವಿಯ ರಾಜಾಲಖಮ ಗೌಡ ಕಾನೂನು ಮಹಾವಿದ್ಯಾಲಯದಲ್ಲಿ ಕೋಚೆ ವಿದ್ಯಾರ್ಥಿ. ದ್ವಿತೀಯ ಜಾಗತಿಕ ಯುದ್ಧದ ಆರಂಭದಿಂದ ಅಂತ್ಯದವರೆಗೆ ಚಲೇಜಾವ್ ಚಳವಳಿಯಲ್ಲಿ ಧುಮುಕಿದರು. ಕಾವ್ಯಕ್ರಾಂತಿಯ ಮುಖಾಂತರ ಸ್ವಾತಂತ್ರ್ಯ ಹೋರಾಟದಲ್ಲಿ ಅವರು ಮಹತ್ತರ ಪಾತ್ರವಹಿಸಿದರು. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದವರಿಗೆ ಮದ್ರಾಸ್ ಸರ್ಕಾರ ಭೂಮಿಯನ್ನು ಕೊಟ್ಟಾಗ ಕೋಚೆ ಅದನ್ನು ನಿರಾಕರಿಸಿದರು. ಭಾರತ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಮಾಸಾಶನ ನೀಡಲು ಮುಂದಾದಾಗ ಅದನ್ನೂ ಪಡೆಯಲಿಲ್ಲ. ಅವರು ಚಳವಳಿಯಲ್ಲಿ ಪಾಲ್ಗೊಂಡಿದ್ದು ಪ್ರತಿಫಲಾಪೇಕ್ಷೆಗಾಗಿ ಅಲ್ಲ, ತ್ಯಾಗಕ್ಕಾಗಿ ಎಂಬುದು ಅವರ ನಿಲವು.

ಅವರು ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಭಾಗವಹಿಸಿದ್ದೂ ವಿದ್ಯಾರ್ಥಿದೆಸೆಯಲ್ಲಿಯೆ. ಬೆಳಗಾವಿಯಲ್ಲಿ ಕಾನೂನು ವ್ಯಾಸಂಗದ ವಿದ್ಯಾರ್ಥಿಯಾಗಿದ್ದಾಗ ಕರ್ನಾಟಕ ಏಕೀಕರಣ ಮಹಾಸಮಿತಿಯ ಕಾರ್ಯಕಾರಿ ಮಂಡಳಿಯ ಸದಸ್ಯರಾಗಿದ್ದರು. ಮದ್ರಾಸ್-ಕರ್ನಾಟಕ, ಬಳ್ಳಾರಿ, ಅನಂತಪುರ ಜಿಲ್ಲೆಗಳ ಕನ್ನಡ ಮತ್ತು ಕನ್ನಡಿಗರ ಕುರಿತು ಮಾಹಿತಿ ಸಂಗ್ರಹಿಸುವುದು, ಮನವಿಗಳನ್ನು ಸಿದ್ಧಪಡಿಸುವುದರಲ್ಲಿ ಸಕ್ರಿಯರಾಗಿದ್ದರು. ಅನಂತಪುರ, ಕರ್ನೂಲು ಜಿಲ್ಲೆಗಳಲ್ಲೂ ಕೆಲವು ಸಂಸ್ಥೆಗಳನ್ನು ಹುಟ್ಟುಹಾಕಿದರು. ೧೯೫೨ರಲ್ಲಿ ಆಂಧ್ರಪ್ರಾಂತ್ಯ ರಚನೆಗಾಗಿ ವಾಂಚೂ ಸಮಿತಿ ನೇಮಿಸಲಾಯಿತು. ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕದಲ್ಲಿಯೇ ಉಳಿಸಿಕೊಳ್ಳುವಲ್ಲಿ ಕೋಚೆ ಅದ್ವಿತೀಯ ಪಾತ್ರವಹಿಸಿದರು. ೧೯೪೮ರಲ್ಲಿ ದಾವಣಗೆರೆಯಲ್ಲಿ ಜರುಗಿದ ಸರ್ವಪಕ್ಷ ಸಮ್ಮೇಳನವನ್ನು ಶರತ್‌ಚಂದ್ರ ಬೋಸರು ಉದ್ಘಾಟಿಸಿದರು. ಆಗ ಪ್ರಮುಖ ಗೊತ್ತುವಳಿಯನ್ನು ಸೂಚಿಸಿದವರು ಕೋಚೆ. ಕೇಂದ್ರ ಸರ್ಕಾರವು ೧೯೫೩ರಲ್ಲಿ ಭಾಷಾವಾರು ಪ್ರಾಂತ್ಯ ರಚನಾ ಆಯೋಗ (ಫಜಲ್ ಆಲಿ ಆಯೋಗ)ವನ್ನು ರಚಿಸಿತು. ಆಗಲೂ ಕರ್ನಾಟಕ ಏಕೀಕರಣ ಮಹಾಸಮಿತಿ ಹಾಗೂ ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು (ಅಕರಾನಿ ಪರಿಷತ್ತು)ಗಳ ಮೂಲಕ ಮನವಿಗಳನ್ನು ಸಿದ್ಧಪಡಿಸುವುದರಲ್ಲಿ ಕೋಚೆ ಪ್ರಮುಖ ಪಾತ್ರವಹಿಸಿದರು. ತುಂಗಾಭದ್ರ ಅಣೆಕಟ್ಟು ಆಂಧ್ರಪ್ರದೇಶಕ್ಕೆ ಸೇರಬೇಕೆಂದು ಫಜಲ್ ಆಲಿ ಆಯೋಗವು ಶಿಫಾರಸು ಮಾಡಿತು. ಆಗ ಬಳ್ಳಾರಿಯಲ್ಲಿ ಕರ್ನಾಟಕ ಕ್ರಿಯಾ ಸಮಿತಿಯನ್ನು ಸ್ಥಾಪಿಸಿ, ಫಜಲ್ ಆಲಿ ವರದಿಯ ಶಿಫಾರಸುಗಳನ್ನು ಅಂಗೀಕರಿಸಬಾರದೆಂದು ಶಾಂತಿಯುತ ಸತ್ಯಾಗ್ರಹ ಪ್ರಾರಂಭಿಸಿದವರಲ್ಲಿ ಕೋಚೆ ಪ್ರಮುಖರು. ಹದಿನಾಲ್ಕು ವರ್ಷ 'ರೈತ ಪತ್ರಿಕೆ' ನಡೆಸಿ ಏಕೀಕರಣ ಚಳವಳಿಯ ಅಗತ್ಯವನ್ನು ಪ್ರಚಾರಗೊಳಿಸಿದರು. ಈಗಲೂ ಆದವಾನಿ, ಆಲೂರು, ರಾಯದುರ್ಗ ತಾಲ್ಲೂಕುಗಳ ಕನ್ನಡಿಗರ ಹಿತರಕ್ಷಣೆಗಾಗಿ ದುಡಿಯುತ್ತಿದ್ದಾರೆ. ಹೋರಾಟದ ಬಂಡುಕೋರತನ-ಅಧ್ಯಾತ್ಮದ ಸ್ಥಿತಪ್ರಜ್ಞತೆ ಇವು ಪರಸ್ಪರ ವಿರೋಧವುಳ್ಳ ಸಂಗತಿಗಳು. ಸಂದರ್ಭೋಚಿತವಾಗಿ ಈ ಸಂಗತಿಗಳಿಗೆ ಕೋಚೆ ಮುಖಾಮುಖಿಯಾಗುತ್ತಲೇ ಇದ್ದಾರೆ. ಭಾರತ ಸ್ವಾತಂತ್ರ್ಯ ಹೋರಾಟ, ಕರ್ನಾಟಕ ಏಕೀಕರಣದ ದುರ್ಗಮಹಾದಿಗಳ ವ್ಯಾಪ್ತಿಯನ್ನು ಪರಿಚಯಿಸಲು ಈಗಲೂ ಶ್ರಮಿಸುತ್ತಿದ್ದಾರೆ.

ಕೋಚೆ ಭ್ರಷ್ಟಾಚಾರ ವಿರೋಧಿ, ದಕ್ಷ ಆಡಳಿತಗಾರ, ಸಹೃದಯ ನ್ಯಾಯಮೂರ್ತಿಯೆಂದು ಚಿರಪರಿಚಿತರಾದವರು. ಜಾತಿ-ಮತ, ಪಕ್ಷ-ಪಂಗಡಗಳ ಸಂಕುಚಿತ ಮನೋವೃತ್ತಿ ದೇಶದ ಭವಿಷ್ಯಕ್ಕೆ ಅಪಾಯಕಾರಿ ಎಂದು ಮನಗಂಡ ಶ್ರೇಷ್ಠ ಪ್ರಜಾತಂತ್ರವಾದಿ ಸಾಹಿತ್ಯಾರಾಧಕರಾಗಿದ್ದರೂ ನ್ಯಾಯ ಸ್ಥಾನದಲ್ಲಿ ಹಂಗು ಹರಿಬಗಳಿಗೆ ಒಳಗಾಗದೆ ಶಾಸನರೀತ್ಯಾ ಯೋಗ್ಯ ತೀರ್ಪುಗಳನ್ನು ನೀಡಿದ ಕುಶಲಮತಿ ನ್ಯಾಯಾಧೀಶ. ತಮ್ಮ ಅಧ್ಯಯನ-ಬರಹಗಳ ಅನುಭವಧಾರೆಯನ್ನು ನ್ಯಾಯಾಂಗದ ಕಾರ್ಯಕ್ಷಮತೆಗೆ ಎರೆದಿದ್ದಾರೆ. ಹಾಗಾಗಿ ಸಾರ್ವಜನಿಕ ಸಮಸ್ಯೆಗಳನ್ನು ಪ್ರಭಾಯುತವಾಗಿ ಮಂಡಿಸುತ್ತಿದ್ದರು. ಆದರೆ ದಾಕ್ಷಿಣ್ಯಪರರಲ್ಲ, ನ್ಯಾಯಾಂಗಕ್ಕೆ ಗೌರವ ತಂದುಕೊಟ್ಟ ಸಮರ್ಥ ನ್ಯಾಯವಿಧಿಯ ಜಿಜ್ಞಾಸು. ಸ್ವತಃ ನ್ಯಾಯಾಧೀಶರಾಗಿದ್ದೂ ತಮ್ಮ ವಕಾಲತ್ತನ್ನು ಶ್ರೀ ಮಾತಾರವಿಂದರ ಹೆಗಲಿಗೇರಿಸಿದ್ದಾರೆ.

ನ್ಯಾಯಾಧೀಶರಾಗಿದ್ದಾಗ ವಿರಾಮ ವೇಳೆಯನ್ನು ಸಾಹಿತ್ಯ ರಚನೆಗಾಗಿ ಸದುಪಯೋಗಪಡಿಸಿಕೊಳ್ಳುತ್ತಿದ್ದರು. ನ್ಯಾಯಾಧೀಶ ಕೋಚೆಗಿಂತ ಸಾಹಿತಿ ಕೋಚೆ ಜನಸಾಮಾನ್ಯರಿಗೆ ಹೆಚ್ಚು ಪರಿಚಿತರಾಗಿದ್ದಾರೆ. ಅವರಿಗೆ ವೃತ್ತಿಪರತೆಯ ಖ್ಯಾತಿಗಿಂತಲೂ ಸಾಹಿತ್ಯ ಕೃಷಿಯ ಕಡೆಗೇ ವಿಶೇಷ ಒಲವಿತ್ತು. ಅಂತೆಯೇ ಕೋಚೆ ವೃತ್ತಿ ಜೀವನದಲ್ಲೂ ಕನ್ನಡಕ್ಕೆ ಮಹತ್ವ ನೀಡಿದರು. ಸಾಹಿತ್ಯವನ್ನು ಓದುವುದರಿಂದ ಜನರನ್ನು ವಿಚಾರವಂತರನ್ನಾಗಿ ಮಾಡುವ ಮೂಲಕ ಸಾಹಿತ್ಯ ಬದುಕುವ ದಾರಿಯನ್ನು ನಿರ್ದಿಷ್ಟವಾಗಿ ತೋರಿಸಬೇಕು. ಬದುಕಿಗೆ ಬೇಕಾದ ಪ್ರಾಥಮಿಕ ಅವಶ್ಯಕತೆಗಳಿಂದ ಮೊದಲುಗೊಂಡು, ಮನಸ್ಸನ್ನು ಅತಿಮನಸ್ಸಿನ ಉನ್ನತ ಸ್ಥಿತಿಗೇರಿಸಬೇಕಾದ ಸಾಧನೋಪಾಯ, ಸಲಕರಣೆಗಳನ್ನು ಕಂಡುಕೊಳ್ಳುವ ವಿಚಾರಶಕ್ತಿಯನ್ನು ಸಾಹಿತ್ಯ ಕೊಡಬೇಕೆಂದು ಬದುಕಿಗೆ ಸಾಹಿತ್ಯದ ಅಗತ್ಯತೆಯನ್ನು ಕುರಿತ ಕೋಚೆ ಅವರ ಸ್ಪಷ್ಟ ನಿಲುವಾಗಿದೆ. ವಿವೇಚನಾಶಕ್ತಿ ಮತ್ತು ಜೀವನ ಸಮಸ್ಯೆಗೆ ಸಾಹಿತ್ಯ ದಾರಿ ತೋರಬೇಕೆಂದು ಅವರು ವ್ಯಾಖ್ಯಾನಿಸುತ್ತಾರೆ. ಕಾವ್ಯ ಪ್ರಕಾರದಿಂದ ಆರಂಭವಾದ

**ಕೋಚೆಯವರ ಏಕೈಕ ನಾಟಕ 'ಶ್ರೀರಾಮಕೃಷ್ಣಲೀಲಾ ನಾಟಕಂ'. ಅವರು ಇತಿಹಾಸ ಮತ್ತು ಅನುಭಾವ ಲೋಕಗಳೊಂದಿಗೆ ಮುಖಾಮುಖಿ ಆಗುವುದರ ಮೂಲಕ ನಾಟಕದ ವಿನ್ಯಾಸವನ್ನು ರೂಪಿಸಿಕೊಂಡಿದ್ದಾರೆ. ಶ್ರೀ ರಾಮಕೃಷ್ಣ ಪರಮಹಂಸರ ಪಾತ್ರದಲ್ಲಿ ಅಭಿನಯಿಸಿ ನಟರಾಗಿಯೂ ತಮ್ಮನ್ನು ಗುರುತಿಸಿಕೊಂಡಿದ್ದು ಕೋಚೆಯವರ ಬಹುಮುಖ ಪ್ರತಿಭೆಗೆ ಸಾಕ್ಷಿ.**



**ಡಾ|| ಮಲ್ಲಿಕಾರ್ಜುನ ಛಬ್ಬಿ**

ಕೋಚೆ ಅವರ ಬರಹ ಅಭಿವ್ಯಕ್ತಿಯ ಹೊಸ ಮಾರ್ಗಗಳನ್ನು ಕಂಡುಕೊಂಡಿತು. ಸಣ್ಣಕತೆ, ಕಾದಂಬರಿ, ನಾಟಕ, ಜೀವನ ಚರಿತ್ರೆ, ವಿಮರ್ಶೆ, ಸಂಪಾದನೆ, ಪ್ರಬಂಧ, ಅನುವಾದ, ಆತ್ಮಕತೆ, ಪ್ರವಾಸ ಕಥನ ಹಾಗೂ ಒಂದು ಇಂಗ್ಲಿಷ್ ಕೃತಿ ಸೇರಿದಂತೆ ವೈವಿಧ್ಯಮಯವಾದ ೮೦ ಕೃತಿಗಳನ್ನೊಳಗೊಂಡ ಸಮೃದ್ಧ ಸಾಹಿತ್ಯವನ್ನು ಸೃಷ್ಟಿಸಿದರು.

ಕೋಚೆ ಕಾವ್ಯದ ಪ್ರಮುಖ ಲಕ್ಷಣಗಳು ಅನುಭಾವದ ತಹತಹಗಳಿಂದು ಗುರುತಿಸಬಹುದು. *ಗಡೀಪಾರು, ನಮ್ಮೂರ ದೀಪ ಮತ್ತು ಇತರ ಕತೆಗಳು, ಆಮುಖ ಈ ಮುಖ, ಗಾಯಕ ನಿಲ್ಲದ ಸಂಗೀತ, ಉಂಡವನೇ ಜಾಣ, ನ್ಯಾಯಾಲಯದ ಸತ್ಯ ಕಥೆಗಳು;* ಹೀಗೆ ಆರು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ ಕೋಚೆ. ಅವರ ಕತೆಗಳಲ್ಲಿ ಪ್ರಾದೇಶಿಕ ಬದುಕಿನ ಒಳಸುಳಿಗಳು ಸಾತತ್ಯಗೊಂಡಿವೆ. ಸಮಾಜದ ಸಮಗ್ರ ತಿಳಿವಳಿಕೆಯನ್ನು ಕಥೆಗಳಲ್ಲಿ ಅನ್ವಯಿಸಿಕೊಂಡಿದ್ದಾರೆ. ಆ ತಿಳಿವಳಿಕೆ ವಾಸ್ತವ ದೃಷ್ಟಿಯದು. ಅವರ ಕತೆಗಳು ಮೌಲ್ಯಯುತ ಸಂಬಂಧಗಳ ರಹಸ್ಯವನ್ನು ತೆರೆದಿಡುತ್ತವೆ. ಅವರ ಕತೆಗಳಲ್ಲಿ ಸ್ವಾತಂತ್ರ್ಯಾಂದೋಲನ ಸಂದರ್ಭದ ಸಾಮಾಜಿಕ ಸಮಸ್ಯೆಗಳ ಗಂಭೀರ ವಿಶ್ಲೇಷಣೆಯಿದೆ. ಶ್ರಮಿಕ ವರ್ಗದ ಬೆವರಿಗೆ ಬೆಲೆನೀಡದ ಬಂಡವಾಳಶಾಹಿ ವ್ಯವಸ್ಥೆಯ ಕಬಂಧ ಬಾಹುವಿನಲ್ಲಿ ನರಳಿದ ಪಾತ್ರಗಳ ನಿಷ್ಠುರ ಬದುಕನ್ನು ಕೋಚೆ ದಾಖಲಿಸಿದ್ದಾರೆ. ಜೀವನ ವೃತ್ತಾಂತದ ಎಳೆಗಳನ್ನು, ನೈಜ ಘಟನೆಗಳನ್ನು ಹೃದಯಸ್ಥ ಮಾಡಿಕೊಂಡಿದ್ದರಿಂದಲೇ ಅವರ ಬಹುತೇಕ ಕಥೆಗಳು ಯಶಸ್ವಿಯಾಗಿವೆ. ತಮ್ಮ ವೃತ್ತಿ ಬದುಕಿನಲ್ಲಿ ಜನಜೀವನವನ್ನು ಕುತೂಹಲದಿಂದ ಕಂಡಿದ್ದರಿಂದ 'ನ್ಯಾಯಾಲಯದ ಸತ್ಯಕಥೆಗಳು' ಕೃತಿ ರಚನೆ ಸಾಧ್ಯವಾಯಿತು.

ಅವರ ಸಾಮಾಜಿಕ ಬದುಕು ಸಮಾಜದ ಕ್ರೂರ ವಾಸ್ತವಗಳನ್ನು ಕಂಡರಿತ ಪ್ರಜ್ಞೆಯಾಗಿದೆ. ಈ ಗ್ರಹಿಕೆಯ ಫಲವೇ ಅವರ ಕಥೆಗಳ ಅಂತಸ್ಸತ್ವ. ಇಂತಹ ಗಾಢಕಾಳಜಿ ಅವರ ಕಾದಂಬರಿಗಳಲ್ಲಿಯೂ ಮುಂದುವರಿಯುತ್ತದೆ. *ಹಿಂದಿರುಗಿ ಬರಲಿಲ್ಲ, ದಿವಾನ್ ಬಹದ್ದೂರ, ನೊಗದ ನೇಣು, ಕೃಷ್ಣದೇವರಾಯ, ಪೂರ್ಣವತಿ, ರಕ್ತತರ್ಪಣ, ಬೆಳಕು ಹರಿಯಿತು, ಬೇಡಿ ಕಳಚಿತು ದೇಶ ಒಡೆಯಿತು* ಇವು ಕೋಚೆಯವರ ಎಂಟು ಕಾದಂಬರಿಗಳು. ಅವರಿಗೆ ಆಳವಾದ ಜೀವನಶ್ರದ್ಧೆ ಇರುವುದರಿಂದಲೆ ವೈವಿಧ್ಯಮಯ ವಸ್ತುಗಳನ್ನು ತಮ್ಮ ಕಾದಂಬರಿಗಳಲ್ಲಿ ಹಿಡಿದಿಡುವುದು ಸಾಧ್ಯವಾಯಿತು. ಸಮಕಾಲೀನ ಜೀವನದ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ಚರ್ಚಿಸಲು ಯತ್ನಿಸಿದ್ದಾರೆ. ಇಲ್ಲಿ ಸಹಜವಾಗಿಯೆ ಅವರ ಪ್ರಾಮಾಣಿಕ ಕುದಿತ ಪ್ರಕಟವಾಗಿದೆ. ಗ್ರಾಮೀಣ ಪರಿಸರದ ಕಾದಂಬರಿಗಳಲ್ಲಿ ಯಜಮಾನ ಸಂಸ್ಕೃತಿಯ ಅಟ್ಟಹಾಸವಿದೆ. 'ಹಿಂದಿರುಗಿ ಬರಲಿಲ್ಲ', 'ರಕ್ತತರ್ಪಣ', 'ಬೆಳಕು ಹರಿಯಿತು', 'ಬೇಡಿ ಕಳಚಿತು ದೇಶ ಒಡೆಯಿತು', ಕಾದಂಬರಿಗಳು ಸ್ವಾತಂತ್ರ್ಯ ಯುಗದ ರಾಜಕೀಯ ಪ್ರಸಂಗಗಳನ್ನು ರೂಪಿಸುವ ಸಂಕಲ್ಪ ಹೊತ್ತ ಮನಸ್ಸಿನ ಚಿಂತನೆಯ ಫಲವಾಗಿವೆ. ಪ್ರಾದೇಶಿಕತೆಯಿಂದ ಆರಂಭವಾಗುವ ಕಾದಂಬರಿ 'ಬೇಡಿ ಕಳಚಿತು ದೇಶ ಒಡೆಯಿತು'. ಹಲವು ಪಾತ್ರಗಳ ಮುಖಾಂತರ ಗ್ರಾಮ್ಯದೃಷ್ಟಿಯನ್ನು ಅರ್ಥಪೂರ್ಣವಾಗಿ ಬಿಂಬಿಸುತ್ತದೆ. ಈ ಮಹಾಕಾದಂಬರಿಯಲ್ಲಿ 'ರಾಷ್ಟ್ರೀಯ ಪ್ರಜ್ಞೆ'ಯೇ ಕೋಚೆಯವರ ಹೆಚ್ಚುಗಾರಿಕೆ. ಇಲ್ಲಿ ಸಾಮ್ರಾಜ್ಯಶಾಹಿ ಆಕ್ರಮಣಶೀಲತೆಯ ವಿರುದ್ಧ ದನಿ ಎತ್ತಿದ್ದಾರೆ.

ಕೋಚೆಯವರ ಏಕೈಕ ನಾಟಕ 'ಶ್ರೀರಾಮಕೃಷ್ಣಲೀಲಾ ನಾಟಕಂ'. ಅವರು ಇತಿಹಾಸ ಮತ್ತು ಅನುಭಾವ ಲೋಕಗಳೊಂದಿಗೆ ಮುಖಾಮುಖಿಯಾಗುವುದರ ಮೂಲಕ ನಾಟಕದ ವಿನ್ಯಾಸವನ್ನು ರೂಪಿಸಿಕೊಂಡಿದ್ದಾರೆ. ಶ್ರೀ ರಾಮಕೃಷ್ಣ ಪರಮಹಂಸರ ಪಾತ್ರದಲ್ಲಿ ಅಭಿನಯಿಸಿ ನಟರಾಗಿಯೂ ತಮ್ಮನ್ನು ಗುರುತಿಸಿಕೊಂಡಿದ್ದು ಕೋಚೆಯವರ ಬಹುಮುಖ ಪ್ರತಿಭೆಗೆ ಸಾಕ್ಷಿ.

ಕೋಚೆ ಅವರು ವೈಚಾರಿಕ ನೆಲೆಯ ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯರಂಗದ ಗಮನ ಸೆಳೆದವರು. ಅವರ ಇಡೀ ಬರವಣಿಗೆಯ ತಿರುಳೇ ವೈಚಾರಿಕತೆ. ಮಹಾನ್ ವ್ಯಕ್ತಿಗಳ ಬದುಕಿನ ಸಮಗ್ರತೆಯನ್ನು ಗ್ರಹಿಸುವ ವೈಚಾರಿಕ ಪಾವಿತ್ರ್ಯತೆಯ ತುಡಿತ ನಾಟಕದಿಂದ ಆರಂಭವಾಗಿ ಜೀವನ ಚರಿತ್ರೆಗಳವರೆಗೂ ಮುಂದುವರಿಯುತ್ತದೆ. ಇತಿಹಾಸವನ್ನು ಇಟ್ಟುಕೊಂಡು ವರ್ತಮಾನದ ಮೌಲ್ಯಗಳನ್ನು ಶೋಧಿಸುವ ಅರ್ಥಗರ್ಭಿತ ಕ್ರಮವನ್ನು ಅನುಸರಿಸಿ ಒಂಬತ್ತು ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಪ್ರಾಮಾಣಿಕ ಬದುಕಿನ ನೆಲೆಯಿಂದ ಅಂತರಂಗ-ಬಹಿರಂಗಗಳ ಸಾಮರಸ್ಯ ಸಾಧಿಸಿದ ಗಣ್ಯಚೇತನಗಳ ಚರಿತ್ರೆಯನ್ನು ಆವಿಷ್ಕಾರಗೊಳಿಸಿಕೊಳ್ಳುವ ಕ್ರಮ ಸಾಂಸ್ಕೃತಿಕ ಅನನ್ಯತೆಯನ್ನು ಸಮೃದ್ಧಿಗೊಳಿಸುವದೇ ಆಗಿದೆ. ಚರಿತ್ರೆಯ ವಿಚಾರದಲ್ಲಿ ಅವರಿಗೆ ಯಾವಾಗಲೂ ಸಂದೇಹ. ಯಾವುದೋ ಒಂದು ದಾಖಲೆಯನ್ನು ಕಣ್ಮುಚ್ಚಿಕೊಂಡು ನಂಬುವವರಲ್ಲ. ಸತ್ಯವನ್ನು

ಅನ್ವೇಷಣೆ ಮಾಡುವವರು. ಚರಿತ್ರೆಯನ್ನು ವಿಶಿಷ್ಟವಾದ ಕಥನ ಮಾದರಿಯಲ್ಲಿ ಬರೆಯುವ ಅಪರೂಪದ ಬರಹಗಾರ.

ಆಧ್ಯಾತ್ಮಿಕ ಶ್ರದ್ಧೆಯ ಸಂಶೋಧನಾತ್ಮಕ ಅಧ್ಯಯನ ಈ ಜೀವನ ಚರಿತ್ರೆಗಳ ಮೂಲಸೆಲೆ. ಆಧ್ಯಾತ್ಮಿಕ ಚೌಕಟ್ಟಿನಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಶ್ರೀ ಅರವಿಂದರು, ಶ್ರೀ ಮಾತೆ ಮತ್ತಿತರರ 'ಅತ್ಯುನ್ನತ ಸಿದ್ಧಿ'ಯನ್ನು ಅಧ್ಯಯನಪೂರ್ವಕವಾಗಿ ಗ್ರಹಿಸಿದವರು ಕೋಚೆ. ಇಲ್ಲಿ 'ದೈವ-ಭಕ್ತ' ಸಂಬಂಧದ ಅಸ್ತಿತ್ವವಿದೆ. ಶ್ರೀ ಮಾತಾರವಿಂದರ ಆತ್ಮಗಳೊಂದಿಗೆ ಸಂವಾದಿಸುವ ತವಕದಲ್ಲಂತೂ ಧ್ಯಾನಸ್ಥ ಭಕ್ತನ ತನ್ಮಯತೆ ಉತ್ಕಟವಾಗಿದೆ. ಅವರು ಅಧ್ಯಾತ್ಮದ ಆಳ-ಅಗಲಗಳನ್ನು ಅರಿಯಲು ನಿರಂತರವಾಗಿ ಪ್ರಯತ್ನಿಸಿದ ಸಾಹಿತಿ.

ಸಾಹಿತ್ಯದ ಓದನ್ನು ಕ್ರಮಬದ್ಧವಾಗಿ ವಿಶ್ಲೇಷಣೆ ಮತ್ತು ಚರ್ಚೆಗೊಳಪಡಿಸಿದ್ದಾರೆ ನಿಷ್ಪಕ್ಷಪಾತ ನೆಲೆಯಲ್ಲಿ, ತಾತ್ವಿಕ ನೆಲೆಗಟ್ಟಿನಲ್ಲಿ ಜರುಗಿದ ಅವರ ವಿಮರ್ಶೆ 'ಸೃಜನಶೀಲ ಪ್ರಕ್ರಿಯೆ' ಎಂಬುದನ್ನು ಸಾಬೀತುಪಡಿಸುತ್ತದೆ. ಇದು ಪ್ರಜ್ಞಾಪೂರ್ವಕವಾಗಿ ನಡೆದ ಬೌದ್ಧಿಕ ಕೆಲಸ. ಅವರು ಸಾಹಿತ್ಯ ಕೃತಿಗಳನ್ನು ಅಭ್ಯಸಿಸಿ ನಿರೂಪಿಸಿದ ಅನುಭವ ಮಂಡನೆ ಶಿಸ್ತಿನಿಂದ ಕೂಡಿದೆ. 'ಶ್ರೀರಾಮಾಯಣದರ್ಶನಂ ಮಹಾಕಾವ್ಯ ಸಮೀಕ್ಷೆ'ಯು ಸಂಶೋಧನಾತ್ಮಕವಾದ ಸಮಗ್ರ ದೃಷ್ಟಿಕೋನದಿಂದ ಮೂಡಿದ ವಿಮರ್ಶೆ. ಅದು ಚಿತ್ರಕ ಶಕ್ತಿಯಿಂದ ಪರಿಣಾಮಕಾರಿಯಾಗಿದೆ. 'ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ ಸಾಮಾಜಿಕ ನಿಷ್ಠೆ' ವಿಮರ್ಶಾಕೃತಿಯು ಸಾಹಿತ್ಯದ ನೈಜ ಅನುಸಂಧಾನ. ಕೋಚೆ ವಿಮರ್ಶೆಯ ರಚನಾಸ್ವರೂಪ ಸಂಸ್ಕೃತಿ ಚಿಂತನೆಯಿಂದ ಹೊರಹೊಮ್ಮಿದ ಕೃತಿನಿಷ್ಠ ವಿಮರ್ಶೆ.

ಕೋಚೆ ಸಂಪಾದನೆ ಮಾಡಿರುವ ಕೃತಿಗಳ ಮೂಲಸೆಲೆಗಳು ಐತಿಹಾಸಿಕ ಸತ್ಯ, ಖಚಿತತೆ, ಸ್ಪಷ್ಟತೆ, ಪೂರ್ವಾಗ್ರಹಗಳಿಲ್ಲದ ವೈಯಕ್ತಿಕ ಧೋರಣೆ, ನಿಷ್ಠುರತೆ, ವೈಚಾರಿಕತೆ ಮತ್ತು ಸಮಗ್ರ ದೃಷ್ಟಿಕೋನ. ಈ ಕಾರ್ಯದಲ್ಲಿ ವಿವರಣೆ ವ್ಯಾಖ್ಯಾನ, ಮೌಲ್ಯಮಾಪನ ಗಳನ್ನು ತೀಕ್ಷ್ಣವಾಗಿ ಅವರು ನಿಭಾಯಿಸಿದ್ದಾರೆ.

ಶ್ರೀ ಅರವಿಂದರ 'ದಿವ್ಯಜೀವನ' ಹಾಗೂ 'ಸಾವಿತ್ರಿ' ಮಹಾಕಾವ್ಯ ಸೇರಿದಂತೆ ಸುಮಾರು ಹದಿನಾರು ಅನುವಾದಿತ ಕೃತಿಗಳನ್ನು ಕೋಚೆ ಅವರು ಪ್ರಕಟಿಸಿದ್ದಾರೆ ಆಧ್ಯಾತ್ಮಿಕ ಶ್ರದ್ಧೆಗೊಳಪಟ್ಟ ಅವರ ಅನುವಾದಗಳು ತಾತ್ವಿಕ ಚಿಂತನೆಯಿಂದ ಕೂಡಿವೆ. 'ಅಂತರಂಗ ಚಿಕಿತ್ಸೆ-ಬಹಿರಂಗ' ಚಿಕಿತ್ಸೆಗೊಳಪಡಿಸುವ ಆಧ್ಯಾತ್ಮಿಕ 'ಸಿದ್ಧವಸ್ತು'ಗಳನ್ನು ಕನ್ನಡೀಕರಣ ಗೊಳಿಸುವಾಗ ತಾತ್ವಿಕ ಅಭಿವ್ಯಕ್ತಿ ಮುಖ್ಯ ಕಾಳಜಿಯಾಗಿದೆ. ಅಧ್ಯಾತ್ಮ, ಇತಿಹಾಸ, ರಾಜಕೀಯ ಪುನರ್ ಮೌಲ್ಯೀಕರಣಗಳೆಂದು ಕೋಚೆ ಅನುವಾದ ಕೃತಿಗಳ ಮುಖ್ಯ ವಿಷಯಗಳನ್ನು ಗುರುತಿಸಬಹುದು.

'ನನ್ನ ಮನಸ್ಸು-ನನ್ನ ನಂಬುಗೆ' (ಪೂರ್ವಾರ್ಧ, ಉತ್ತರಾರ್ಧ) 'ನ್ಯಾಯಾಧೀಶನ ನೆನಪುಗಳು' ಹೀಗೆ ಮೂರು ಸಂಪುಟಗಳಲ್ಲಿ ತಮ್ಮ ಆತ್ಮಕತೆಯನ್ನು ಬಿಚ್ಚಿಟ್ಟಿದ್ದಾರೆ. ವೈಯಕ್ತಿಕ ಮಟ್ಟದ ಅನುಭವಗಳನ್ನು ಸಾರ್ವತ್ರೀಕರಣಗೊಳಿಸುವ ದೆಸೆಯಲ್ಲಿ ತೀರಾ ಖಾಸಗಿ ಯಾದಂತಹ ವಿಷಯಗಳನ್ನು ಪರಿಶೋಧಿಸಿಕೊಂಡಿದ್ದಾರೆ. ಸಾಹಿತ್ಯಕ ಮತ್ತು ಸಾಂಸ್ಕೃತಿಕ ಮುಖಾಮುಖಿಯಲ್ಲಿ ಸಂಘರ್ಷಗಳು, ವೈರುಧ್ಯಗಳು ದಾಖಲಾಗಿವೆ. ಮೌಲ್ಯಗಳ ಪತನಕ್ಕೆ ಪರಿತಪಿಸುವ, ವ್ಯವಸ್ಥೆಯನ್ನು ಸಮರ್ಥವಾಗಿ ಎದುರಿಸುವ ಬಂಡುಕೋರತನ ಅವರದು ಎಂದು ಆತ್ಮಕಥೆಗಳಿಂದ ತಿಳಿದುಬರುತ್ತದೆ. ಸ್ವಯಂಪ್ರಜ್ಞೆಯಿಂದ ಸಂಪಾದಿಸಿಕೊಂಡ ಕೋಚೆ ಆತ್ಮಸಂಸ್ಕಾರವು ಅನುಭವ ನಿರೂಪಣೆಯನ್ನು ವ್ಯಾಖ್ಯಾನಿಸುವ ಕ್ರಮ ಗಮನೀಯವಾಗಿದೆ.

ಕೋಚೆ ಸೃಜನಶೀಲ ದೃಷ್ಟಿ ನಾಡಕಟ್ಟುವ ಶ್ರೀ ಸಾಮಾನ್ಯರಿಗಿಂತಲೂ ಆಳುವವರ ಕಡೆಗೆ ತೀಕ್ಷ್ಣವಾಗಿ ಹರಿದಿದೆ. ಅವರದು ಸಾಂಸ್ಕೃತಿಕವಾಗಿ ಸಮೃದ್ಧಶೀಲ ವ್ಯಕ್ತಿತ್ವ. ಅವರ ತಾತ್ವಿಕತೆ 'ಸಾರ್ವಕಾಲಿಕ ನೆಲೆ'ಗಳ ಕಡೆಗೆ ಗಮನವಿಟ್ಟಿದೆ. ಅವರ ಅಧ್ಯಾತ್ಮ ಬರಹ ತಮ್ಮ ಅನುಭವ ಶೋಧನೆಗಾಗಿ ನಿರ್ಮಿಸಿಕೊಂಡ ಪರಿಸರ. 'ಕೋಚೆ ನ್ಯಾಯದೃಷ್ಟಿ' ಹಾಗೂ ಇತರ ಕೃತಿಗಳಲ್ಲಿ ಆಯಾಕಾಲಕ್ಕೆ ತಕ್ಕಂತೆ ಸಮಕಾಲೀನ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಪಲ್ಲಟ ಗಳನ್ನು ಬಿಂಬಿಸಿದ್ದಾರೆ. ಹಲವು ದಿಕ್ಕಿನ ಪ್ರಭಾವಗಳನ್ನು ಜೀರ್ಣಿಸಿಕೊಂಡ ಸ್ವಂತಿಕೆ ಕೋಚೆ ಅವರದು ಎಂಬುದನ್ನು ವಿಮರ್ಶಾಲೋಕ ಇನ್ನೂ ಗುರುತಿಸಬೇಕಾಗಿದೆ. ಅವರ ಎಲ್ಲಾ ಕೃತಿಗಳಿಂದ ಮಾತ್ರ 'ಕೋಚೆ ವ್ಯಕ್ತಿತ್ವ'ವನ್ನು ಗುರುತಿಸಲು ಸಾಧ್ಯ. ಪ್ರಸ್ತುತ ಸಂದರ್ಭಕ್ಕೆ ಸಾಹಿತ್ಯ ಪರಂಪರೆಯನ್ನು ಅನ್ವಯಿಸಿ ಮುಂದುವರಿಸಿಕೊಂಡು ಹೋಗುವ ಗುರುತರ ಜವಾಬ್ದಾರಿಯನ್ನು ಅರಿತವರು ಕೋಚೆ. ಲೋಕದ ರಹಸ್ಯವನ್ನು ಅನುಭವಗಳ ಮೂಲಕ ಅರಿಯುವ ಸಂವೇದನಾಶೀಲ ಮನಸ್ಸುಳ್ಳವರು. ತತ್ವನಿಷ್ಠ ಹಾಗೂ ಆದರ್ಶಪ್ರಾಯ ಜೀವನಮಾರ್ಗದಲ್ಲಿ ಸಾಗಿದ್ದ ಕೋಚೆ ಅವರಿಗೆ ಈಗಿನ ವ್ಯವಸ್ಥೆಯನ್ನು ಕಂಡು ಸಾತ್ವಿಕ ಸಿಟ್ಟು.



ಎಂ. ಎಸ್. ಕೃಷ್ಣನ್ ಟ್ರಸ್ಟ್‌ನ ಕಾರ್ಯಕ್ರಮದಲ್ಲಿ ಅಧ್ಯಕ್ಷತೆ ವಹಿಸಿದ್ದ ಕೋಚೆ

ಅಂತೆಯೇ ವೈಯಕ್ತಿಕ ಬದುಕನ್ನೂ ಮೀರಿದ ಲೋಕವನ್ನು ಅವರ ಬರಹ ಒಳಗೊಳ್ಳುತ್ತಾ ಬದುಕು-ಬರಹ ಪರಸ್ಪರ ಬದ್ಧತೆಯನ್ನು ಸಾಧಿಸಿವೆ. ಅವರ ಬರಹಗಳಲ್ಲಿ ಮಾನವ ಕೇಂದ್ರಿತ ಕಾಳಜಿಯಿದೆ. ಸಮಕಾಲೀನ ಸಂದರ್ಭದ ಸಾಹಿತ್ಯ, ಅದರ ಒಟ್ಟು ಪ್ರಭಾವಗಳು, ಕೋಚೆ ಬರವಣಿಗೆ ಮತ್ತು ಬದುಕಿನ ಮೇಲೆ ಆಗಿವೆ. ಪ್ರಸ್ತುತ ಸಮಾಜದ ಜೀವವಿರೋಧಿ ವಿದ್ಯಮಾನಗಳಿಗೆ ಪ್ರತಿರೋಧಾತ್ಮಕವಾಗಿ ಅವರ ಬರವಣಿಗೆ ರೂಪುಗೊಂಡಿದೆ.

ಪ್ರಭುತ್ವದ ದಮನಕ್ಕೊಳಗಾಗಿರತಕ್ಕಂತಹ ವರ್ಗಕ್ಕೆ ಧ್ವನಿ ಒದಗಿಸಿಕೊಡಬಲ್ಲ ನೆಲೆಯೊಳಗೆ ಹೋರಾಟದ ಪರವಾಗಿ ನಿಲ್ಲುವ ಬರವಣಿಗೆಯನ್ನು ಕೋಚೆ ಮಾಡಿದರು. ಅದೆಲ್ಲವೂ ಈ ಸಂದರ್ಭದಲ್ಲಿ ಸ್ಪಂದನ ರೂಪದಲ್ಲಿ ಬಂದಿರುವ ಬರವಣಿಗೆ ಎನ್ನುವುದನ್ನು ನಾವು ಗಮನಿಸಬೇಕು. ಅದಕ್ಕೆ ಕೋಚೆ ಅವರ ಬಗ್ಗೆ ಬರೆಯುವಾಗ ಪ್ರಸ್ತುತ ಸಮಾಜವೇ ಮತ್ತೆ ಮತ್ತೆ ನಮ್ಮ ಕಣ್ಣಿಗೆ ಕಟ್ಟುತ್ತದೆ. ಈ ಅವಧಿಯಲ್ಲಿ ಏನೆಲ್ಲ ಬದಲಾವಣೆಗಳು ಸಂಭವಿಸಿವೆ. ಕನ್ನಡ ನೆಲದಲ್ಲಿ 'ಸಾಂಸ್ಕೃತಿಕವಾದ ನೆಲೆ'ಗಳಲ್ಲಿ ಏನೆಲ್ಲಾ ಬದಲಾವಣೆ ಗಳಾಗಿವೆ. ಸಂಪ್ರದಾಯವಾದ ಮತ್ತು ಮನುಷ್ಯ ವಿರೋಧಿ ನಂಬಿಕೆಗಳನ್ನು ನಿರಾಕರಿಸತಕ್ಕ ಚಳವಳಿಗಳು ಈ ನೆಲದಲ್ಲಿ ಹುಟ್ಟಿಕೊಂಡಿದ್ದವು. ಅವೆಲ್ಲವೂ ಕೂಡ ಗಟ್ಟಿಗೊಳ್ಳತಕ್ಕಂತಹ ಕಾಲವಿದು. ನಂಬಿಕೆಗಳನ್ನು ಬಲಗೊಳಿಸಬಲ್ಲ ಪ್ರಯತ್ನ ಕೂಡ ನಡೆಯುತ್ತಿದೆ. ಸನಾತನವಾದ ವನ್ನು ಇನ್ನಷ್ಟು ಗಟ್ಟಿಗೊಳಿಸುವ ಕೆಲಸವೂ ನಡೆಯುತ್ತಿದೆ. ಮನುಷ್ಯ ವಿರೋಧಿಯಾದ ಮನುಸ್ಮೃತಿಯನ್ನು ಮತ್ತೆ ಆಚರಣೆಯಲ್ಲಿ ತರುವ ಕೆಲಸ ನಡೆಯುತ್ತಿದೆ. ಇದೆಲ್ಲಕ್ಕೂ ಪ್ರತಿಕ್ರಿಯಾತ್ಮಕವಾದ ನೆಲೆಯಲ್ಲಿ ಹೋರಾಟದ ಬದುಕನ್ನು ರೂಪಿಸಿಕೊಂಡ ಕೋಚೆ ತಮ್ಮ ಬರವಣಿಗೆಯ ಮೂಲಕ ರಾಷ್ಟ್ರಸೇವೆ, ನಾಡು-ನುಡಿ ಮತ್ತು ಸಮಾಜದ ಬೆಳವಣಿಗೆಗಳಲ್ಲಿ ಗಂಭೀರವಾಗಿ ತೊಡಗಿಸಿಕೊಂಡಿದ್ದಾರೆ. ಗಾಂಧಿ ತತ್ವದ ಪ್ರಚಾರಕರಾಗಿ, 'ಗಾಂಧಿ ಶಾಂತಿ ಪ್ರತಿಷ್ಠಾನ'ದಲ್ಲಿ ಸಕ್ರಿಯವಾಗಿ ಕಾರ್ಯನಿರತರಾಗಿದ್ದಾರೆ. ಸಮಾಜ ಸುಧಾರಕರಾಗಿ ಸಾರ್ವಜನಿಕ ಬದುಕಿನಲ್ಲಿ ಭ್ರಷ್ಟಾಚಾರವನ್ನು ತೊಲಗಿಸಲು ನಿರಂತರ ಹೋರಾಟ ಮಾಡುತ್ತ ಬಂದಿದ್ದಾರೆ. 'ಕರ್ನಾಟಕ ಭ್ರಷ್ಟಾಚಾರ ನಿರ್ಮೂಲನಾ ವೇದಿಕೆ'ಯ ಸಂಚಾಲಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಮೊದಲಿನಿಂದಲೂ ಎಡಪಂಥೀಯ ಚಳುವಳಿಗಳ ಜೊತೆ ಗುರುತಿಸಿ ಕೊಂಡಿರುವ ಕೋಚೆ ಅವರು ಈಗ ಈ ರಾಜ್ಯದ ಕಮ್ಯುನಿಸ್ಟ್ ಹೋರಾಟಗಾರ, ಕಾರ್ಮಿಕ ನಾಯಕ, ಶಾಸಕರಾಗಿದ್ದ ದಿವಂಗತ ಎಂ. ಎಸ್. ಕೃಷ್ಣನ್ ಅವರ ಸ್ಮರಣ ಸಂಸ್ಥೆಯ ಅಧ್ಯಕ್ಷರಾಗಿ ಕೆಲಸ ಮಾಡುತ್ತಿದ್ದಾರೆ. ಅವರ ಎಡಪಂಥೀಯ ಒಲವನ್ನು ತಮ್ಮ 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯಲ್ಲಿ ಐತಿಹಾಸಿಕ ಘಟನೆಗಳ ಮೂಲಕವೇ ದಾಖಲಿಸಿದ್ದಾರೆ. 'ಹೊಸತು' ಪತ್ರಿಕೆಯ ಹಿತೈಷಿಗಳಾಗಿ ನಿಕಟವಾದ ಒಡನಾಟವನ್ನಿಟ್ಟುಕೊಂಡಿದ್ದಾರೆ. ತೊಂಭತ್ತೆರಡರ ಇಳಿವಯಸ್ಸಿನಲ್ಲಿಯೂ ಕೋಚೆ ಅವರ ಬರವಣಿಗೆ ನಿರಂತರವಾಗಿ ಸಾಗಿದೆ. ಅಖಿಲ ಭಾರತ ೭೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾದ ಹಿನ್ನೆಲೆಯಲ್ಲಿ ಕೋಚೆ ಅವರನ್ನು ಕುರಿತು ಇಷ್ಟನ್ನು ಪರಿಚಯಾತ್ಮಕವಾಗಿ ಹೇಳಲಾಯಿತು. ಇದೆಲ್ಲದರಾಚೆಗೂ ವಿಶಾಲವಾಗಿ ಹಬ್ಬಿದೆ ಅವರ ಘನ ವ್ಯಕ್ತಿತ್ವ.

**ಡಾ|| ಮಲ್ಲಿಕಾರ್ಜುನ ಛಬ್ಬಿ**
ಶಿಕ್ಷಕರು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಮರಳದೊಡ್ಡಿ, ಹುಣಸನಹಳ್ಳಿ ಅಂಚೆ ಕೊಡಿಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, ಪಿನ್ - ೫೬೨ ೧೧೯

*ಚಿತ್ರಕೃಪೆ : ನರೇಶ (ಅನ್‌ಟಚೆಬಲ್ ಮೂವೀಸ್)*




# ಮಾಧ್ಯಮಗಳಲ್ಲಿ ಭವಿಷ್ಯವಾಣಿ

'ಮಾಧ್ಯಮಗಳಲ್ಲಿ ಭವಿಷ್ಯವಾಣಿ' – ಈ ಕುರಿತಂತೆ ತಮ್ಮ ಅನಿಸಿಕೆಗಳನ್ನು 'ಹೊಸತು' ಪತ್ರಿಕೆಯೊಂದಿಗೆ ಹಂಚಿಕೊಳ್ಳಬೇಕೆಂದು ಓದುಗರಲ್ಲಿ ವಿನಂತಿಸಿದ್ದೆವು. ಅನೇಕ ಓದುಗರು, ಲೇಖಕರು ಇದಕ್ಕೆ ಸ್ಪಂದಿಸಿ ತಮ್ಮ ಪ್ರತಿಕ್ರಿಯೆಗಳನ್ನು ಕಳಿಸಿದ್ದಾರೆ. ಅವರೆಲ್ಲರಿಗೆ ವಂದನೆಗಳನ್ನು ತಿಳಿಸುತ್ತ ನಿಗದಿತ ಅವಧಿಯೊಳಗೆ ನಮಗೆ ತಲುಪಿದ ಕೆಲವನ್ನು ಆಯ್ದು ಇಲ್ಲಿ ಪ್ರಕಟಿಸಿದ್ದೇವೆ. ಇದರಿಂದ ಉತ್ತಮ ಫಲಿತಾಂಶ ಸಮಾಜಕ್ಕಾಗಲೆಂಬುದು ನಮ್ಮ ಆಶಯ. – *ಸಂಪಾದಕ*

ದೇಶದ ನಾಲ್ಕನೇ ಅಂಗವೆಂದೇ ಮಾಧ್ಯಮ ಪರಿಗಣಿಸಲ್ಪಟ್ಟಿದೆ. ದೇಶದ ಆಗುಹೋಗುಗಳ ಬಗ್ಗೆ ಸರಿಯಾಗಿ ಪ್ರಜೆಗೆ ತಲುಪಿಸುವ, ಒಳಿತು ಕೆಡಕುಗಳ ಬಗ್ಗೆ ಜನಜಾಗೃತಿ ಮೂಡಿಸುವಂತಹ ಒಂದು ಜವಾಬ್ದಾರಿಯುತ ಸ್ಥಾನದಲ್ಲಿ ಮಾಧ್ಯಮ ಕುಳಿತಿದೆ. ಜನರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು, ತಿಳಿವಳಿಕೆಯನ್ನು ಮೂಡಿಸುವಂತಹ ಪರಿಣಾಮಕಾರಿಯಾದ ಕಾರ್ಯವು ಮಾಧ್ಯಮಗಳಿಂದ ಆಗಬೇಕಾಗಿದ್ದು ಜವಾಬ್ದಾರಿ ಕೂಡ ಹೌದು. ಆದರೆ ಇವತ್ತಿನ ಬಹುತೇಕ ಮಾಧ್ಯಮ ರಂಗ ದ್ವಂದ್ವದಲ್ಲಿಯೋ ಇಲ್ಲವೇ ಗೊಂದಲದಲ್ಲಿಯೋ ಸಿಲುಕಿದಂತೆ ಕಂಡುಬರುತ್ತದೆ. ಬಹುತೇಕ ನಮ್ಮ ಟಿ.ವಿ. ಚಾನೆಲ್‌ಗಳು, ಬೆಳಿಗ್ಗೆ ತರಹೇವಾರಿ ಗುರುಗಳು, ಸ್ವಾಮಿಗಳು, ಜ್ಯೋತಿಷಿಗಳಿಂದ ಭವಿಷ್ಯವಾಣಿಯ ನುಡಿಮುತ್ತು ಉದುರಿಸಿ ಸಂಜೆ ವೇಳೆಗೆ ಅದೇ ಭವಿಷ್ಯದ ಬಗ್ಗೆ ವಿಚಾರವಾದಿಗಳಿಂದ ವಾಕ್ಪ್ರವಾಹ ನಡೆಸಿ ನೋಡುಗನನ್ನು ಗೊಂದಲಕ್ಕೆ ಸಿಲುಕಿಸುತ್ತವೆ. ಪ್ರಸಿದ್ಧ ದಿನಪತ್ರಿಕೆಯ ಸಂಪಾದಕರೊಬ್ಬರು ದಿನಪತ್ರಿಕೆಯಲ್ಲಿ ಬರುವ ದಿನಭವಿಷ್ಯದ ಬಗ್ಗೆ ಒಂದು ಘಟನೆ ಹೇಳುತ್ತಿದ್ದರು. ಪ್ರತಿದಿನ ಭವಿಷ್ಯ ಬರೆದು 'ಪತ್ರಿಕೆಗೆ ಕಳಿಸುತ್ತಿದ್ದ ಜ್ಯೋತಿಷಿ ಒಂದು ದಿನ ಕಳಿಸಲಿಲ್ಲ, ಯಾವುದೇ ಟೆನ್ಷನ್ ಮಾಡಿಕೊಳ್ಳದೆ ಸಂಪಾದಕರು ಒಂದು ತಿಂಗಳ ಹಿಂದಿನ 'ದಿನ ಭವಿಷ್ಯ'ವನ್ನೇ ಪುನಃ ಮುದ್ರಿಸಲು ಕಳುಹಿಸಿದ್ದರು! ಆದರೆ ಓದುಗ? ನನ್ನ ಆಫೀಸ್ ಸಹದ್ಯೋಗಿಗಳಲ್ಲಿ ಅನೇಕರು 'ದಿನ ಭವಿಷ್ಯ' ಓದದ ಹೊರತು ಕೆಲಸ ಪ್ರಾರಂಭಿಸುತ್ತಿರಲಿಲ್ಲ!

**ವಿನಾಯಕ ಎಲ್. ಪಟಗಾರ**
ಬೆಟ್ಕುಳಿ ಅಂಚೆ, ಕುಮಟಾ ತಾ, ಉ.ಕನ್ನಡ ಜಿಲ್ಲೆ, ಪಿನ್ - ೫೮೧ ೩೩೩

---

ಬದುಕು ಒಂದು ಹೋರಾಟವೆ. ದಿನನಿತ್ಯದ ಸಮಸ್ಯೆಗೆ ಒಡ್ಡಿಕೊಂಡು ಬದುಕುವುದೇ ಹರಸಾಹಸ. ಕ್ಷುಲ್ಲಕ ಕಾರಣಗಳು ಅಧೀರಗೊಳಿಸಿದರೆ, ಬೇಸರದ ಕ್ಷಣಗಳು ಕುಗ್ಗಿಸುತ್ತವೆ. ಬೆಳಗಾದರೆ ತರಕಾರಿ, ನೀರು, ಸಿಲಿಂಡರ್, ಆಟೋ, ಕಾಯಿಲೆಗಳು, ಆಸ್ಪತ್ರೆ, ಔಷಧಿ, ಖರ್ಚುಗಳು ತಲೆಭಾರ. ಆಕಸ್ಮಿಕವಾಗಿ ಸಂಭವಿಸುವ ಅಪಘಾತಗಳು ದೂರದ ಸಂಬಂಧಿಕರಿಂದ ಅವಘಡಗಳ ಬಗ್ಗೆ ಸುದ್ದಿ ನಿತ್ಯವೂ ಮನುಷ್ಯರನ್ನು ವಿಚಲಿತಗೊಳಿಸುವಾಗ ಈ ಭವಿಷ್ಯವಾಣಿ ಹೇಗೆ ಸರಿಮಾಡಬಹುದು? ಒಂದು ಕ್ಷಣ ಯೋಚಿಸಿ! ಮಲಗಿ ಏಳುವುದು ದೇಹದ ಆಲಸ್ಯವನ್ನು ದೂರಮಾಡಿಕೊಳ್ಳಲು. ವಿರಮಿಸುವುದರಿಂದ ಮತ್ತೆ ಚೈತನ್ಯಶೀಲರಾಗಿ ಕೆಲಸಕಾರ್ಯಗಳಿಗೆ ತೊಡಗಿಸಿಕೊಳ್ಳಲೆಂದೇ. ಇದು ಸಹಜವಾಗಿ, ನೈಸರ್ಗಿಕವಾಗಿ, ಸಮತೋಲನ ಚಿತ್ತದಿಂದ ನಡೆದುಬಂದಿರುತ್ತದೆ. ಹೀಗಿದ್ದ ಮಾತ್ರಕ್ಕೆ ಎಲ್ಲಿಂದಲೋ ಬಂದು ತೂರುವ ಭವಿಷ್ಯವಾಣಿಗಳು ಮನುಷ್ಯರನ್ನು ಆತಂಕಕ್ಕೆ ಈಡುಮಾಡುತ್ತವೆ. ಆ ಕ್ಷಣಕ್ಕೆ ಅದೇ ಸತ್ಯ ಎಂಬ ಸಮ್ಮೋಹನಕ್ಕೆ ಮನಸ್ಸು ಒಳಗಾಗಿಬಿಡುತ್ತದೆ. ಹೀಗಾಗಿ ಈ ಭವಿಷ್ಯದ ಹುಚ್ಚುಹಿಡಿಸಿಕೊಂಡು ಅದರ ಹಿಂದೆಯೇ ಬೇತಾಳದ ಹಾಗೆ ಹಿಂಬಾಲಿಸತೊಡಗುತ್ತದೆ.

ಪ್ರತಿಯೊಂದು ಮನೆಯಲ್ಲೂ ಕನಿಷ್ಠದಿಂದ ಗರಿಷ್ಠದವರೆಗೂ ದೇವರ ಪಟಗಳದೇ ಅಲಂಕಾರ. ಹೀಗಿದ್ದಮೇಲೆ 'ಭವಿಷ್ಯವಾಣಿ' ಫಲ ಕುರಿತು ಚಿಂತಿಸುವವರ ಗುಂಪನ್ನು ಹುಡುಕಬೇಕಾಗುತ್ತದೆ. ನಿಸರ್ಗ ಕೊಡುವ ಗಾಳಿ, ಬೆಳಕು, ನೀರು, ಆಹಾರ, ಆರೋಗ್ಯ ಬಳಸಿಕೊಳ್ಳಲಾಗದೆ ಪ್ರತಿ ದಿನವೂ ಬಳಲುತ್ತಿದ್ದೇವೆ, ದೇವರ ಭಯದಿಂದ ಭವಿಷ್ಯದ ಹೆಜ್ಜೆ ಗುರುತಿಂದ. ಒಂಟಿಯಾಗಿರುವ ಮನುಷ್ಯ ಭವಿಷ್ಯ ಸಿಗದೇ ಕೊರಗುವವನಿಗೆ ಇದೆಲ್ಲ ಅರ್ಥವಾಗುತ್ತದೆ. ಹೊಟ್ಟೆತುಂಬಿ, ಐಶ್ವರ್ಯ ಹೆಚ್ಚಿದವರಿಗೆ ಹೋಮ ಪ್ರೇಮವಾಗಿ, ಹವನ ಹುಣ್ಣಿಮೆಯಾಗಿ ಸಂಭ್ರಮಿಸುತ್ತವೆ.

ಈ ಮಾಧ್ಯಮಗಳು ಮನುಷ್ಯರ ದೌರ್ಬಲ್ಯ ಅರಿತೇ ತುಂಬು ಸಂಪಾದನೆಗಾಗಿ ಇಂತಹ ಮಾರ್ಗ ಹಿಡಿದಿವೆ. ಅವುಗಳ ಮೂಲಗಳನ್ನು ಕಂಡುಕೊಂಡಿವೆ. ಸಾಮಾನ್ಯರಾಗಿ ದುಡಿದು ಬದುಕಿ ಹುಡುಕಿಬಂದವರಿಗೆ ಅಷ್ಟೋ ಇಷ್ಟೋ ಹೇಳಿ ಕಳಿಸುತ್ತಿದ್ದವರಿಗೆ ಇಂದು ರಾಜಮರ್ಯಾದೆ ನೀಡಿ ಮಾಧ್ಯಮಗಳು ಅವರನ್ನೆಲ್ಲ ಸಹಸ್ರಾರು ಗುರೂಜಿಗಳನ್ನಾಗಿ ಸೃಷ್ಟಿಸಿವೆ. ಇದು ಒಂದು ರೀತಿ, ಮಾಯನ್ನರ ಕ್ಯಾಲೆಂಡರ್ ಇದ್ದ ಹಾಗೆ. ಬಡತನದಲ್ಲಿ ಬೆಳೆದವರಿಗೆ ದೇವರು, ಭವಿಷ್ಯ, ಗುರೂಜಿ ಎಲ್ಲ ಗೊತ್ತು. ಕಷ್ಟಗಳ ಪರಿಚಯವಿರದವರು ಹೀಗೆ ಮೊರೆಹೋಗುವುದೇ ಹೆಚ್ಚು.

ಗಂಟೆಗಟ್ಟಲೆ ಸಮಯ ಹಾಳುಮಾಡುವುದನ್ನು ಬಿಟ್ಟು ಅದನ್ನೇ ಸಮಾಜ, ಸಂಸ್ಕೃತಿ, ಪರಿಸರ, ವೈಜ್ಞಾನಿಕತೆ, ಕಲೆ, ಸಾಹಿತ್ಯ, ಸಂಗೀತ, ಅಧ್ಯಯನಗಳ ಕಡೆ ಹೊರಳಿಸಿದರೆ ತಾಸಿನ ಸಮಯ ಮನಸ್ಸನ್ನು ಎಚ್ಚರಿಸಿ ಕ್ರಿಯಾಶೀಲಗೊಳಿಸುತ್ತದೆ. ಮೌಢ್ಯ ತಡೆಯಬೇಕಾದರೆ ನಮ್ಮ ಜವಾಬ್ದಾರಿಯ ಕೆಲಸಗಳನ್ನು ನಿರ್ವಹಿಸುತ್ತ ನಡೆದರೆ ಆಪತ್ತಿನ ಕಾಲ ದೂರವಾಗುತ್ತದೆ.

**ಅಕ್ಬರ್ ಸಿ. ಕಾಲಿಮಿರ್ಚಿ**
ಅಂಚೆ : ಭಾಗ್ಯನಗರ - ೫೮೩ ೨೩೮, ಕೊಪ್ಪಳ ತಾಲೂಕು, ಜಿಲ್ಲೆ

---

ಮಾಧ್ಯಮಗಳು ದೇಶದ ಸದಭಿರುಚಿಯ ಸೃಜನಶೀಲ ಜೀವಂತಿಕೆಯ ಪ್ರತೀಕ. ಇವು ಯಾವ ರೀತಿಯಲ್ಲಿ ಸಮಾಜವನ್ನು ಪ್ರಭಾವಿಸುವವೋ ಅದೇ ರೀತಿಯಲ್ಲಿ ಅಲ್ಲಿನ ಶ್ರೀಸಾಮಾನ್ಯರು ಪರಿಭಾವಿಸುವಂಥವರಾಗುತ್ತಾರೆ.

ಭಾರತದಂತಹ ಅಭಿವೃದ್ಧಿಶೀಲ, ಆಸೆಬುರುಕ ದೇಶಗಳಲ್ಲಿ ಜನರು ವಿವಿಧ ಭಾಗಗಳಲ್ಲಿ ಜರುಗುವ ವಿದ್ಯಮಾನಗಳನ್ನು ಮಾಧ್ಯಮದ ಮೂಲಕ ತಿಳಿದು ಹೌಹಾರುತ್ತಿರುವವರೇ ಹೆಚ್ಚು. ಅಂತೆಯೇ ನಮ್ಮಲ್ಲಿಯೂ ವಿವಿಧ ರಾಜಕೀಯದ ಕುಚೋದ್ಯ ಚದುರಂಗದಾಟಗಳ ಕುರಿತಂತೆ, ಪ್ರಳಯದ ಭೀಕರತೆ ಭೀತಿಯನ್ನು ಕುರಿತಂತೆ ನಮ್ಮ ಸುತ್ತಮುತ್ತ ಜರುಗುವ ಕಾಗಕ್ಕ-ಗುಬ್ಬಕ್ಕನ ಕಥೆಯಂತಹ ಕೆಲವು ನಂಬಿಕೆಗಳನ್ನು ಯಾವುದೇ ವಿವೇಚನೆ ಇಲ್ಲದೆ ಇದು ಸರಿಯೇನೋ ಎನ್ನುವಷ್ಟರಮಟ್ಟಿಗೆ ರಂಜನೀಯವಾಗಿ ಪತ್ರಿಕೆಗಳಲ್ಲಿ ನೀಡುವ ಹಾಗೆ ಮಾಧ್ಯಮಗಳಲ್ಲಿ ಪಸರಿಸುವುದು ಒಳ್ಳೆಯ ಬೆಳವಣಿಗೆಯಾಗಲಾರದು. ಬಿತ್ತರಿಸಬೇಕಾದ ಎಷ್ಟೋ ಅತ್ಯುಪಯುಕ್ತ ಸಂಗತಿಗಳಿರುವಾಗ ಬರೀ ಗಾಸಿಪ್‌ಗಳಿಗೆ ಒಳಗಾಗಬಹುದಾದ ಇಂತಹ ಸುದ್ದಿಗಳನ್ನು ಬಿತ್ತರಿಸಿ ಜನರಲ್ಲಿ ಭಯ-ಭೀತಿಯನ್ನು ತಂದೊಡ್ಡುವ ಪ್ರಯತ್ನಗಳಾಗುತ್ತಿರುವುದು ವಾಸ್ತವಾಂಶ.

ಮಾಧ್ಯಮಗಳೂ ಒಂದು ಸಾಮಾಜಿಕ ಜವಾಬ್ದಾರಿಪೂರಿತ ಹೊಣೆಗಾರಿಕೆಯನ್ನು ಹೊಂದಿದ್ದು, ಅದು ಸಮಾಜದ ಬಹುಸಂಖ್ಯಾತ ಜನರ ಒಳಿತಿಗೆ ಬಳಕೆಯಾಗಬೇಕೇ ವಿನಾ ಹೊಣೆಗೇಡಿತನಕ್ಕಲ್ಲ. ಮಾಧ್ಯಮಗಳು ಪ್ರಚಾರಪ್ರಿಯತೆಯನ್ನು ಬಯಸುವುದು ತಪ್ಪಲ್ಲವಾದರೂ ಅದು ತನ್ನ ಸಾಚಾತನವನ್ನು ಮೆರೆಯಬೇಕಾದದ್ದು ತನ್ನ ಆದ್ಯ ಕರ್ತವ್ಯವಾಗಬೇಕು. ಬದಲು, ತಾನು ಅಧಃಪತನಕ್ಕಿಳಿಯುವುದರ ಜೊತೆಗೆ ಸಮಾಜವನ್ನು ಅಧಃಪತನಕ್ಕೆ ತಳ್ಳುವ ಪರಿಸ್ಥಿತಿಗೆ ನೂಕಬಾರದು.



**ಆರ್. ಶಿವಶಂಕರ ಸೀಗೆಹಟ್ಟಿ**
ಸಹ ಶಿಕ್ಷಕರು, ಸರ್ಕಾರಿ ಪ್ರಾಥಮಿಕ ಶಾಲೆ, ತೋಳದಕೇರಿ,
ಮುಂಡರಗಿ ಅಂಚೆ, ದೇವದುರ್ಗ ತಾ, ರಾಯಚೂರು - ೫೮೪೧೧೧

# ಅತ್ಯಾಚಾರ : ಕಾರಣ ಮತ್ತು ಪರಿಹಾರ



## ಅತ್ಯಾಚಾರಗಳ ಹುತ್ತದ ಸುತ್ತ

ಬೆಳಿಗ್ಗೆ ಕಾಫಿ ಇಲ್ಲವೆ ಚಹ ಸವಿಯುತ್ತ ದಿನಪತ್ರಿಕೆಯನ್ನು ಓದುವ ಅಭ್ಯಾಸವಿರುವವರು ಈ ದಿನಗಳಲ್ಲಿ ಒಳ್ಳೆಯ ಸುದ್ದಿಗಾಗಿ ನಿರೀಕ್ಷೆಯಿರಿಸಿಕೊಂಡು ಏನಾದರೂ ಪತ್ರಿಕೆಯನ್ನು ಕೈಗೆತ್ತಿಕೊಂಡಿದ್ದೇ ಆದಲ್ಲಿ ಅದರಿಂದಾಗುವ ಪರಿಣಾಮ ಅಷ್ಟಿಷ್ಟಲ್ಲ. ಇತ್ತ ಕಾಫಿಯೂ ರುಚಿಸದೆ ಮನಸ್ಸೆಲ್ಲ ಭಾರವಾದ ಅನುಭವ ಆಗದೇ ಇರದು. ಏನೋ ಬೆಳಗ್ಗಿನ ಕಾಫಿಯನ್ನು ಬಿಡಲಾರದೆ ಕುಡಿದು ಮುಗಿಸಿ ನಮ್ಮ ಸಮಾಜದ ಬಗ್ಗೆ ಆತಂಕಕ್ಕೆ ಒಳಗಾಗುವುದರಲ್ಲಿ ಎರಡು ಮಾತಿಲ್ಲ. ಇನ್ನು ಟಿವಿಯ ಸುದ್ದಿ ಚಾನೆಲುಗಳನ್ನು ಬದಲಾಯಿಸುತ್ತಾ ಹೋದಂತೆಯೂ ಹೆಣ್ಣಿನ ಮೇಲೆ ಒಂದೊಂದು ಬಗೆಯ ಕ್ರೌರ್ಯದ ಅನಾವರಣವಾಗುತ್ತ ಸಂವೇದನಾಶೀಲರಾಗಿರುವ ವೀಕ್ಷಕರು ಮಾನಸಿಕವಾಗಿ ಜರ್ಜರಿತರಾಗುವುದು ಖಂಡಿತ.

ಮಹಿಳೆಯರ ಮೇಲಿನ ಕ್ರೌರ್ಯವು ಹೆಣ್ಣು ಭ್ರೂಣಹತ್ಯೆ, ಮರ್ಯಾದಾ ಹತ್ಯೆಗಳಿಂದ ಹಿಡಿದು ವರದಕ್ಷಿಣೆಗಾಗಿ ಕಿರುಕುಳ, ಅತ್ಯಾಚಾರ, ಆಸಿಡ್ ದಾಳಿ, ಬೆತ್ತಲೆ ಮೆರವಣಿಗೆಯಂತಹ ವಿವಿಧ ರೂಪಗಳನ್ನು ಪಡೆದು ಅವುಗಳ ಪ್ರಮಾಣವು ಹೆಚ್ಚಾಗುತ್ತಿರುವುದು ಮೇಲ್ನೋಟಕ್ಕೇ ಗೋಚರವಾಗುತ್ತಿದೆ. ಇತ್ತೀಚೆಗಂತೂ ಹೆಣ್ಣಿನ ಮೇಲಿನ ಅತ್ಯಾಚಾರವು ೯ ತಿಂಗಳ ಹಸುಳೆ, ಮಗಳು, ವಯೋವೃದ್ಧೆ, ತಾಯಿ ಎಂಬ ಯಾವ ಭೇದವೂ ಇಲ್ಲದಂತೆ ಯಾರನ್ನೂ ಬಿಡದ ಹಾಗೆ ಎಲ್ಲರ ಮೇಲೂ ನಡೆಯುತ್ತಿದೆ. ಹೊಟ್ಟೆಗೆ ಕೂಳಿಲ್ಲದಿದ್ದರೂ ಈ ಸಮಾಜದಲ್ಲಿ ಹಳ್ಳಿಯಿಂದ ದಿಲ್ಲಿಯವರೆಗೂ ಹೆಣ್ಣಿನ ಮೇಲಿನ ದೌರ್ಜನ್ಯವು ನಿರಂತರವಾಗಿ ಎಗ್ಗಿಲ್ಲದೆ ಸಾಗಿದೆ. ಕಳೆದ ದಶಕದಲ್ಲಿ ಈ ಪ್ರವೃತ್ತಿ ಹೆಚ್ಚಿರುವುದು ಅಂಕಿ-ಅಂಶಗಳಿಂದ ದೃಢಪಟ್ಟಿದೆಯಾದರೂ ಹಿಂದೇನೂ ಹೆಣ್ಣನ್ನು ಗೌರವಿಸುವ ಸಮಾಜದಲ್ಲಿ ನಾವು ಜೀವಿಸುತ್ತಿರಲಿಲ್ಲ ಎಂಬುದನ್ನು ಮರೆಯಲಾಗದು.

ಕಳೆದ ಡಿಸೆಂಬರ್ ೧೬ರಂದು ದೇಶದ ರಾಜಧಾನಿ ನವದೆಹಲಿಯಲ್ಲಿ ಖಾಸಗಿ ಬಸ್‌ನಲ್ಲಿ ಯುವತಿಯೊಬ್ಬಳ ಮೇಲೆ ಬರ್ಬರವಾಗಿ ಸಾಮೂಹಿಕ ಅತ್ಯಾಚಾರ ನಡೆಸಲಾಗಿ ಇದರಿಂದ ಅವಳು ಕೆಲವಾರು ದಿನಗಳ ಕಾಲ ಜೀವನ್ಮರಣದ ಮಧ್ಯೆ ಹೋರಾಟ ನಡೆಸಿ ಕೊನೆಗೆ ಸಾವನ್ನಪ್ಪಿದಳು. ಇದನ್ನು ಇಡೀ ರಾಷ್ಟ್ರವೇ ಒಕ್ಕೊರಲಿನಿಂದ ಪ್ರತಿಭಟಿಸಿದ್ದು ಒಂದು ಆಶಾದಾಯಕ ನಡೆಯೆಂದಷ್ಟೇ ಹೇಳಬಹುದು. ಆದರೆ ಇದೇ ಸಮಯದಲ್ಲಿ ದೇಶಾದ್ಯಂತ ಹಲವಾರು ಮುಗ್ಧ ಬಾಲಕಿಯರೂ, ಕೂಲಿ ಕಾರ್ಮಿಕರ ಹೆಣ್ಣುಮಕ್ಕಳೂ ಕೂಡ ಇದೇ ಘೋರ ಅಪರಾಧಕ್ಕೆ ಬಲಿಪಶುಗಳಾಗುತ್ತಿರುವುದು ದುರಂತವಾಗಿದೆ. ಈ ಪಟ್ಟಿ ಇಂದಿಗೂ ಮುಗಿದಿಲ್ಲ, ಕಡಿಮೆಯೂ ಆಗಿಲ್ಲ. ಅದೇನೇ ಇರಲಿ ದೆಹಲಿ ಘಟನೆಯ ಹಿನ್ನೆಲೆಯಲ್ಲಿ ಮಹಿಳಾ ಸಂಘಟನೆಗಳೂ ಸೇರಿದಂತೆ ಸಾರ್ವಜನಿಕ ಒತ್ತಡವು 'ಕುಂಭಕರ್ಣನಿದ್ರೆ'ಯಲ್ಲಿದ್ದ ಕೇಂದ್ರ ಸರ್ಕಾರವನ್ನು ಕಿವಿ ಹಿಂಡಿ ಎಚ್ಚರಿಸಿ ಮಹಿಳೆಯರ ಮೇಲಿನ ದೌರ್ಜನ್ಯಗಳಿಗೆ ಸಂಬಂಧಿಸಿದಂತೆ ಹಾಲಿ ಇರುವ ಕಾನೂನುಗಳಿಗೆ ಸೂಕ್ತ ತಿದ್ದುಪಡಿಗಳನ್ನು ಜಾರಿಗೊಳಿಸುವ ಸಲುವಾಗಿ ನ್ಯಾ॥ ವರ್ಮಾರವರ ಅಧ್ಯಕ್ಷತೆಯಲ್ಲಿ ಮೂರು ಜನರ ಸಮಿತಿಯೊಂದನ್ನು ರಚಿಸಲು ಕಾರಣವಾಗಿದೆ.

## ಪುರಾಣ ಐತಿಹ್ಯಗಳಲ್ಲಿ ಹೆಣ್ಣು ಮತ್ತು ಅತ್ಯಾಚಾರ

ಹೆಣ್ಣಿಗೆ 'ಅತ್ಯಾಚಾರ' ಎಂಬ ಹೆಸರಿನ ಅನ್ಯಾಯ ಇಂದು ನಿನ್ನೆಯದೇನಲ್ಲ ಎಂದು ನಮ್ಮ ಪುರಾಣ ಐತಿಹ್ಯಗಳೇ ಹೇಳುತ್ತವೆ. ನಮ್ಮ ದೇಶದ ಪುರಾಣ ಕಥೆಗಳಲ್ಲೂ ಇದನ್ನು ಬೇರೆ ಬೇರೆ ಹೆಸರುಗಳಿಂದ ಕಾಣಬಹುದು. ಉದಾಹರಣೆಗೆ, ರಾಮಾಯಣದಲ್ಲಿ ಗೌತಮ ಮಹರ್ಷಿ ಮತ್ತು ಅವನ ಪತ್ನಿ ಅಹಲ್ಯೆಯ ಕಥೆಯನ್ನು ತೆಗೆದುಕೊಂಡರೆ, ಇಂದ್ರನು ಅಹಲ್ಯೆಯ ಸೌಂದರ್ಯಕ್ಕೆ ಮಾರುಹೋಗಿ, ಗೌತಮ ಮಹರ್ಷಿ ತಪಸ್ಸಿನಲ್ಲಿ ನಿರತನಾಗಿದ್ದಾಗ ಗೌತಮನ ವೇಷದಲ್ಲಿ ಬಂದು ಅಹಲ್ಯೆಯ ಜೊತೆ ಮೋಸದಲ್ಲಿ ಕಾಮಕ್ರೀಡೆ ಆಡುತ್ತಾನೆ. ಇದರಿಂದ ಗೌತಮನ ತಪಸ್ಸಿಗೆ ಭಂಗವಾಗಿ, ಮುಗ್ಧ ಅಹಲ್ಯೆಗೆ ಕಲ್ಲಾಗುವಂತೆ ಮತ್ತು ಇಂದ್ರನಿಗೆ ಅಸಹ್ಯ ಮತ್ತು ಅಸಭ್ಯವಾದ ಶಾಪವನ್ನೀಯುತ್ತಾನೆ. ಆದರೆ ಕೆಲ ದೇವಾನುದೇವತೆಗಳ ಮಧ್ಯಸ್ಥಿಕೆಯಿಂದ ಇಂದ್ರನ ಮೇಲಿದ್ದ ತನ್ನ ಶಾಪವನ್ನು ಸಭ್ಯಗೊಳಿಸಿ ಅಹಲ್ಯೆಗೆ ಮಾತ್ರ ಶ್ರೀರಾಮ ಬಂದ ನಂತರವೇ ಶಾಪವಿಮೋಚನೆಯಾಗುವುದೆಂದು ಹೇಳುತ್ತಾನೆ. ಕಾಲಾನಂತರ ಶ್ರೀರಾಮನಿಂದ ಆಕೆಯ ಶಾಪವಿಮೋಚನೆಯೂ ನಡೆಯುತ್ತದೆ ಎಂಬುದು ಕಥೆ. ಆದರೆ ಇದರಲ್ಲಿ ಗಮನಿಸಬೇಕಾಗಿರುವ ಅಂಶವೆಂದರೆ ಇಂದ್ರ ಅತ್ಯಾಚಾರಿಯಾದರೂ ಬಲಿಪಶುವಾದವಳು ಮುಗ್ಧ ಅಹಲ್ಯೆ ಮತ್ತು ಅವಳೇ ಶಿಕ್ಷೆಗೆ ಒಳಪಡುವವಳೂ ಕೂಡ. ಅಂದಿನ ಕಾಲದಿಂದಲೂ ನಮ್ಮ ಸಮಾಜದಲ್ಲಿ ಮಹಿಳೆಯ ಸ್ಥಾನ ಹೀಗಿತ್ತು! ಇನ್ನೂ ಹೀಗೆ ನೂರಾರು ಅತ್ಯಾಚಾರ ಪ್ರಕರಣಗಳು ನಮ್ಮ ಭಾರತದ 'ಹೆಮ್ಮೆಯ' ಪುರಾಣ ಕಥೆಗಳಲ್ಲಿ ದೊರೆಯುತ್ತವೆ. ರಾಮನಿಂದಲೇ ಸೀತೆಗೆ ವನವಾಸ, ದ್ರೌಪದಿಯ ಮಾನಭಂಗ, ಮಂಡೋದರಿಯ ಹಿಂಸೆ, ಇತ್ಯಾದಿಗಳು.



## ವೈದಿಕಧರ್ಮ, ಸಮಾಜ ಮತ್ತು ಹೆಣ್ಣಿನ ಸ್ಥಾನ

ಸಾವಿರಾರು ವರ್ಷಗಳ ಹಿಂದೆ ವೈದಿಕಧರ್ಮವನ್ನು ಭಾರತೀಯ ಸಮಾಜದಲ್ಲಿ ಬೇರೂರಿಸಲು ಯತ್ನಿಸಿದ ಮನುಸ್ಮೃತಿ ಮುಂತಾದವು ಒಟ್ಟೊಟ್ಟಿಗೆಯೇ ಹೆಣ್ಣನ್ನು ಕೀಳಾಗಿ ಕಾಣುವ ಪ್ರವೃತ್ತಿಯನ್ನು ಧರ್ಮಶಾಸ್ತ್ರಗಳಲ್ಲಿ ಕ್ರೂರವಾಗಿಯೇ ಸೇರಿಸಿದ್ದವು. ಹೆಣ್ಣನ್ನು ಕೇವಲ ಸಂಭೋಗದ ವಸ್ತುವೆಂದು ಮಕ್ಕಳು ಹಡೆಯುವ ಯಂತ್ರಕ್ಕೆ ಸೀಮಿತಗೊಳಿಸಲ್ಪಟ್ಟು ಮನೆಯ ಉಸಾಬರಿ ನೋಡಿಕೊಂಡು ಗಂಡ-ಮಕ್ಕಳ ಸೇವೆ ಮಾಡುವವಳಾಗಿ ಪರಿಗಣಿಸಲ್ಪಟ್ಟಳು.

*ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ*
*ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ* (ಮ.ಸ್ಮೃ. ೯.೩)

ಎಂಬ ಮನುವಿನ ಶ್ಲೋಕವು ಸದಾ ಹೆಣ್ಣು ಯಾರಾದರೊಬ್ಬರ ಹಂಗಿನಲ್ಲಿರಬೇಕೆಂಬ ಸಂದೇಶ ನೀಡುತ್ತ ಮಹಿಳೆಯರ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದನ್ನು ತೋರಿಸುತ್ತದೆ. ಹಾಗೆಯೇ ಹೆಣ್ಣು ವಸ್ತುರೂಪಕ್ಕೆ ಇಳಿದಿದ್ದು ಸಹ ನಿಶ್ಚಿತವಾಗುತ್ತದೆ. ಅವಳಲ್ಲಿನ ಮಾನವ ಸಂವೇದನೆಗಳನ್ನು ಹತ್ತಿಕ್ಕಲಾಗಿ ಅವಳನ್ನು ಸರಕೆಂಬಂತೆ ಕಾಣಲಾಯಿತು. ಅವಳ ಶರೀರವನ್ನು 'ಪುರುಷ'ನಿಗೋಸ್ಕರ ಮುಡುಪಾಗಿಟ್ಟಿರುವಂತೆ ಸತಿಯಾಗಿ ಬದುಕಿರಬೇಕೆಂದು ನಿರೀಕ್ಷಿಸಲಾಯಿತು, ಸಾಮಾಜಿಕವಾಗಿ, ಧಾರ್ಮಿಕವಾಗಿ ಒತ್ತಾಯಿಸಲಾಯಿತು.

*ಪ್ರಜನಾರ್ಥಂ ಸ್ತ್ರಿಯಃ ಸೃಷ್ಟಾಃ ಸಂತಾನಾರ್ಥಂ ಚ ಮಾನವಃ*
*ತಸ್ಮಾತ್ ಸಾಧಾರಣೋ ಧರ್ಮಃ ಶ್ರುತೌ ಪತ್ನ್ಯಾ ಸಹ ಉದಿತಃ*
(ಮ.ಸ್ಮೃ. ೯.೯೬)

ಹೀಗೆ ಮಹಿಳೆಯನ್ನು ಸಂತಾನೋತ್ಪತ್ತಿಗೆಂದೇ ಸೃಷ್ಟಿಸಲಾಗಿದೆಯೆಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ. ಅಲ್ಲದೆ

**ಅರ್ಥಸ್ಯ ಸಂಚಯೇ ಏನಾಂ ವ್ಯಯೇ ಚೈವ ನಿಯೋಜಯೇತ್ ।**
**ಶೌಚೆ ಧರ್ಮೇಽನ್ನಪಯಾಂ ಚ ಪಾರಿಣಾ ಹ್ಯಸ್ಯವೇಕ್ಷಣೇ ॥**
(ಮ.ಸ್ಮೃ. ೯.೧೧)

ಎಂಬಲ್ಲಿ ಹೆಣ್ಣಿನ ಕೆಲಸಗಳನ್ನು ಗುರುತಿಸುತ್ತಾ ಮನೆ ಕೆಲಸಗಳಾದ ತೊಳೆಯುವುದು, ಬಳಿಯುವುದು, ಅಡುಗೆ ಕೆಲಸಗಳು, ಅವನ ಧಾರ್ಮಿಕ ಕೆಲಸಗಳಿಗೆ ಅಣಿ ಮಾಡಿಕೊಡುವುದು, ಇತ್ಯಾದಿ ಚಾಕರಿಗಳಿಗೆ ಅವಳನ್ನು ತನ್ನ ಗಂಡ ನಿಯೋಜಿಸಬೇಕೆಂದು ಹೇಳುತ್ತಾನೆ. ಇದು ಇನ್ನೂ ಹೀಗೆ ಹೆಣ್ಣಿನ ಸ್ವಾತಂತ್ರ್ಯಹರಣ ಮಾಡುತ್ತಲೇ ಸಾಗುತ್ತದೆ.

ಒಟ್ಟಿನಲ್ಲಿ ವೈದಿಕ ಸಂಸ್ಕೃತಿಯು ಅವಳನ್ನು ಗೃಹಬಂಧನಕ್ಕೆ ತಳ್ಳಿದ್ದಲ್ಲದೆ ಅವಳು ವಸ್ತುರೂಪಕ್ಕೆ ನಿಶ್ಚಿತಗೊಂಡಳು. ಮತ್ತೊಂದು ಕಡೆ ಸ್ವಚ್ಛಂದವಾಗಿ ಬದುಕು ನಡೆಸುತ್ತಿದ್ದ ಮಾನವ ಸಮೂಹ ಯಾವ ತಾರತಮ್ಯವೂ ಇಲ್ಲದೆ ವಿವಿಧ ಹಂತಗಳನ್ನು ದಾಟಿ ಪಶುಪಾಲನೆ, ಭೂಮಿಯ ಒಡೆತನವನ್ನು ಆರಂಭಿಸಿಕೊಂಡಾಗ 'ಆಸ್ತಿ' ಎಂಬ ಪರಿಕಲ್ಪನೆ ಮೂಡಿತು. ಉತ್ಪಾದನಾ ವಿಧಾನಗಳಲ್ಲಿ ಬದಲಾವಣೆಯಾಗಿ ಮಹಿಳೆಯು ಕಾರಣಾಂತರಗಳಿಂದ ಉತ್ಪಾದನೆಯಲ್ಲಿ ದೂರವುಳಿದಾಗ ಅವಳ ಶಕ್ತಿ ಸಾಮರ್ಥ್ಯಗಳನ್ನು

ಉಸಿರುಗಟ್ಟಿಸಿ ಕೊಲ್ಲಲಾಯಿತು. ಈ ವೈದಿಕ ಸಂಸ್ಕೃತಿಯ ವಿಶ್ಲೇಷಣೆಯೂ ಸಹ ಈ ಹಂತದಲ್ಲೆ ಬರುವುದು. ಅದಕ್ಕೇ ಫ್ರೆಂಚ್ ಬರಹಗಾರ್ತಿ ಸಿಮೋನ್ ಡಿ ಬುವಾ ಹೇಳುತ್ತಾಳೆ : ''ಯಾವ ಹೆಣ್ಣೂ ಹೆಣ್ಣಾಗಿ ಹುಟ್ಟುವುದಿಲ್ಲ, ಆದರೆ ಹೆಣ್ಣಾಗಿ ಬೆಳೆಯುತ್ತಾಳೆ'' ಎಂದು. ಹೀಗೆಯೇ ಸಮಾಜವು ನಿರಂತರವಾಗಿ ಪುರುಷಪ್ರಧಾನವಾಗಿ ಬೆಳೆದು ಹೆಣ್ಣನ್ನು ಭೋಗದ ವಸ್ತುವೆಂದು ನೋಡುತ್ತಾ ಬಂದಿತು. ಅದರ ವಿರುದ್ಧ ವಚನಕಾರರು, ವಚನಗಾರ್ತಿಯರು ಸೇರಿದಂತೆ ಸಾಕಷ್ಟು ಸಮಾಜ ಸುಧಾರಕರು ತಮ್ಮದೇ ರೀತಿಗಳಲ್ಲಿ ಹೋರಾಟ ನಡೆಸಿದ್ದಾರೆ.

**ಪುರುಷಾಧಿಪತ್ಯದ ಬಂಡವಾಳಶಾಹಿ ಸಮಾಜದಲ್ಲಿ ಹೆಣ್ಣು**

ಇಂದಿನ ಪುರುಷಾಧಿಪತ್ಯದ ಬಂಡವಾಳಶಾಹಿ ಸಮಾಜವು ಹೆಣ್ಣನ್ನು ಮಾರಾಟದ ಸರಕಿನ ಜೊತೆಗೆ ತಮ್ಮ ಲಾಭಕ್ಕೆ ಬೇಕಾದ ಅಗ್ಗದ ಕಚ್ಚಾವಸ್ತುವಂತೆಯೂ ಬಳಸಿಕೊಳ್ಳುತ್ತದೆ. ಇಲ್ಲಿ ಅವಳಿಗೆ ಎರಡು ವಿಧದ ಕ್ರೌರ್ಯ, ಆಂತರಿಕವಾದ ಪುರುಷಾಧಿಪತ್ಯ ಮತ್ತೊಂದು ಬಾಹ್ಯಜಗತ್ತಿನ ಬಂಡವಾಳಶಾಹಿ ವ್ಯವಸ್ಥೆ. ಈಗ ಮಹಿಳೆಯರು ಮತ್ತೊಮ್ಮೆ ಎಲ್ಲಾ ಕಟ್ಟುಪಾಡುಗಳನ್ನು ಮೀರಿ ಅವುಗಳ ವಿರುದ್ಧ ಸೆಟೆದು ನಿಂತು ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈಯುತ್ತಿದ್ದಾರೆ, ಸ್ವತಂತ್ರರಾಗುತ್ತಿದ್ದಾರೆ. ಮಹಿಳೆಯ ನೋವುಗಳನ್ನು, ಆಸೆ-ಆಕಾಂಕ್ಷೆಗಳನ್ನು, ಕಷ್ಟ-ಸುಖಗಳನ್ನು ನಿರ್ಲಕ್ಷಿಸುತ್ತಿದ್ದ ಪುರುಷಾಧಿಪತ್ಯದ ಸಮಾಜಕ್ಕೆ ಸವಾಲು ಒಡ್ಡಿ ಯಶಸ್ಸು ಕಾಣುತ್ತಿದ್ದಾರೆ. ಪುರುಷಪ್ರಧಾನತೆಗೆ ಅವರ ಪ್ರತಿರೋಧವನ್ನು ತಮ್ಮ ಕ್ರಿಯಾತ್ಮಕತೆಯ ಮೂಲಕ ಅಭಿವ್ಯಕ್ತಿಪಡಿಸುತ್ತಿದ್ದಾರೆ, ಸಮಾನತೆಯತ್ತ ದಾಪುಗಾಲು ಹಾಕಲು ಯತ್ನಿಸುತ್ತಿದ್ದಾರೆ.

**ಆದರೂ ಇತ್ತೀಚೆಗೆ ಅತ್ಯಾಚಾರಗಳು ಹೆಚ್ಚಾಗುತ್ತಿವೆ ಎಂದರೆ ನಾವು ಎಡವುತ್ತಿರುವುದೆಲ್ಲಿ?**

ನಮ್ಮ ಸಮಾಜದ ಈ ಎಲ್ಲಾ ಚರಿತ್ರೆಯನ್ನು ವಿಶ್ಲೇಷಿಸಿದ ನಂತರ ನಾವು ಆರೋಗ್ಯಕರವಾದ ಸಮಾಜದಲ್ಲಿ ವಾಸಿಸಬೇಕಾದರೆ ಮನುವಾದವನ್ನು ತ್ಯಜಿಸಬೇಕೆಂಬುದು ಸುಸ್ಪಷ್ಟ. ಆದರೆ ನಮ್ಮ ದೇಶದಲ್ಲಿ ಅದನ್ನೇ ಪೋಷಿಸಿಕೊಂಡು ಹೋಗುವಂತಹ ರೋಗಗ್ರಸ್ತ ಮನಸ್ಸುಗಳು ಇವೆ ಎಂಬುದೇ ದುರಂತ. ಆರ್‌ಎಸ್‌ಎಸ್‌ನ ಸರಸಂಘಸಂಚಾಲಕ ಮೋಹನ್ ಭಾಗವತ್ ಹೇಳುತ್ತಾರೆ : ಮಹಿಳೆಯರು ಮನೆಯಲ್ಲಿಯೇ ಇರಬೇಕು, ಹೊರಹೋದರೆ ಹೀಗೆ ಆಗುತ್ತದೆ ಎಂದು ! ಇವರು ಯಾವ ಯುಗದಲ್ಲಿ ವಾಸಿಸುತ್ತಿದ್ದಾರೋ ತಿಳಿಯದು ! ಮತ್ತೊಬ್ಬ ಭೂಪ ಅಸಾರಾಂ ಬಾಪು ಹೇಳುತ್ತಾನೆ: ಅತ್ಯಾಚಾರಕ್ಕೊಳಗಾದ ಯುವತಿ ''ಅಣ್ಣಾ, ಬಿಟ್ಟುಬಿಡು'' ಎಂದು ಅಂಗಲಾಚಿ ಅತ್ಯಾಚಾರಿಯನ್ನು ಬೇಡಿಕೊಳ್ಳಬೇಕಿತ್ತಂತೆ ! ಅವನೊಬ್ಬ ಸ್ವಾಮಿ ಅಂತೆ... ಇನ್ನು ನಮ್ಮ ಜನತೆ... ಅತ್ಯಾಚಾರಕ್ಕೊಳಗಾದ ಯುವತಿಯನ್ನು ದೆಹಲಿಯ ಕೊರೆವ ಚಳಿಯಲ್ಲಿ ಮೈಮೇಲೆ ಬಟ್ಟೆಯಿಲ್ಲದೆ ರಸ್ತೆಯಲ್ಲಿ ಬಿಸಾಡಿ ಹೋದಾಗ ಸುತ್ತುಗಟ್ಟಿ ನಿಂತು ನೋಡಿತೆ ವಿನಾ ಅಲ್ಪಸ್ವಲ್ಪ ಮಾನವೀಯತೆಯನ್ನಾದರೂ ಪ್ರದರ್ಶಿಸಿ ಒಂದು ತುಂಡು ಬಟ್ಟೆಯನ್ನು ಹಾಕಲಿಲ್ಲ. ಇನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವುದು ಬಹುದೂರದ ಕನಸಿನ ಮಾತೇ ಸರಿ! ಹೀಗಿದೆ ಒಟ್ಟಾರೆಯಾಗಿ ನಮ್ಮ ಸಮಾಜದ (ಅದರಲ್ಲೂ ನಗರಗಳ) ಸಂವೇದನಾಶೀಲತೆ...

ಮತ್ತೆ ಕೆಲವು ಕೇಸರಿ ಪಡೆಯ ಸಂಶೋಧಕರು (!) ಅತ್ಯಾಚಾರಗಳಿಗೆ ಕಾರಣ ಕಂಡು ಹಿಡಿಯುತ್ತಾ ಹೆಣ್ಣುಮಕ್ಕಳು ಕಡಿಮೆ ಬಟ್ಟೆ ತೊಡುವುದರಿಂದ ಅಪರಾಧಗಳು ನಡೆಯುತ್ತವೆ ಎನ್ನುತ್ತಾ ಭಾರತೀಯ ವಸ್ತ್ರಸಂಹಿತೆಯನ್ನು ಮಹಿಳೆಯರಿಗೆ ಜಾರಿ ಮಾಡಬೇಕೆನ್ನುತ್ತಾರೆ. ಆದರೆ ಅತಿ ಕಡಿಮೆ ಪೋಷಾಕು ಧರಿಸುವ ಇಂದಿನ ಬಾಲಿವುಡ್ ನಟಿಯರಲ್ಲಿ ಒಬ್ಬಾಕೆ ಯಾದರೂ ಎಂದಾದರೂ ತನ್ನ ಮೇಲೆ ಅತ್ಯಾಚಾರದ ಪ್ರಕರಣವನ್ನು ದಾಖಲಿಸಿದ್ದು ನಾ ಅರಿಯೆ ! ಅಲ್ಲದೆ ಹಸುಳೆಗಳನ್ನು, ಭಾರತೀಯ ಸೀರೆಯನ್ನೇ ಉಡುವ ಮಹಿಳೆಯ ಮೇಲೆ ಅತ್ಯಾಚಾರ ಮಾಡುವ ಅನಾಗರಿಕರ ವರ್ತನೆಗೆ ಇನ್ನಾವ ವಿಶ್ಲೇಷಣೆ ನೀಡುವರೋ ?



ಒಟ್ಟಿನಲ್ಲಿ ಪ್ರತಿಯೊಂದು ತಪ್ಪನ್ನು ಹೆಣ್ಣಿನ ತಲೆಗೆ ಸವರಿ ಯಾವ ಬದಲಾವಣೆಯೂ ಬೇಡವೆಂದು ಜನರನ್ನು ದಿಕ್ಕು ತಪ್ಪಿಸುವುದೇ ಇವರ ಉದ್ದೇಶ.

ಇನ್ನು ಹೆಣ್ಣಿನ ಕುರಿತು ತಾತ್ಸಾರವೇನೂ ಕಡಿಮೆ ಆಗಿಲ್ಲ. ಅದು ಕುಟುಂಬದಲ್ಲೇ ಪ್ರತಿಬಿಂಬಿತವಾಗುತ್ತದೆ. ಇಂತಹ ಮನಃಸ್ಥಿತಿಯ ಯುವಕರಲ್ಲಿ ಬೇರೆ ಹೆಣ್ಣಿನ ಬಗ್ಗೆ ಹೇಗೆ ತಾನೆ ಗೌರವ ಭಾವನೆ ಮೂಡಲು ಸಾಧ್ಯ ? ಮನೆಯೇ ಮೊದಲ ಪಾಠಶಾಲೆಯಲ್ಲವೇ ? ಮಾರ್ಕ್ಸ್‌ವಾದದ ಪಿತಾಮಹರಲ್ಲೊಬ್ಬರಾದ ಏಂಗೆಲ್ಸ್ ಹೇಳುವಂತೆ ಕುಟುಂಬ ವ್ಯವಸ್ಥೆಯು ಹೆಣ್ಣನ್ನು ಬಂಧಿಸಿ ಆಸ್ತಿ ಗಳಿಕೆಯ ಮುಂದೆ ಶೋಷಕ ಪ್ರಭುತ್ವಕ್ಕೆ ದಾರಿ ಮಾಡಿಕೊಡುತ್ತದೆ. ಅಂತಹ ಒಂದು ಬಂಡವಾಳಶಾಹಿ ಪ್ರಭುತ್ವವೇ ನಮ್ಮನ್ನು ಆಳುತ್ತಿರುವುದೆಂದು ನಮ್ಮ ಅರಿವು ಕೂಗಿ ಹೇಳುತ್ತದೆ.

ಅದೇ ಸರ್ಕಾರಗಳು ರಚಿಸಿರುವ ಇಂದಿನ ಪಠ್ಯಪುಸ್ತಕಗಳೂ ಕೂಡ ಲಿಂಗ ಸಂವೇದನಾ ಶೀಲತೆ-ರಹಿತವಾಗಿವೆ. ಉದಾಹರಣೆಗೆ, ಒಂದು ಚಿತ್ರ ತೋರಿಸಿ, ''ಇವಳು ಅಮ್ಮ. ಇವಳು ಅಡುಗೆ ಮಾಡುತ್ತಿರುವವಳು, ಮನೆಯಲ್ಲೇ ಇರುವವಳು. ಅವನು ಅಪ್ಪ, ಅವನು ಕಛೇರಿಗೆ ಹೋಗಿ ಮನೆಗೆ ಹಿಂದಿರುಗುವವನು'' ಎಂಬ ಪಾಠ ಹೇಳಿದರೆ ಮಕ್ಕಳ ಮನಸ್ಸಿನಲ್ಲಿ ತಾಯಿಯ ಸಾಮರ್ಥ್ಯದ ಬಗ್ಗೆ ಏನೆಂದು ಅಚ್ಚೊತ್ತುಳಿಯುವುದು? ಇವೆಲ್ಲವೂ ಬಹಳ ಗಹನವಾದ ವಿಷಯಗಳು. ಈ ಅತ್ಯಾಚಾರಕ್ಕೆ ಸಂಬಂಧಿಸಿದಂತೆ ಜಾತಿಯ ಪ್ರಶ್ನೆಯೂ ಬಹಳ ಮುಖ್ಯವಾಗುತ್ತದೆ. ಮಹಾರಾಷ್ಟ್ರದ ಖೈರ್ಲಾಂಜಿಯಲ್ಲಿ ನಡೆದ ದಲಿತ ಹೆಣ್ಣಿನ ಬೆತ್ತಲೆ ಮೆರವಣಿಗೆಯಿಂದ ಕೂಡಿದ ಸಾಮೂಹಿಕ ಅತ್ಯಾಚಾರದ ಪಾತಕ ಕೃತ್ಯವನ್ನು ಇಡೀ ಊರಿಗೆ ಊರೇ ಸೇರಿ ನಡೆಸಿದ್ದರೂ ಕೆಲ ವಿಭಾಗಗಳನ್ನು ಹೊರತುಪಡಿಸಿ ರಾಷ್ಟ್ರವು ದಿವ್ಯ ಮೌನ ವಹಿಸಿದ್ದನ್ನು ನಾವು ಮರೆಯುವಂತಿಲ್ಲ. ಆಕೆ ಸಮಾಜದಲ್ಲಿ ಮೇಲೆ ಬರಲು ಪ್ರಯತ್ನಿಸಿದ್ದೇ ಇದಕ್ಕೆ ಕಾರಣವಾಯಿತು ! ಇಂತಹ ಸಾವಿರಾರು ಬಾಲಕಿಯರು, ಯುವತಿಯರು ಮೇಲೇರಲು ಯತ್ನಿಸುತ್ತಿರುವಾಗಲೇ 'ಅತ್ಯಾಚಾರ' ಎಂಬ ಆಯುಧವನ್ನು ಪ್ರಯೋಗಿಸಿ ಅವರ ಕನಸನ್ನು ಭಗ್ನಗೊಳಿಸುವುದು ಈ ಅಸಮಾನ, ಪುರುಷಪ್ರಧಾನ ವ್ಯವಸ್ಥೆಯ ಕಪಟ ತಂತ್ರವಾಗಿದೆ.

**ಕೋಮುವಾದ ಮತ್ತು ಹೆಣ್ಣಿನ ಹಿಂಸೆ**

ಕೋಮುವಾದವು ಹೆಣ್ಣಿನ ಮೇಲೆ ಹೇಗೆ ತನ್ನ ಕೆಂಗಣ್ಣನ್ನು ಬಿಡುತ್ತದೆಂಬುದನ್ನು ಗುಜರಾತ್‌ನಲ್ಲಿ ಹತ್ತು ವರ್ಷಗಳ ಹಿಂದೆ ನಾವು ಕಂಡಿದ್ದೇವೆ. ಮುಸ್ಲಿಂ ಹೆಂಗಳೆಯರನ್ನು ಸಾಮೂಹಿಕವಾಗಿ ಅತ್ಯಾಚಾರಗೈದ ಮತೀಯವಾದಿಗಳು ಹೆಣ್ಣಿನ ಗರ್ಭವನ್ನೂ ಸೀಳಿದ ಘಟನೆಗಳು ಇನ್ನೂ ನಮ್ಮ ನೆನಪಿನಂಗಳದಿಂದ ಮಾಸಿಲ್ಲ. ಯಾವುದೇ ಕೋಮುಗಲಭೆಗೂ, ಜನಾಂಗೀಯ ಕಲಹಕ್ಕೂ, ಜಾತಿ ದ್ವೇಷಕ್ಕೂ ವೈರಿಗಳ ನಡುವೆ ಸಿಗುವುದು ಹೆಣ್ಣೆಂಬ ಅಸ್ತ್ರವೇ, ಅದೂ ಅತ್ಯಾಚಾರಕ್ಕೆ ! ಇದು ಇಂದಿನ ಪೊಲೀಸ್ ವ್ಯವಸ್ಥೆಯಲ್ಲೇನೂ ಇಲ್ಲವೆಂದಲ್ಲ. ಹೊಲವನ್ನು ಕಾಪಾಡಲು ಬೇಲಿ ಹಾಕಿದರೆ ಬೇಲಿಯೇ ಎದ್ದು ಹೊಲ ಮೇಯ್ದಂತೆ ಅನೇಕ ಅತ್ಯಾಚಾರ ಪ್ರಕರಣಗಳು ಪೊಲೀಸ್ ಠಾಣೆಯೊಳಗೇ ನಡೆಯುತ್ತವೆ ಎಂದು ಹೇಳದೇ ವಿಧಿಯಿಲ್ಲ. ಇದಕ್ಕೊಂದು ಸ್ಪಷ್ಟ ನಿದರ್ಶನವೆಂದರೆ ೧೯೭೨ರಲ್ಲಿ ಮಹಾರಾಷ್ಟ್ರದಲ್ಲಿ ನಡೆದ ಮಥುರಾಳ ಅತ್ಯಾಚಾರ ಪ್ರಕರಣ. ಆದರೆ ತದನಂತರ ಮಹಿಳಾ ಸಂಘಟನೆಗಳ ಸುದೀರ್ಘ ಹೋರಾಟದ ಫಲವಾಗಿ ಕೇಂದ್ರ ಸರ್ಕಾರ ರೇಪ್ ಕಾನೂನುಗಳಿಗೆ ತಿದ್ದುಪಡಿ ಮಾಡಿದ್ದು ಒಂದು ಚರಿತ್ರಾರ್ಹ ಘಟನೆಯೇ. ಆದರೆ ಪ್ರತಿ ಕಾನೂನಿನ ಪರಿಚ್ಛೇದದ ಹಿಂದೆಯೂ ಒಬ್ಬಳು ಮಥುರಾಳೋ ಒಬ್ಬಳು ಭಾನ್ವರಿ ದೇವಿಯೋ ಮತ್ತಾರೋ ಅತ್ಯಾಚಾರಕ್ಕೊಳಗಾದ ಹೆಣ್ಣು ಇರಬೇಕೆನ್ನುವುದು ಈ ಬಂಡವಾಳಶಾಹಿ ವ್ಯವಸ್ಥೆಯ ಕ್ರೌರ್ಯವಲ್ಲದೇ ಮತ್ತೇನು ?

ಕಳೆದ ಎರಡು ದಶಕಗಳಿಂದೀಚೆಗೆ ಬಂಡವಾಳಶಾಹಿ ವ್ಯವಸ್ಥೆಯು ಮಹಿಳೆಯನ್ನು ಹೆಚ್ಚು ಹೆಚ್ಚು ವ್ಯಾಪಾರೀಕರಣಗೊಳಿಸಿ ಅವಳ ಶರೀರವನ್ನು ಸೌಂದರ್ಯದ ಪ್ರತೀಕವೆಂಬಂತೆ ಬಿಂಬಿಸುತ್ತಿದೆ. ಸೌಂದರ್ಯ ಸ್ಪರ್ಧೆಗಳನ್ನು ಏರ್ಪಡಿಸಿ ಅದರಲ್ಲಿ ಯುವತಿಯರನ್ನು ಭಾಗ ವಹಿಸುವಂತೆ ಪ್ರಚೋದಿಸುವುದು, ಇವೆಲ್ಲವೂ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದಿಸುವ ಸೌಂದರ್ಯವರ್ಧಕಗಳಿಗೆ ಮಾರುಕಟ್ಟೆ ಹುಡುಕಲು ಮಾಡಲಾದ ಕುತಂತ್ರಗಳು. ಆದರೆ ಇದರಿಂದ ನಮ್ಮ ಯುವತಿಯರ ಶರೀರವನ್ನು ಬೆತ್ತಲೆಯಾಗಿ ಇಲ್ಲವೆ ಅರೆಬೆತ್ತಲೆಯಾಗಿ ಪ್ರದರ್ಶಿಸುವುದು ಹೆಚ್ಚು ಮುಕ್ತವಾಯಿತು. ಮಾರುಕಟ್ಟೆ ತಂತ್ರದಲ್ಲಿ ಪ್ರತಿಯೊಂದು ವಸ್ತುವಿನ ಮಾರಾಟಕ್ಕೂ ಜಾಹೀರಾತು ನೀಡಲು ಅರೆನಗ್ನ ಯುವತಿಯರನ್ನು ಬಳಸಿಕೊಳ್ಳುವುದು ಮಹಿಳೆಯರ ಮೇಲಿನ ಕ್ರೌರ್ಯವಾಗಿದೆ, ಅವರ ಘನತೆಯನ್ನು ಕುಗ್ಗಿಸುತ್ತಿದೆ.

ಖಾಸಗಿ ಟಿವಿ ಚಾನೆಲುಗಳು ಬಂದ ಮೇಲಂತೂ ಪೈಪೋಟಿ ಹೆಚ್ಚಾಗಿ ರಾತ್ರಿ ಊಟ ಇಲ್ಲದಿದ್ದರೂ ಸರಿ, ಅಪರಾಧ ಸುದ್ದಿಗಳನ್ನು ನೋಡದೆ ಸಾಮಾನ್ಯ ಜನ ಮಲಗದಂತೆ ಮಾಡಿವೆ. ಖಾಸಗೀಕರಣದ ಪರಿಣಾಮ ಉದ್ಯೋಗದ ಸ್ಥಳಗಳಲ್ಲಿ ಕೆಲಸದ ಒತ್ತಡದಿಂದ ವಿರಮಿಸಿಕೊಳ್ಳಲು ಮನೆಯಲ್ಲಿರುವ ವೇಳೆಯಲ್ಲಿ ಟಿವಿ ವಾಹಿನಿಗಳಲ್ಲಿ ಸಿನಿಮಾ ನೋಡಲು ಕುಳಿತುಕೊಳ್ಳುತ್ತಾರೆ. ಆಗ ವಯಸ್ಕರು ನೋಡುವಂತಹ ಸಿನಿಮಾಗಳನ್ನು ಸಣ್ಣ ಮನೆಯಲ್ಲಿ ವಿಧಿಯಿಲ್ಲದೆ ಎಲ್ಲರೊಡನೆ ಮಕ್ಕಳನ್ನೂ ಕೂಡಿಸಿಕೊಂಡು ನೋಡುವುದು, ಇವೆಲ್ಲವೂ ಮತ್ತೊಮ್ಮೆ ಸಮಾಜದಲ್ಲಿ ಹೆಣ್ಣಿನ ಮೇಲಿನ ಅಪರಾಧಗಳನ್ನು ಹೆಚ್ಚಿಸುತ್ತಿದೆ. ಟಿವಿ ಚಾನೆಲುಗಳು ಅಪರಾಧಗಳಿಗೆ ಪ್ರಚೋದನಕಾರಿಯಾಗಿವೆ. ಅಪರಾಧ ಸುದ್ದಿಗಳನ್ನು ಅಸಹ್ಯ ಬರುವಷ್ಟು

ಮರುಪ್ರಸಾರ ಮಾಡುತ್ತಲೇ ಇರುವುದು, ಹೇಗಾಯಿತು ಎಂಬ ಅವಶ್ಯವಿಲ್ಲದಷ್ಟು ಸಂಪೂರ್ಣ ವಿವರಗಳನ್ನು ಸುದ್ದಿ ವಾಹಿನಿಗಳು ನೀಡುತ್ತವೆ. ಇಷ್ಟು ತನಿಖೆ ನಮ್ಮ ಪೊಲೀಸ್ ಇಲಾಖೆ ಮಾಡಿಬಿಟ್ಟರೆ ಕ್ರಾಂತಿಯೇ ಆಗಿಬಿಟ್ಟೀತು !

ಸಮಾಜದಲ್ಲಿ ಮಹಿಳೆಯ ಸ್ಥಾನಪಲ್ಲಟವಾಗಿ ಸಾಮಾಜಿಕ ಏಣಿಯಲ್ಲಿ ಮೇಲೇರದಂತೆ ತಡೆಯಲು ಮಹಿಳೆಯ ಲೈಂಗಿಕತೆಯನ್ನು ದುರ್ಬಳಕೆ ಮಾಡಿಕೊಳ್ಳುತ್ತ ಅತ್ಯಾಚಾರದಂತಹ ಅಪರಾಧಗಳನ್ನು ಎಸಗುತ್ತಾ ಭಯವನ್ನು ಸೃಷ್ಟಿ ಮಾಡುವ ಪ್ರಯತ್ನವೂ ಆಗಿರಬಹುದು. ಆದರೆ ಮುನ್ನುಗ್ಗಿರುವ ಮಹಿಳೆಯರು ಇದಕ್ಕೆಲ್ಲಾ ಹೆದರಿ ಹಿಂದೆ ಸರಿಯುವ ಪ್ರಶ್ನೆಯೇ ಇಲ್ಲ. ಮಹಿಳೆಯರ ಮೇಲಿನ ದೌರ್ಜನ್ಯಗಳಿಗೆ ಸಂಬಂಧಿಸಿದಂತೆ ಮಾಡಲಾಗಿರುವ ಕಾನೂನುಗಳಾಗಲೀ ಅವುಗಳ ಜಾರಿಯಾಗಲೀ ಎಷ್ಟು ಅಪ್ರಾಮಾಣಿಕವಾಗಿವೆ ಎಂದರೆ ಸಂತ್ರಸ್ತ ಹೆಣ್ಣಿಗೆ ನ್ಯಾಯ ಸಿಗುವುದೇ ಅಪರೂಪ. ಅವೆಲ್ಲವೂ ಒಂದು ಸಂವೇದನಾಶೀಲ ಸಮೂಹದಿಂದ ಮಹಿಳಾಪ್ರಜ್ಞೆ ಉಳ್ಳವರಿಂದ ನಡೆದರೆ ಮಾತ್ರ ಮಹಿಳಾಪರವಾಗುವವು.

ಜಾಗತೀಕರಣದ ಪರಿಣಾಮ ಯುವಕರು ನಿರುದ್ಯೋಗದಿಂದ ತತ್ತರಿಸಿ, ಕೆಲವರು ಪುಢಾರಿಗಳಾಗಿ ಪರಿವರ್ತನೆಗೊಳ್ಳುತ್ತಿದ್ದಾರೆ. ಅವರಿಗೆ ಸರಿಯಾದ ಮಾರ್ಗದರ್ಶಿಗಳಿಲ್ಲದಂತಾಗಿ ಸೈಬರ್ ಕೆಫೆಯಲ್ಲಿ ಸೆಕ್ಸ್ ಸೈಟ್‌ಗಳನ್ನು ನೋಡುವುದು, ಇತ್ಯಾದಿಗಳನ್ನು ಮಾಡುತ್ತಿದ್ದಾರೆ. ಇಂತಹವರಿಗೆ ನಮ್ಮ ರಾಜ್ಯದ ವಿಧಾನಸಭೆಯಲ್ಲಿ ಮೊಬೈಲ್ ಮೂಲಕ ಪೋರ್ನ್ ಸೈಟ್ ನೋಡುವಾಗ ಸಿಕ್ಕಿಬಿದ್ದ ಸಚಿವರೇ ನಾಯಕರು... ನಮ್ಮ ರಾಜಕೀಯ ವ್ಯವಸ್ಥೆ ಹೀಗೆ ಅಧೋಗತಿಗೆ ಕುಸಿದಿರುವಾಗ ಸಮಾಜದಿಂದ ಏನನ್ನು ನಿರೀಕ್ಷಿಸುವುದು ?

**ಸಮಾನತೆಯ ಸಮಾಜದ ಕನಸಿನ ಸಾಕಾರಕ್ಕಾಗಿ...**

ಬಹು ದೂರ ಪಯಣಿಸಬೇಕಾಗಿದೆ. ಆ ನಿಟ್ಟಿನಲ್ಲಿ ಮಹಿಳೆಯರ ಮೇಲಿನ ಇಂತಹ ಅಪರಾಧಗಳನ್ನು ತಡೆದು ನಮ್ಮ ಸಮಾನತೆಯ ಸಮಾಜದ ಕನಸನ್ನು ಸಾಕಾರಗೊಳಿಸಲು ಈ ಹಂತದಲ್ಲಿ ಕೆಳಗಿನ ಕೆಲವು ಕೆಲಸಗಳನ್ನು ಈ ಸಮಾಜ ಮಾಡಲೇಬೇಕಾಗಿದೆ :

ಮೊಟ್ಟಮೊದಲನೆಯದಾಗಿ, ಹೆಣ್ಣಿನ ಬಗ್ಗೆ ಪ್ರೀತಿ, ಆದರಗಳನ್ನು, ಸಮಾನತೆಯ ಮನೋಭಾವವನ್ನು ಬೆಳೆಸಿಕೊಳ್ಳುವುದು. ಅವಳೇನೂ ದೇವತೆಯಾಗಬೇಕಾಗಿಲ್ಲ, ಅವಳು ಎಲ್ಲರಂತೆಯೇ ಮಿದುಳು, ಹೃದಯ, ಇತರೆ ಅಂಗಾಂಗಗಳಿರುವ ಮಾನವಜೀವಿ ಎಂದು ಪರಿಗಣಿಸಿದರೆ ಸಾಕು. ಅವಳ ಆಸೆ ಆಕಾಂಕ್ಷೆಗಳನ್ನು ಗೌರವಿಸುವುದು. ಉದ್ಯೋಗ ಕೇವಲ ಪುರುಷ ಲಕ್ಷಣ ಅಲ್ಲ, ಉದ್ಯೋಗವು ಮನುಷ್ಯ ಲಕ್ಷಣವೆಂದು ಸರಿಯಾಗಿ ಅರ್ಥೈಸಿ ಮಹಿಳೆಗೆ ಉದ್ಯೋಗದಲ್ಲಿ, ಶಿಕ್ಷಣ ಕ್ಷೇತ್ರಗಳಲ್ಲಿ ಸಮಾನ ಅವಕಾಶ ನೀಡುವುದು. ಹಾಗೆಯೇ ಸರ್ಕಾರ ಖಾಸಗೀಕರಣವನ್ನು ನಿಲ್ಲಿಸಿ ಯುವಕರಿಗೆ ಉದ್ಯೋಗ ಭರವಸೆ ನೀಡಿದರೆ ಇಂತಹ ಅಪರಾಧಗಳನ್ನು ಕಡಿಮೆಗೊಳಿಸಬಹುದು. ಖಾಸಗಿ ಟಿವಿ ಚಾನೆಲುಗಳ, ಸಿನಿಮಾ ಮತ್ತು ಇತರೆ ಸಮೂಹ ಮಾಧ್ಯಮಗಳ ನಿಯಂತ್ರಣವನ್ನು ಸಮರ್ಪಕವಾಗಿ ಸರ್ಕಾರದ ಸಂಸ್ಥೆ ನಡೆಸಬೇಕು. ಶಿಕ್ಷಣ ವ್ಯವಸ್ಥೆಯನ್ನು ಪುರೋಗಾಮಿಯಾಗಿಸಬೇಕು. ಶಿಕ್ಷಣದಲ್ಲಿ ಪ್ರತಿಗಾಮಿ ಲಕ್ಷಣಗಳಿರುವ ಯಾವುದೇ ಅಂಶವನ್ನೂ ಕಿತ್ತೊಗೆಯಬೇಕು. ಹೆಣ್ಣು ಮತ್ತು ಗಂಡು ಮಕ್ಕಳನ್ನು ಒಟ್ಟಿಗೆ ಬೆಳೆಯಲು ಬಿಡಬೇಕು. ಅವರಿಗೆ ಸೂಕ್ತ ವಯಸ್ಸಿನಲ್ಲಿ ಸಮರ್ಪಕವಾಗಿ ವೈಜ್ಞಾನಿಕವಾಗಿ ಲೈಂಗಿಕ ಶಿಕ್ಷಣ ನೀಡಬೇಕು. ಸೌಂದರ್ಯ ಸ್ಪರ್ಧೆಗಳನ್ನು ನಿಲ್ಲಿಸಿ ಮಹಿಳೆಯರನ್ನು ಅವಮಾನಿಸುವ ಜಾಹೀರಾತುಗಳನ್ನು ನಿಷೇಧಿಸಬೇಕು. ಮಹಿಳೆಯರ ಮೇಲಿನ ಅಪರಾಧಗಳನ್ನು ನಿರ್ವಹಿಸುವಾಗ ಪೊಲೀಸ್ ಇಲಾಖೆಯಾಗಲಿ, ನ್ಯಾಯಾಲಯವಾಗಲೀ, ವೈದ್ಯರಾಗಲೀ ಲಿಂಗ ಸಂವೇದನಾಶೀಲರಾಗಿ ಕಾರ್ಯಪ್ರವೃತ್ತರಾಗಬೇಕು. ಇಡೀ ಸಮಾಜ ಸ್ವಾರ್ಥರಹಿತವಾಗಿ ಮಾನವೀಯತೆಯ ನೆಲೆಯಲ್ಲಿ ಕೆಲಸ ಮಾಡಬೇಕು. ಕೊನೆಯದಾಗಿ ಶಿಕ್ಷೆಗೆ ಸಂಬಂಧಿಸಿದಂತೆ ವಿಚಾರಣೆಗಳು ತ್ವರಿತಗತಿಯಲ್ಲಿ ನಡೆದು ನ್ಯಾಯ ಶೀಘ್ರವಾಗಿ ಸಿಗಬೇಕು. ಗಲ್ಲು ಶಿಕ್ಷೆಯಿಂದ ಯಾವ ಪ್ರಯೋಜನ ಲಭಿಸಲಾರದು. ಈಗಾಗಲೇ ಗಲ್ಲು ಶಿಕ್ಷೆ ಜಾರಿ ಮಾಡಿರುವ ಪ್ರಕರಣಗಳಿಂದಾಗಿ ಸಮಾಜದಲ್ಲಿ ಅಪರಾಧಗಳು ಮರುಕಳಿಸಿಲ್ಲವೇ ಎಂಬ ಪ್ರಶ್ನೆ ಹಾಕಿಕೊಂಡರೆ ಇಲ್ಲ ಎಂಬ ಉತ್ತರ ಸಿಗುವುದಿಲ್ಲ. ಆದ್ದರಿಂದ ಅಪರಾಧಿಗಳನ್ನು ಜೀವಾವಧಿ ಶಿಕ್ಷೆಗೆ ಗುರಿಪಡಿಸುವುದು ಸೂಕ್ತವಾಗುವುದು. ಆದರೆ ಜೀವಿತಾವಧಿ ಎಂದರೆ ರಾಮನ ವನವಾಸದ ಹಾಗಲ್ಲ! ಅಕ್ಷರಶಃ ಜೀವಾವಧಿಯೇ ಆಗಿರಬೇಕು. ಅವನನ್ನು ಒಬ್ಬಂಟಿಯಾಗಿ ಸೆರೆಮನೆಯ ಕೋಣೆಯಲ್ಲಿ ಬಿಟ್ಟರೆ ಅದಕ್ಕಿಂತ ಬೇರೆ ಶಿಕ್ಷೆಯಿರುವುದಿಲ್ಲ. ಏಕಾಂಗಿಯಾಗಿದ್ದಾಗ ಮನಃಪರಿವರ್ತನೆಯಾಗಿ ಪಶ್ಚಾತ್ತಾಪ ಆದರೂ ಆದೀತು... ಆದರೆ ಇಂದು ಸೆರೆಮನೆಯ ಕೋಣೆಗಳೆಲ್ಲ ರಾಜಕಾರಣಿಗಳಿಗೆ ಬೇಕಾಗಿದೆಯಲ್ಲಾ! ಅಪರಾಧಿಯನ್ನು ನಿರ್ವೀರ್ಯೀಕರಣಗೊಳಿಸುವುದು ಎಂಬುದು ಅನಾಗರಿಕ ವರ್ತನೆಯಾಗುತ್ತದೆ. ನಾವು ನಾಗರಿಕ ಸಮಾಜದಲ್ಲಿ ಜೀವಿಸುತ್ತಿದ್ದೇವೆ ಎಂಬುದನ್ನು ಅದರ ಪ್ರತಿಪಾದಕರಿಗೆ ತಿಳಿಸಿ ಹೇಳಬೇಕಾಗಿದೆ. ನಮ್ಮ ಸಂಸದರಲ್ಲಿ ಅತಿ ಹೆಚ್ಚು ಅತ್ಯಾಚಾರಿಗಳು ಇದ್ದಾರೆಂದರೆ ಈ ಬೃಹತ್ ಪ್ರಜಾಪ್ರಭುತ್ವಕ್ಕೇ ಅವಮಾನವಾದಂತೆ...

ಹೆಣ್ಣಿನ ಮೇಲಿನ ಅಪರಾಧವು ಕೇವಲ ಒಂದು ಅಪರಾಧ ಮಾತ್ರವಲ್ಲ, ಪುರುಷ ಪ್ರಧಾನ ಸಮಾಜವು ತಲತಲಾಂತರಗಳಿಂದ ಆಸ್ತಿಯ ನೆಪದಲ್ಲಿ ಅವಳನ್ನು ತಳ್ಳಲಾಗಿದ್ದ ಕತ್ತಲ ಕೂಪದಿಂದ ಹೊರಬರಲು ಪ್ರಯತ್ನಿಸುತ್ತಿರುವಾಗ ಹೊರಬರುತ್ತಿರುವ ಪ್ರತಿಕ್ರಿಯೆಯೂ ಆಗಿದೆ. ಇದನ್ನು ಮಹಿಳಾ ಸಮುದಾಯ ಮತ್ತು ಲಿಂಗ ಸೂಕ್ಷ್ಮತೆಯುಳ್ಳ, ಸಮಾನತೆಯನ್ನು ಬಯಸುವ, ದುಡಿಮೆಯ ಮಹತ್ವ ಅರಿತಿರುವ, ಒಡನಾಡಿಗಳಾದ ಪುರುಷ ಸಮುದಾಯವು ಒಟ್ಟಾಗಿ ಎದುರಿಸಿ ಸಮಸಮಾಜದತ್ತ ಸಾಗಲು ಹೋರಾಡಬೇಕಾಗಿದೆ.

**ಜ್ಯೋತಿ ಎ.**
ಎಸ್-೩, ಅನಂತರತ್ನ ರೆಸಿಡೆನ್ಸಿ, ನಂ. ೩೭, ೧೬ನೇ ಮುಖ್ಯರಸ್ತೆ
ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು - ೫೬೦ ೦೪೦

## ಅತ್ಯಾಚಾರವೆಂಬ ಯುದ್ಧತಂತ್ರ

ಜೀವ ತಲ್ಲಣಿಸುತ್ತಿದೆ. ಯುದ್ಧ ಭೂಮಿಯೊಳಗೆ ದಿಕ್ಕೆಟ್ಟು ನಿಂತ ಹಾಗಿದೆ. ಇರಿಯುತ್ತಿರೋ ಬಾಣ ಎದುರಿನಿಂದ ಬರುತ್ತಿದೆಯೋ ಪಕ್ಕದಿಂದಲೇ ಪಕ್ಕೆ ತಿವಿಯುತ್ತಿದೆಯೋ ತಿಳಿಯಲಾಗದ ದಿಗ್ಭ್ರಮೆ. ಕಡೆಗಳಿಗೆಯಲ್ಲಿ ಪೂರ್ವಾಪರವೆಲ್ಲ ನೆನಪಾಗುವಂತೆ ಹೆಣ್ಣು ಜೀವಗಳ ಮೇಲಾಗುತ್ತಿರುವ ಹಲ್ಲೆಯ ಬಹುರೂಪಗಳು ಪ್ರಜ್ಞೆಯನ್ನು ಆಕ್ರಮಿಸಿಕೊಳ್ಳುತ್ತಿವೆ.

ದೆಹಲಿಯಲ್ಲಾದ ಘಟನೆ ಮೊದಲನೆಯದೂ ಅಲ್ಲ, ಕಡೆಯದೂ ಅಲ್ಲ. ಆದರೆ ಆ ಘಟನೆ ಯೊಳಗಿನ ಕ್ರೌರ್ಯ ಕೇಂದ್ರಪ್ರಜ್ಞೆಯಾಗಿ ದೇಶದ ಮನಸ್ಸುಗಳನ್ನು ಕಲಕಿದೆ. ಕಳೆದ ಕೆಲ ತಿಂಗಳುಗಳಿಂದ ಸರಣಿ ಸರಣಿಯಾಗಿ ವರದಿಯಾಗುತ್ತಿರುವ ದೌರ್ಜನ್ಯಗಳನ್ನು ನೋಡಿದರೆ ಸಮಾಜದೊಳಗಿನಿಂದಲೇ ಹೆಣ್ಣನ್ನು ವಿರೋಧಿಸುವ ಯುದ್ಧೋನ್ಮಾದದ ನಶೆ ಹರಡುತ್ತಿದ್ದಂತಿದೆ.

ಇವು ಹೆಣ್ಣನ್ನು ಸಹಜೀವಿಯಾಗಿ ಸಹಚರಳಾಗಿ ನೋಡಲಾಗದ ಸಾಮಾಜಿಕತೆಯ ವಿಕಾರ ಫಲಗಳು. ಹೆಣ್ಣನ್ನು ಭೋಗದ ವಸ್ತುವಾಗಿ ನೋಡುವ ಪುರುಷ ಪ್ರಾಧಾನ್ಯತೆಯ ಆದಿಮ ರೋಗ. ಈ ಕೀಚಕ ಪ್ರವೃತ್ತಿ ಪುರಾಣ, ಇತಿಹಾಸ, ಕಾವ್ಯ, ಜನಪದ ಸಾಹಿತ್ಯ, ಭಾಷಿಕ ರಚನೆ, ಆದರ್ಶ, ಸಂಪ್ರದಾಯಗಳ ಹೊರಮೈಯನ್ನು ಕೆದರಿದರೆ ಕಣ್ಣಿಗೆ ಹತ್ತುತ್ತದೆ. ಹೆಣ್ಣೆಂದರೆ ದೇಹ. ಆ ದೇಹದ ಅಸ್ತಿತ್ವವಿರುವುದು ಕುಟುಂಬದ ಅವಶ್ಯಕತೆಗಳ ಪೂರೈಕೆಯ ಸೇವೆಗಾಗಿ, ಪುರುಷನ ಭೋಗಕ್ಕಾಗಿ ಮತ್ತು ಸಂತಾನದ ಮುಂದುವರಿಕೆಗಾಗಿ ಎಂಬ ನಿಲುವು ರೂಪಾಂತರಗೊಂಡು ಇಂದಿಗೂ ಪ್ರಬಲವಾಗೇ ಇದೆ. ಹೆಣ್ಣನ್ನು ಸ್ತುತಿಸುವ ದೈವೀಕರಿಸುವ ಎಲ್ಲವೂ ಇದೇ ಉದ್ದೇಶ ಸಾಧನೆಯ ಕಣ್ಕಟ್ಟುಗಳು. ಇಂತಹ ಮೇಲು-ಕೀಳಿನ ಆಲೋಚನಾ ವಿಧಾನ ಗಂಡಸಿಗೆ ಅನಗತ್ಯ ಭ್ರಮೆಗಳನ್ನು, ಒಡೆತನದ ಅಹಂಭಾವವನ್ನು ನೀಡುತ್ತದೆ. ಈ ಭ್ರಮೆಯನ್ನು ಸಲುಹಿಕೊಳ್ಳಲು ಹೆಣ್ಣನ್ನು ಪ್ರಯೋಗದ ವಸ್ತುವಾಗಿಸಿಕೊಳ್ಳಲಾಗುತ್ತದೆ. ಈ ಸ್ಥಾಪಿತ ಚೌಕಟ್ಟಿಗೆ ಧಕ್ಕೆಯಾಗುವ ಭಯದಲ್ಲಿ ಬಲಾತ್ಕಾರಗಳು ದೌರ್ಜನ್ಯಗಳು ನಡೆಯುತ್ತವೆ.

ಶಿಕ್ಷಣ ಮತ್ತು ಉದ್ಯೋಗಾವಕಾಶಗಳ ಕಾರಣದಿಂದ ಸಾಮಾಜಿಕ ಆರ್ಥಿಕ ಕ್ಷೇತ್ರದಲ್ಲಿ ಗಣನೀಯ ಪಲ್ಲಟಗಳು ಸಂಭವಿಸಿವೆ. ಹೆಣ್ಣು ಮಕ್ಕಳು ಎದುರಾಗುತ್ತಿರುವ ಅಡೆತಡೆಗಳನ್ನು ಖಾಸಗಿಯಾಗಿಯೂ ಪರಿಹರಿಸಿಕೊಳ್ಳುತ್ತ ಮುನುಗ್ಗುತ್ತಿದ್ದಾರೆ. ಇದು ಪಿತೃ ವ್ಯವಸ್ಥೆಯಲ್ಲಿ ಅಸಹನೆಯನ್ನು ಹುಟ್ಟಿಸಿದೆ. ಪರಂಪರಾಗತವಾಗಿದ್ದ ಅಧಿಕಾರವಲಯಗಳಿಂದ ಸ್ಥಳಾಂತರಗೊಳ್ಳಬೇಕಾದ ಭಯ ಕೂಡ ಇಂತಹ ವಿಕೃತಿಗಳಿಗೆ ಮುಖ್ಯ ಕಾರಣವಾಗಿದೆ. ಹೆಣ್ಣನ್ನು ಭಯ ಭೀತಗೊಳಿಸುವ ಮತ್ತೆ ಸಾಂಪ್ರದಾಯಿಕ ಚೌಕಟ್ಟಿನೊಳಗೆ ದೂಡುವ ಯುದ್ಧತಂತ್ರವಿದು. ಅತ್ಯಾಚಾರ ಪ್ರಕರಣಗಳಿಗೆ ಮೂಲಭೂತವಾದಿ ಮನಸ್ಸುಗಳು ಪ್ರತಿಕ್ರಿಯಿಸುವ ರೀತಿಯಲ್ಲಿಯೇ ಇದಕ್ಕೆ ಪುರಾವೆಗಳಿವೆ.



ಅವರು ಧರ್ಮ ಆದರ್ಶ ಸಂಸ್ಕೃತಿಗಳ ಮರೆಯಲ್ಲಿ ಆರ್ಯನಾರಿ ಪರಿಕಲ್ಪನೆಯನ್ನು ನವೀಕರಣಗೊಳಿಸುತ್ತ ಚಲಾವಣೆಗೆ ತರುತ್ತಾರೆ. ಇದು ಸಾಮಾಜಿಕ ಸಂಘರ್ಷವನ್ನು ಹುಟ್ಟು ಹಾಕುತ್ತದೆ. ಆಗ ಅಪಮಾನ, ಮರ್ಯಾದಾ ಹತ್ಯೆ, ಆಸಿಡ್ ದಾಳಿ, ಅತ್ಯಾಚಾರಗಳಂತಹ ಹಿಂಸೆಗಳು ಸಾಮಾಜಿಕ ಸಹಜತೆಯಾಗಿಬಿಡುತ್ತವೆ. ಒಂದು ವರ್ಷದ ಮಗುವನ್ನು ಸಿಗರೇಟಿನಿಂದ ಸುಟ್ಟು ಸುಟ್ಟು ಹಿಂಸಿಸುವ ಅಪ್ಪ , ಮಗಳ ಮೇಲೆ ಅತ್ಯಾಚಾರ ಮಾಡುವ ಅಪ್ಪ ... ಇವರೆಲ್ಲ ಇಂತಹದೇ ವ್ಯವಸ್ಥೆಯ ಉತ್ಪನ್ನಗಳ, ಹೆಣ್ಣು ಜೀವವನ್ನು ನೋಡುವ ನಿಕೃಷ್ಟ ಮಾನಸಿಕತೆಯಿದು. ಘಟನೆಗಳನ್ನು ಪ್ರತ್ಯೇಕವಾಗಿ ನೋಡುವಾಗ ಅಪರಾಧಿ ವಿಕಾರಿಯಾಗಿಯೂ, ಮನೋನ್ಮಾದಿಯಾಗಿಯೂ, ಕುಡಿತದ ಅಮಲಿನಲ್ಲಿ ಇದ್ದವನಾಗಿಯೂ ಕಾಣಬಹುದು. ಆದರೆ ಇಂತಹ ಮಾನಸಿಕ ಸ್ಥಿತಿ ಕೂಡ ಸಾಮಾಜಿಕ ಸಂಗತಿಗಳಿಂದ ರೂಪಗೊಂಡಿದ್ದೇ ಆಗಿರುತ್ತದೆ.

ಭಾರತದ ಸಂದರ್ಭದಲ್ಲಿ ಹೆಣ್ಣನ್ನು ಬಗ್ಗುಬಡಿಯಲು ಪ್ರಭುತ್ವ ಪ್ರಯೋಗಿಸುತ್ತ ಬಂದ ಪ್ರಬಲ ಆಯುಧ ಅತ್ಯಾಚಾರ. ಪ್ರಭುತ್ವ ಸರ್ಕಾರವಾಗಿರಬಹುದು, ಊರಿನ ಗೌಡನಿರಬಹುದು, ಧಾರ್ಮಿಕ ಮುಖಂಡನಿರಬಹುದು. ಸರ್ಕಾರಿ-ಖಾಸಗಿ ಸೆಕ್ಟರ್‌ಗಳ ಬಾಸ್ ಇರಬಹುದು. ಮೇಲ್ಜಾತಿ ಮೇಲ್ವರ್ಗಗಳ ಯಾಜಮಾನ್ಯತೆ ಇರಬಹುದು. ಭಾರತದ ಸಾಮಾಜಿಕ ರಚನೆಯಲ್ಲಿ ಅತ್ಯಾಚಾರಕ್ಕೊಳಗಾಗುವ ಹೆಣ್ಣು ನಿರಂತರ ಹಿಂಸೆಯನ್ನು ಅಪಮಾನವನ್ನು ಅನುಭವಿಸಬೇಕಾಗುವುದರಿಂದ ಸಂಪೂರ್ಣ ನೆಲಕಚ್ಚುತ್ತಾಳೆ ಎಂಬುದು ಇಂತಹ ಹಲ್ಲೆಯ ಉದ್ದೇಶ. ಹೆಣ್ಣಿನ ದನಿಯನ್ನು ಅಡಗಿಸುವ, ಪ್ರತಿರೋಧವನ್ನು ನಿರ್ನಾಮಮಾಡುವ ದಮನಕಾರಿ ಸಂಹಿತೆಯಿದು, ಖೈರ್ಲಾಂಜಿ, ಗುಜರಾತ್, ದೆಹಲಿ... ಈ ಎಲ್ಲವೂ ಒಂದೇ ಕೇಂದ್ರದ ವಿಭಿನ್ನ ಚಲನೆಗಳು, ಅಪ್ರಾಪ್ತ ಬಾಲಕಿಯರ ಮೇಲೆ ಕುಟುಂಬ ಮತ್ತು ಊರಿನ ಸರಹದ್ದಿನೊಳಗೇ ನಡೆವ ದೌರ್ಜನ್ಯಗಳಿಗೆ ಕುಟುಂಬ ಕಲಹ, ಕನ್ಯಾಸಂಭೋಗದಿಂದ ಲೈಂಗಿಕ ಕಾಯಿಲೆಗಳು ವಾಸಿಯಾಗುತ್ತದೆಂಬ ಮೂಢನಂಬಿಕೆ, ಲೈಂಗಿಕ ವಿಕೃತಿಗಳು ಕಾರಣವಾಗಿರುತ್ತವೆ. ತೀರ ಎಳವೆಯಲ್ಲಿ ಇಂತಹ ಕ್ರೌರ್ಯಕ್ಕೆ ಒಳಗಾದ ಮಗು ಎದುರಿಸುವ ದೈಹಿಕ, ಮಾನಸಿಕ, ಸಾಮಾಜಿಕ ಹಿಂಸೆ ಅಗಣ್ಯ ಮತ್ತು ದೀರ್ಘಕಾಲೀನ.

ದೆಹಲಿಯ ಘಟನೆಯ ನಂತರ ದೇಶದಾದ್ಯಂತ ಕಂಡುಬಂದ ಪ್ರತಿರೋಧ ಸಾಮಾನ್ಯ ಜನರಿಗೆ ನೈತಿಕ ಸ್ಥೈರ್ಯವನ್ನು ತುಂಬಿದೆ. ಆ ಕಾರಣಕ್ಕಾಗಿ ದಿನಂಪ್ರತಿ ಅತ್ಯಾಚಾರದ ಪ್ರಕರಣಗಳು ವರದಿಯಾಗಿತ್ತವೆ ಎಂಬುದು ನಿಜ. ಆದರೆ ಎಂತಹ ಪ್ರತಿರೋಧದ ವಾತಾವರಣದಲ್ಲೂ ಮತ್ತೆ ಮತ್ತೆ ಇಂತಹ ಪ್ರಕರಣಗಳು ನಡೆಯುತ್ತಲೇ ಇದೆಯಲ್ಲವೇ ? ಬಸ್ಸಿನಲ್ಲಿಯೇ ಇಂತಹ ಪ್ರಯತ್ನಗಳು ನಡೆದವು. ಪಂಜಾಬ್‌ನಲ್ಲಿ ದೆಹಲಿಯದ್ದೇ ಮಾದರಿಯ ಅಪಹರಣ ಮತ್ತು ಅತ್ಯಾಚಾರ ನಡೆಯಿತು. ಇಲ್ಲೆಲ್ಲ ಆರೋಪಿಗಳು ಅಶಿಕ್ಷಿತರೋ ಮನೋದೌರ್ಬಲ್ಯಕ್ಕೊಳಗಾದವರೋ ಅಲ್ಲ, ಹಾಗಿದ್ದರೆ ಈ ಘಟನೆಗಳ ಮೆಸೇಜ್ ಏನು ? ಇದು ಹೆಣ್ಣುಗಳ ವಿರುದ್ಧದ ಪ್ರತೀಕಾರದ ಭಾವವೇ ? ಇದಕ್ಕೆ ಪೂರಕವಾಗಿ ಮೂಲಭೂತವಾದಿ ಮನಸ್ಸುಗಳು ನೋವುಂಡವರೇ ನೋವಿನ ಜವಾಬ್ದಾರರೆಂದು ಹೇಳುತ್ತಿವೆ. ತೊದಲಿದಂತೆ ಮತ್ತೆ ಮತ್ತೆ ಧರ್ಮ-ಸಂಸ್ಕೃತಿ ಎನ್ನುವ ಇವರು ಕಾರ್ಪೊರೇಟ್ ಜಗತ್ತಿನ ಸೃಷ್ಟಿಕರ್ತರು. ಬಂಡವಾಳವಾದಿಗಳ ಬೆಂಬಲಕ್ಕಾಗಿ ಸರ್ಕಾರವೇ ರೇವ್‌ಪಾರ್ಟಿ ಮಾಡುವುದು ಒಪ್ಪಿತವಾಗಿಯೂ, ವಿದ್ಯಾರ್ಥಿಗಳು ನಡೆಸುವ ಬರ್ತಡೇ ಪಾರ್ಟಿಗಳು ಅಸಭ್ಯವಾಗಿಯೂ ಕಾಣುತ್ತಿದೆ. ನವಬಂಡವಾಳವಾದ ಹುಟ್ಟುಹಾಕಿರುವ ಈ ದ್ವಂದ್ವ ಯುವಸಮುದಾಯವನ್ನು ದಿಗ್ಭ್ರಾಂತಿಗೀಡುಮಾಡುತ್ತಿದೆ.

ಮಹಿಳಾ ವಿಷಯಕವಾಗಿ ಯಾವುದನ್ನು ಸ್ವಾತಂತ್ರ್ಯ -ಆಧುನಿಕತೆ ಎನ್ನುತ್ತೇವೋ ಅದು ಹೆಣ್ಣಿನ ಪ್ರಜ್ಞಾಪೂರ್ವಕ ಆಯ್ಕೆಯೇ ? ಅಥವಾ ಪಿತೃವ್ಯವಸ್ಥೆಯ ಉದಾರತೆಯ ಮೂಲಕ ಲಭಿಸಲ್ಪಟ್ಟಿದ್ದೇ ? ಆ ಕಾರಣಕ್ಕಾಗಿಯೇ ಇವುಗಳ ಒಳಗೇ ಪಿತೃವ್ಯವಸ್ಥೆಯ ಶ್ರೇಷ್ಠತೆಯ ವ್ಯಸನಗಳು ಸೇರಿಕೊಂಡಿವೆಯೇ ? ಎಂಬ ಪ್ರಶ್ನೆಗಳು ಮುಖ್ಯವಾಗಬೇಕಿದೆ. ಯಾವುದನ್ನು ಹೆಣ್ಣಿನ ಆಯ್ಕೆ, ಇಷ್ಟ, ಹಕ್ಕು ಎನ್ನುತ್ತೇವೆಯೋ ಅದು ನಿಜಕ್ಕೂ ಹಾಗಿದೆಯೇ ? ಅವಳ ಇಷ್ಟವನ್ನು ರೂಪಿಸುವ ವಾತಾವರಣ ಪುರುಷ ಪ್ರಾಧಾನ್ಯ ಚಿಂತನೆಯಿಂದ ಹೊರತಾಗಿದೆಯೇ ? ಎಂಬ ಸೂಕ್ಷ್ಮ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳಬೇಕಾಗಿದೆ. ಆಯುಧವನ್ನು ಕೈಯಲ್ಲಿ ಹಿಡಿಸುವುದು ಮತ್ತು ಕೈಯಲ್ಲಿ ಆಯುಧ ಹಿಡಿದ ಅಪರಾಧಕ್ಕಾಗಿ ಗುಂಡಿಕ್ಕುವುದು - ಎನ್ನುವ ಪ್ರಭುತ್ವ ಮತ್ತು ಬಂಡವಾಳವಾದಿ ತಂತ್ರವನ್ನು ಅರ್ಥೈಸಿಕೊಳ್ಳಬೇಕಿದೆ.



ಕಾನೂನನ್ನು ಕಠಿಣಗೊಳಿಸುವುದೊಂದೇ ಮಹಿಳಾ ಸಮಸ್ಯೆಗೆ ಪರಿಹಾರವಲ್ಲ, ಕಾನೂನು ಜಾರಿಯಾಗುವಲ್ಲಿ ಇರುವ ಅಡೆತಡೆಗಳು ಪರಿಹಾರವಾಗಬೇಕು. ಹೆಣ್ಣನ್ನು ಕುರಿತ ಆದ್ಯತೆಗಿಂತ ಜಾತಿ - ಹಣ - ಅಧಿಕಾರದಂತಹ ಲೋಭಗಳೇ ಮುಖ್ಯವಾಗಿರ್ರೋವಾಗ ಕಾನೂನು ಹಲ್ಲಿಲ್ಲದ ಹುಲಿಯಾಗುತ್ತದೆ. ಮಹಿಳಾ ದೌರ್ಜನ್ಯದ ಎಳೆಗಳು ಅನಾದಿಯಿಂದ ನೇಯಲ್ಪಟ್ಟಿದ್ದು, ಇಂತಹ ಅಸಮಾನತೆಯ ದೃಷ್ಟಿಕೋನ ಸಂವೇದನೆಯ ಒಳಗೇ ಬೆರೆತುಹೋಗಿದೆ. ಅದನ್ನು ಪ್ರಜ್ಞಾಪೂರ್ವಕವಾಗಿ ಬದಲಾಯಿಸಿಕೊಳ್ಳುವ, ವ್ಯಕ್ತಿಗೌರವದಿಂದ ಹೆಣ್ಣನ್ನು ನೋಡುವ, ಸಹಜೀವಿಯಾಗಿ ಒಪ್ಪಿಕೊಳ್ಳುವ ಸೂಕ್ಷ್ಮ ಮತ್ತು ನಿರಂತರ ಕಾರ್ಯಗಳು ಕುಟುಂಬ, ಶಿಕ್ಷಣಕ್ಷೇತ್ರ ಮತ್ತು ಸಾಮಾಜಿಕರಂಗದಲ್ಲಿ ನೆಲೆಯೂರಬೇಕಿದೆ. ಅತ್ಯಾಚಾರದಂತಹ ಕ್ರೌರ್ಯವನ್ನು ರಾಜಕೀಯ ಲಾಭಕ್ಕಾಗಿ ಬಳಸಿಕೊಳ್ಳುವ ತನ್ನ ವೋಟ್ ಬ್ಯಾಂಕಿಗಾಗಿ ಮಹಿಳಾ ಘಟಕ ಮತ್ತು ಮಹಿಳಾಪರತೆಯನ್ನು ತೋರುವ ಕೆಟ್ಟ ರಾಜಕಾರಣದ ದೇಶದಲ್ಲಿ ಸಾಮಾನ್ಯ ಮನುಷ್ಯರು ತೋರಬಹುದಾದ ವಿವೇಕ ಮತ್ತು ಮಹಿಳಾ ಚಳುವಳಿಗಳ ಸಂಘಟನಾತ್ಮಕ ಹೋರಾಟ ಮಾತ್ರ ಆಶಾಕಿರಣವಾಗಿದೆ.

**ಡಾ॥ ವಿನಯಾ**

'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ - ೫೮೦ ೦೦೩.

## ಅತ್ಯಾಚಾರಿಗಳಿಗೆ ಬಹಿಷ್ಕಾರ

ದೆಹಲಿ ಯುವತಿಯ ಮೇಲಾದ ಅತ್ಯಾಚಾರದ ಘಟನೆಗೆ ವ್ಯಕ್ತವಾದ ಯುವಜನಾಂಗದ ಆಕ್ರೋಶದ ಪ್ರತಿಭಟನೆ ಇಡೀ ದೇಶದಾದ್ಯಂತ ಹೊಸ ಸಂಚಲನವನ್ನೇ ಮೂಡಿಸಿದೆ. ಈ ಪ್ರಕರಣದ ನಂತರ ಕರ್ನಾಟಕದ ಮೂಲೆಮೂಲೆಗಳಲ್ಲಿ ಜರುಗುತ್ತಿರುವ ಅತ್ಯಾಚಾರದ ಘಟನೆಗಳು ಪುಂಖಾನುಪುಂಖವಾಗಿ ಹೊರಬರುತ್ತಿವೆ. ಒಂದೇ ಬಾರಿಗೆ ಇಷ್ಟೆಲ್ಲ ಪ್ರಕರಣಗಳು ಬೆಳಕಿಗೆ ಬರುತ್ತಿರುವುದು ಆತಂಕವನ್ನು ಸೃಷ್ಟಿಸುತ್ತಿರುವುದು ನಿಜವಾದರೂ ಅತ್ಯಾಚಾರಕ್ಕೊಳಗಾದ ಮಹಿಳೆಯರಿಗೆ ನ್ಯಾಯ ಸಿಗುತ್ತದೆಂಬ ಧೈರ್ಯದಿಂದ ಮನೆಯಿಂದ ಹೊರಬಂದು ದೂರು ನೀಡಲು ಸಿದ್ಧವಾಗಿರುವುದು ಕೂಡ ಕೊಂಚ ನೆಮ್ಮದಿ ಮೂಡಿಸಿದೆ. ಇದುವರೆಗೂ ಅತ್ಯಾಚಾರಕ್ಕೊಳಗಾದವರು ನೋವನ್ನುಂಡು ಮನೆಯಲ್ಲಿಯೇ ಮೌನವಾಗಿ ಇರುತ್ತಿದ್ದರು. ನಮ್ಮ ಸಮಾಜ ಹೇಗಿದೆಯೆಂದರೆ ದೌರ್ಜನ್ಯಕ್ಕೊಳಗಾದವಳು ಮಹಿಳೆ, ಅತ್ಯಾಚಾರಕ್ಕೊಳಗಾಗಿ ಅವಮಾನಿತವಾದವಳು ಮಹಿಳೆ. ಹೀಗಿರುವಾಗ ಬುದ್ಧಿ ಹೇಳಬೇಕಾದುದು ದೌರ್ಜನ್ಯವೆಸಗಿದವರಿಗಲ್ಲವೆ ? ಅದನ್ನು ಬಿಟ್ಟು ದಿನಕ್ಕೊಂದು ಹೇಳಿಕೆಗಳನ್ನು ನೀಡುತ್ತ ಮಹಿಳೆಯರಿಗೇ ವಿವೇಕದ ಪಾಠ ಹೇಳುತ್ತಿರುವುದು ವಿಪರ್ಯಾಸ. ವಿಕೃತ ಮನಸ್ಸುಗಳಿಗೆ, ಪುರುಷಪ್ರಧಾನ ಮಾನಸಿಕ ಅಸ್ವಸ್ಥರಿಗೆ ಇದು ಅಪಥ್ಯ. ಅವರು ಮಹಿಳಾಪರ ಸಂವೇದನೆ ಉಂಟುಮಾಡುವ ಬದಲು ಮಹಿಳೆಯರಿಗೇ ಪಾಠ ಹೇಳಲು ಹೊರಟಿದ್ದಾರೆ.

ಮಹಿಳೆ ಮತ್ತು ಪುರುಷರು ಸಮಾನರು ಎಂದು ಸಾರುವ ದೇಶ ನಮ್ಮದು. ನಮ್ಮ ಸಂವಿಧಾನದ ೧೪ನೇ ಕಲಂ ಇದನ್ನೇ ಹೇಳುತ್ತದೆ. ಜಾತಿತಾರತಮ್ಯ, ಲಿಂಗತಾರತಮ್ಯ ಎರಡೂ ಸಂವಿಧಾನ ವಿರೋಧಿ ಮತ್ತು ಅವೈಜ್ಞಾನಿಕವಾದುದು. ಮಹಿಳೆಯನ್ನು ಮನುಷ್ಯಳನ್ನಾಗಿ ಕಾಣುವ ಪ್ರವೃತ್ತಿ ಬೆಳೆದುಬಂದಿಲ್ಲ. ಇಂದು ಮಹಿಳೆ ಎಲ್ಲ ಕ್ಷೇತ್ರಗಳಲ್ಲಿ ಸಾಧನೆ ಮಾಡುತ್ತಿದ್ದಾಳೆ. ಸುನೀತಾ ವಿಲಿಯಮ್ಸ್ ಇತ್ತೀಚೆಗಷ್ಟೇ ಬಾಹ್ಯಾಕಾಶದಿಂದ ಸುರಕ್ಷಿತವಾಗಿ ಇಳೆಗೆ ಇಳಿದುಬಂದರು. ಶ್ರೀಹರಿಕೋಟಾದಲ್ಲಿ ಮೊನ್ನೆ ತಾನೇ ಒಂದು ಉಪಗ್ರಹವನ್ನು ಮಹಿಳೆಯ ನಾಯಕತ್ವದಲ್ಲಿಯೇ ಉಡಾವಣೆ ಮಾಡಲಾಯಿತು. ಇಂತಹ ಉದಾಹರಣೆಗಳು ನಮ್ಮೆದುರಿಗೆ ಇರುವಾಗ ಹೆಣ್ಣಿನ ಸ್ಥಾನದ ಬಗ್ಗೆ ದಿನಕ್ಕೊಂದು ಹೇಳಿಕೆ ಕೊಡುವ ಕೊಳಕು ಮನಸ್ಸಿನ ಮನುವಾದಿಗಳಿಗೆ ಏನೆನ್ನಬೇಕು ? ಆದ್ದರಿಂದ ಸಂವಿಧಾನ ವಿರೋಧಿ ಹೇಳಿಕೆಗಳನ್ನು ನೀಡುತ್ತಿರುವವರ ವಿರುದ್ಧ ಕಾನೂನುಕ್ರಮ ಜರುಗಿಸಬೇಕಾದ ಅವಶ್ಯಕತೆ ಇದೆ. ಮನುವಾದಿಗಳಿಗೆ ತಗಲಿರುವ ಮನೋವ್ಯಾಧಿಯನ್ನು ದೂರ ಮಾಡಬೇಕಾದ ಅವಶ್ಯಕತೆ ಇದೆ.

ನಮ್ಮ ಭಾರತದಲ್ಲಿ ಶೇ. ೩೫ರಷ್ಟು ಕುಟುಂಬಗಳು ಮಹಿಳೆಯ ದುಡಿಮೆಯಿಂದಲೇ ನಡೆಯುತ್ತಿವೆ. ಮಹಿಳೆಯು ಮನೆಯಲ್ಲೇ ಇರಬೇಕೆಂಬ ದಿಗ್ಬಂಧನ ಹಾಕಿದರೆ ಆ

ಕುಟುಂಬಗಳ ಗತಿ ಏನು ? ವಿಶ್ವಸಂಸ್ಥೆ ಹೇಳುವ ಪ್ರಕಾರ ಮಹಿಳೆಯ ದುಡಿಮೆ ೪ ಪಟ್ಟು ಇದ್ದರೆ ೩ ಪಟ್ಟು ಬಳಕೆ ಮಾಡುತ್ತಾಳೆ. ಆದರೆ ಪುರುಷನ ದುಡಿಮೆ ೩ ಪಟ್ಟು ಇದ್ದರೆ ಬಳಕೆ ೪ ಪಟ್ಟು. ಮಹಿಳೆಯರ ದುಡಿಮೆ ದೇಶದ ಅಭಿವೃದ್ಧಿಗೆ ಕಾರಣವಾಗಿರುವಾಗ ಅವಳನ್ನು ಮತ್ತೆ ಹಿಂದಕ್ಕೆಳೆಯುವ ಪ್ರಯತ್ನ ಇದೇಕೆ ?

ಅತ್ಯಾಚಾರ ಮಾಡಿದವರಿಗೆ ಉಗ್ರಶಿಕ್ಷೆ ಆಗಲೇಬೇಕು. ಕಾನೂನಿನಲ್ಲಿ ತಿದ್ದುಪಡಿ ಆಗಬೇಕು. ಒಂದು ರೀತಿಯ ಎಚ್ಚರಿಕೆ ಗಂಟೆಯಾಗಿ ದೆಹಲಿಯ ಯುವತಿಯ ಮೇಲಾದ ಅತ್ಯಾಚಾರ ಪ್ರಕರಣ ಗುಡುಗುತ್ತಿದೆ. ಆದರೆ ಶಿಕ್ಷೆಗಿಂತ ಹೆಚ್ಚಾಗಿ ಶಿಕ್ಷಣದ ಮೂಲಕ ಅರಿವನ್ನು ಮೂಡಿಸುವ ಮಹಿಳಾಪರ ಸಂವೇದನೆಯನ್ನು ಮೂಡಿಸುವ ಕೆಲಸ ಆಗಬೇಕಾಗಿವೆ. ಮಹಿಳೆಯನ್ನು ಒಂದು ಸರಕು ಸಂಸ್ಕೃತಿಯ ಭಾಗವಾಗಿ ನೋಡುವ ದೃಷ್ಟಿ ಬದಲಾಗಬೇಕು. ಕೆಲವು ಮನುವಾದಿಗಳು ಹಿಂದೆ ಹೀಗಿರಲಿಲ್ಲ ಎಂದು ಉದ್ಗಾರ ಎತ್ತುತ್ತಿದ್ದಾರೆ. ಮಹಾಭಾರತದ ಉದಾಹರಣೆಯೇ ನಮ್ಮ ಮುಂದಿದೆಯಲ್ಲ, ದ್ರೌಪದಿಯನ್ನು ಇಡೀ ಸಭೆಯಲ್ಲಿ ವಸ್ತ್ರಾಪಹರಣ ಮಾಡುವ ಸಮಯದಲ್ಲಿ ಅವಳ ಐದು ಜನ ಗಂಡಂದಿರು ಅಲ್ಲಿಯೇ ಇರುತ್ತಾರೆ. ಆದರೆ ಅವರ ರಕ್ಷಣೆಗೆ ಯಾರೂ ಬರುವುದಿಲ್ಲ. ಅಲ್ಲದೇ ತನ್ನನ್ನು ಕರೆದೊಯ್ಯಲು ಬಂದ ದುಶ್ಯಾಸನನನ್ನು ಒಂದು ಪ್ರಶ್ನೆ ಕೇಳುತ್ತಾಳೆ. ಧರ್ಮರಾಯ ಜೂಜಿನಲ್ಲಿ ತನ್ನನ್ನ ಮೊದಲು ಪಣಕ್ಕಿಟ್ಟನೋ, ತನ್ನನ್ನು ತಾನು ಸೋತಮೇಲೆ ಪಣಕ್ಕಿಟ್ಟನೋ ? ಎಂದು ದ್ರೌಪದಿ ಪ್ರಶ್ನಿಸಿದಾಗ ಅವನಲ್ಲಿ ಉತ್ತರ ಇರಲಿಲ್ಲ, ಏಕೆಂದರೆ ಧರ್ಮರಾಯ ತನ್ನನ್ನ ಸೋತನಂತರವೇ ದ್ರೌಪದಿಯನ್ನು ಪಣಕ್ಕಿಟ್ಟಿರುತ್ತಾನೆ. ಹಾಗಾದಲ್ಲಿ ಅವನಿಗೆ ದ್ರೌಪದಿಯ ಮೇಲೆ ಯಾವ ರೀತಿಯ ಹಕ್ಕು ಇರಲು ಸಾಧ್ಯ ? ಭೀಷ್ಮ, ದ್ರೋಣಾರಾದಿಯಾಗಿ ಯಾರೂ ಆಕೆಯ ಪ್ರಶ್ನೆಗೆ ಉತ್ತರ ಕೊಡುವುದಿಲ್ಲ, ತುಂಬಿದ ಸಭೆಯಲ್ಲಿ ಅವಮಾನವಾಗುತ್ತಿರುವಾಗ ಯಾರೂ ಆಕೆಯ ಸಹಾಯಕ್ಕೆ ಬರುವುದಿಲ್ಲ, ಧೃತರಾಷ್ಟ್ರ ಒಬ್ಬ ನಿಜವಾದ ಕುರುಡನಾಗಿದ್ದದ್ದು ಬಿಟ್ಟರೆ ಉಳಿದ ಎಲ್ಲ ಘಟಾನುಘಟಿಗಳು ಕಣ್ಣಿದ್ದೂ ಕುರುಡರು. ಮೌನವಾಗಿದ್ದು ದುರ್ಯೋಧನ, ದುಶ್ಯಾಸನನಿಗೆ ಬೆಂಬಲ ನೀಡುತ್ತಾರೆ.

ರೇಪ್ ಎಂಬ ಶಬ್ದ Rapina ದಿಂದ ಬಂದಿದೆ. Rapina ಎಂಬುದು ಲ್ಯಾಟಿನ್ ಶಬ್ದ. 'ವಸ್ತು' ಅಥವಾ ಆಸ್ತಿ ಎನ್ನುವ ಅರ್ಥ ನೀಡುತ್ತದೆ. ಇನ್ನೊಬ್ಬರ ವಸ್ತುಗಳನ್ನು ಬಲವಂತವಾಗಿ ಪಡೆದುಕೊಂಡು ಸ್ವಂತಕ್ಕೆ ಬಳಸಿಕೊಳ್ಳುವುದು ಎಂದರ್ಥ. ರೋಮನ್ ಕಾನೂನಿನಲ್ಲಿ ಈ ಶಬ್ದ ಬಳಕೆಯಲ್ಲಿದೆ. ನಮ್ಮ ದೇಶದಲ್ಲಿ ಪ್ರತಿ ೨೦ ನಿಮಿಷಗಳಿಗೊಮ್ಮೆ ಅತ್ಯಾಚಾರವಾಗುತ್ತಿದೆಯೆಂಬುದು ನಿಜಕ್ಕೂ ಆತಂಕ ಹುಟ್ಟಿಸುತ್ತಿದೆ. ಒಟ್ಟು ೨೩,೫೮೨ ಅತ್ಯಾಚಾರ ಪ್ರಕರಣಗಳು ನಡೆದಿದ್ದರೆ ಶಿಕ್ಷೆಯಾಗಿದ್ದು ಕೇವಲ ಶೇಕಡ ೨೫ರಷ್ಟು ಪ್ರಕರಣಗಳಲ್ಲಿ ಮತ್ತು ಇನ್ನುಳಿದ ಶೇಕಡ ೭೫ರಷ್ಟು ಪ್ರಕರಣಗಳಲ್ಲಿ ಆರೋಪಿಗಳು ಖುಲಾಸೆ ಆಗಿದ್ದಾರೆ. ಇತ್ತೀಚೆಗೆ ನಡೆದ ಪ್ರಕರಣವೊಂದರಲ್ಲಿ ೬೫ ವರ್ಷದ ವೃದ್ಧೆಯ ಮೇಲೆ ಅತ್ಯಾಚಾರವೆಸಗಿ ೨೧ ಬಾರಿ ಚಾಕುವಿನಿಂದ ಇರಿದು ಕೊಲೆ ಮಾಡಿ ನಂತರ ಅದೇ ಮನೆಯಲ್ಲಿ ೨೫ ವರ್ಷದ ಗರ್ಭಿಣಿ ಮೇಲೆ ಅತ್ಯಾಚಾರವೆಸಗಿರುವುದು ಕ್ರೌರ್ಯದ ಪರಮಾವಧಿಯಾಗಿದ್ದು ನಾಗರಿಕ ಸಮಾಜ ತಲೆತಗ್ಗಿಸುವಂತಹುದ್ದು. ಇಡೀ ದೇಶದಲ್ಲಿ ೩೦ರಿಂದ ೪೦ ಶಾಸಕರ ಮೇಲೆ ಅತ್ಯಾಚಾರದ ದಾವೆಗಳು ದಾಖಲಾಗಿದ್ದರೆ ಅವರಲ್ಲಿ ಎಷ್ಟು ಜನರಿಗೆ ಶಿಕ್ಷೆಯಾಗಿದೆ ? ಅವರೆಲ್ಲರೂ ಮತ್ತೆ ಚುನಾವಣೆಗೆ ಸ್ಪರ್ಧಿಸಿ ವಿಧಾನಸಭೆ, ಲೋಕಸಭೆ ಪ್ರವೇಶಿಸುತ್ತಾರೆ. ಇಂತಹ ಶಾಸಕರಿಂದ ಮಹಿಳಾಪರ ಸಂವೇದನೆಯನ್ನು ನಾವು ನಿರೀಕ್ಷಿಸುವುದು ಹೇಗೆ ಸಾಧ್ಯ ? ೨೦೧೧ರಲ್ಲಿ ಬೆಂಗಳೂರಿನಲ್ಲಿ ೯೭ ಅತ್ಯಾಚಾರ ಪ್ರಕರಣಗಳು ದಾಖಲಾಗಿದ್ದರೆ ೨೦೧೨ರಲ್ಲಿ ೭೫ ದಾಖಲಾಗಿವೆ. ಇದರಲ್ಲಿ ಎರಡು ಸಾಮೂಹಿಕ ಅತ್ಯಾಚಾರಗಳು, ೧೪ ಮಕ್ಕಳ ಮೇಲಿನ ಅತ್ಯಾಚಾರಗಳು, ೫೯ - ಇತರೆ ದಾಖಲಾಗಿವೆ.

ಮಹಿಳೆಯನ್ನು ಹಂಚಿಕೊಳ್ಳಬಹುದಾದ ವಸ್ತು, ಸರಕು ಅದರಲ್ಲೂ, ಸಾಮೂಹಿಕ ಸರಕು ಎಂದು ಭಾವಿಸಿರುವುದೇ ಅತ್ಯಂತ ಅಪಾಯಕಾರಿ. ಒಬ್ಬ ಪುರುಷ ಒಬ್ಬ ಮಹಿಳೆಯ ಮೇಲೆ ಅತ್ಯಾಚಾರ ಮಾಡುವುದೇ ಅಪರಾಧ. ಸಾಮಾನ್ಯವಾಗಿ ಯುದ್ಧದ ಸಮಯದಲ್ಲಿ ಸಾಮೂಹಿಕ ಅತ್ಯಾಚಾರದ ಪ್ರಕರಣಗಳು ಕಂಡುಬರುತ್ತವೆ. ಪಾಶ್ಚಿಮಾತ್ಯ ಸಂಸ್ಕೃತಿಯಿಂದ ಮತ್ತು ಮಹಿಳೆಯರು ಧರಿಸುವ ಉಡುಪು ಅತ್ಯಾಚಾರಕ್ಕೆ ಪ್ರಚೋದನೆ ನೀಡುತ್ತದೆ ಎನ್ನಿಸುವುದಾದಲ್ಲಿ ಪಾಶ್ಚಿಮಾತ್ಯ ರಾಷ್ಟ್ರದಲ್ಲಿ ಎಲ್ಲಿಯೂ ಸಾಮೂಹಿಕ ಅತ್ಯಾಚಾರಗಳು ನಡೆದಿರುವುದು ವರದಿಯಾಗಿಲ್ಲ. ಸಾಮೂಹಿಕ ಅತ್ಯಾಚಾರಗಳ ಪ್ರಕರಣಗಳು ನಮ್ಮ ದೇಶದ ಸಾಂಸ್ಕೃತಿಕ, ಸಾಮಾಜಿಕ, ಕಾನೂನು ಸುವ್ಯವಸ್ಥೆಗೆ ಸವಾಲಾಗಿ ಪರಿಣಮಿಸಿವೆ. ಸಮಾಜ, ಸರ್ಕಾರ ಗಂಭೀರವಾಗಿ ಪರಿಗಣಿಸಬೇಕು.

**ಕಾನೂನು**

ಅತ್ಯಾಚಾರ ಪ್ರಕರಣಗಳಲ್ಲಿ ಮಹಿಳೆಯ ಒಪ್ಪಿಗೆ ಇವೆಯೋ, ಇಲ್ಲವೋ ಎನ್ನುವುದು ಮುಖ್ಯವೇ ಹೊರತು ಮಹಿಳೆಯ ಹಿಂದಿನ ಚಾರಿತ್ರ್ಯ, ಬೇರೆಯವರೊಂದಿಗಿನ ಸಂಬಂಧ ಮುಖ್ಯವಲ್ಲ ಎನ್ನುವ ಮಹಿಳೆಯರ ವಾದ ಕಾನೂನಿನಲ್ಲಿ ಮಾನ್ಯತೆ ಪಡೆಯಿತು. ಒಬ್ಬ ವೇಶ್ಯೆಗೂ ಅತ್ಯಾಚಾರ ವಿರೋಧಿಸುವ ಹಕ್ಕಿದೆ. ಅವಳ ಒಪ್ಪಿಗೆಯಿಲ್ಲದೇ ನಡೆಯುವ ಬಲಾತ್ಕಾರವೂ ಅಪರಾಧವಾಗುತ್ತವೆ ಎನ್ನುವುದು ಕಾನೂನಿನ ಸೂಕ್ಷ್ಮ ವಿಚಾರ.

೧೯೮೩ರಲ್ಲಿ ತಂದ ತಿದ್ದುಪಡಿಯನುಸಾರ ಅತ್ಯಾಚಾರ ಒಂದು ಜಾಮೀನು ಕೊಡಬಾರದ, ಸೆಷನ್ಸ್ ನ್ಯಾಯಾಲಯದ ವಿಚಾರಣೆ ನಡೆಸಬೇಕಾದ ಒಂದು ಅಪರಾಧ. ಅದಕ್ಕೆ ಕೊಡಬಹುದಾದ ಶಿಕ್ಷೆ ೭ ವರ್ಷ ಕಾಲ ಜೈಲು ಅಥವಾ ಜೀವಾವಧಿ ಶಿಕ್ಷೆ ಅಥವಾ ೧೦ ವರ್ಷ ವಿಸ್ತರಿಸಬಹುದಾದ ಜೈಲು ಶಿಕ್ಷೆ ಮತ್ತು ದಂಡ. ಆದರೆ ಕೆಲವು ಸಂದರ್ಭಗಳಲ್ಲಿ ೭ ವರ್ಷಕ್ಕೂ ಕಡಿಮೆ ಶಿಕ್ಷೆ ವಿಧಿಸಬಹುದು. ಪೊಲೀಸರು ದೂರು ಬಂದಕೂಡಲೇ ಆ ಆಪಾದಿತರನ್ನು ವಶಕ್ಕೆ ತೆಗೆದುಕೊಳ್ಳಬಹುದು. ಪತಿಯೇ ಆಗಿದ್ದರೂ ೧೬ ವರ್ಷ ಕಡಿಮೆ ವಯಸ್ಸಿನ ಪತ್ನಿಯೊಂದಿಗೆ ಲೈಂಗಿಕ ಕ್ರಿಯೆ ನಡೆಸುವುದೂ ಅಪರಾಧವಾಗುತ್ತದೆ. ಆದರೆ ಪತ್ನಿ ೧೫ ವರ್ಷಕ್ಕಿಂತ ಕಡಿಮೆ ವಯಸ್ಸಿನವಳಾದರೆ ಅದು ಅತ್ಯಾಚಾರವೆನಿಸುವುದಿಲ್ಲ. ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯಲ್ಲಿ ಒಂದು ವಯಸ್ಸು, ದಂಡ ಸಂಹಿತೆಯಲ್ಲಿ ಬೇರೆ ಬೇರೆ ವಯಸ್ಸುಗಳು ಇದ್ದು ಪ್ರಸ್ತುತ ಇರುವ ಕಾನೂನು ಗೊಂದಲಮಯವಾಗಿದೆ ಎಂಬುದು ಕಾನೂನುತಜ್ಞರ ಅಭಿಮತ. ಮಹಿಳೆಯನ್ನು ಮತ್ತು ಆಕೆಯ ಕುಟುಂಬದವರನ್ನು ಹತ್ಯೆ ಮಾಡುವುದಾಗಿ ಬೆದರಿಸಿ ಆ ಭಯದಿಂದ ಲೈಂಗಿಕ ಕ್ರಿಯೆಗೆ ಆಕೆಯ ಒಪ್ಪಿಗೆ ಪಡೆದಾಗಲೂ ಅದು ಅತ್ಯಾಚಾರವೆಂದೇ ಪರಿಗಣಿತವಾಗಿ ಅಪರಾಧವಾಗುತ್ತದೆ. ಬುದ್ಧಿಮಾಂದ್ಯ ಮಹಿಳೆಗೆ ಮಾದಕ ದ್ರವ್ಯ ಸೇವಿಸುವಂತೆ ಮಾಡಿ ಬಳಿಕ ಮಹಿಳೆಯ ಒಪ್ಪಿಗೆ ಪಡೆದಲ್ಲಿಯೂ ಕಾನೂನುಬದ್ಧವಲ್ಲ.

ಕ್ರಿಮಿನಲ್ ಕಾನೂನು (ತಿದ್ದುಪಡಿ) ಮಸೂದೆ ೨೦೧೨ ಈ ಮುಂಚೆಯೇ ಲೋಕಸಭೆಯಲ್ಲಿ ಡಿಸೆಂಬರ್ ೪, ೨೦೧೨ರಂದು ಮಂಡಿತವಾಗಿದೆ. ಅತ್ಯಾಚಾರ ಪದದ ಬದಲು 'ಲೈಂಗಿಕ ಆಕ್ರಮಣ' ಎಂದು ವ್ಯಾಖ್ಯಾನಿಸಲಾಗುತ್ತಿದೆ. ಇನ್ನುಮುಂದೆ ಪುರುಷ ಜನನಾಂಗವನ್ನು ಒಳಗೊಂಡಂತೆ ದೇಹದ ಯಾವುದೇ ಭಾಗ ಅಥವಾ ಯಾವುದೇ ವಸ್ತುವಿನ ಮೂಲಕ ಲೈಂಗಿಕ ಉದ್ದೇಶದಿಂದ, ಮಹಿಳೆಯ ಒಪ್ಪಿಗೆ ಇಲ್ಲದೇ ಆಕೆಯ ಜನನಾಂಗ, ಗುದದ್ವಾರ, ಬಾಯಿ, ಮೂತ್ರದ್ವಾರದ ಮೂಲಕ ಪ್ರವೇಶ ಮಾಡುವುದು ಮತ್ತು ಪ್ರವೇಶಿಸುವುದಕ್ಕೆ ವ್ಯಕ್ತಿಯ ದೇಹದ ಭಾಗಕ್ಕೆ ಅನುವು ಮಾಡುವುದು ಕೂಡ ಲೈಂಗಿಕ ಆಕ್ರಮಣ ಎನಿಸುತ್ತವೆ. ಶಿಕ್ಷೆಯ ಪ್ರಮಾಣವನ್ನು ಈ ತಿದ್ದುಪಡಿ ಕಾನೂನು ಉಳಿಸಿಕೊಂಡಿದ್ದರೂ, ೭ ವರ್ಷಕ್ಕಿಂತ ಕಡಿಮೆ ಅವಧಿಯ ಶಿಕ್ಷೆ ನೀಡುವ ನ್ಯಾಯಾಲಯದ ವಿವೇಚನಾಧಿಕಾರವನ್ನು ತೆಗೆದು ಹಾಕಿದೆ. ಇದರ ಜೊತೆಗೆ ಲೈಂಗಿಕ ಕ್ರಿಯೆಗೆ ಒಪ್ಪಿಗೆ ನೀಡಬಹುದಾದ ವಯಸ್ಸನ್ನು ೧೬ ರಿಂದ ೧೮ಕ್ಕೆ ಏರಿಸಲಾಗಿದೆ. ೧೬ ವರ್ಷ ಮೀರದ ಪತ್ನಿಯ ಮೇಲಿನ ಪತಿಯ ಲೈಂಗಿಕ ಆಕ್ರಮಣಕ್ಕೆ ಕನಿಷ್ಠ ೭ ವರ್ಷ ಜೈಲುಶಿಕ್ಷೆಯಿಂದ ಗರಿಷ್ಠ ಜೀವಾವಧಿ ಶಿಕ್ಷೆ ವಿಧಿಸಬಹುದಾಗಿದೆ.

ಸಾಮೂಹಿಕ ಅತ್ಯಾಚಾರಕ್ಕೆ ಎಂತಹ ಶಿಕ್ಷೆ ಆಗಬೇಕು ? ಅಪರೂಪದಲ್ಲಿ ಅಪರೂಪದ ಪ್ರಕರಣಗಳಿಗೆ ಮರಣದಂಡನೆಯ ಶಿಕ್ಷೆ ವಿಧಿಸಲು ಅವಕಾಶವಿದೆ. ಆದರೆ ಮರಣದಂಡನೆಯ ಶಿಕ್ಷೆ ಅಪರಾಧವನ್ನು ತಡೆಗಟ್ಟುತ್ತದೆಯೆ ? ಈ ಸಾಮೂಹಿಕ ಅತ್ಯಾಚಾರಿಗಳಿಗೆ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ ವಿಧಿಸುವ ಮೂಲಕ ಬೇರೆಯವರಿಗೆ ಒಂದು ಪಾಠವಾಗಲು ಸಾಧ್ಯವೆ ? ಅದಕ್ಕೆ ಬದಲಾಗಿ 'ಪುರುಷ' ಎಂಬ ಅಹಂನ್ನು ತಗ್ಗಿಸಿ ಮಹಿಳೆಯರು ತಮ್ಮ ಸಹಜೀವಿಗಳು ಎಂದು ಆಲೋಚಿಸುವ, ಅದರಂತೆ ಸ್ಪಂದಿಸುವ ಮನಃಸ್ಥಿತಿ ಉಂಟುಮಾಡಬೇಕು. ಮಹಿಳೆಯರನ್ನು ಲೈಂಗಿಕ ವಸ್ತುಗಳೆಂದು ತಿಳಿದು ಬಲಾತ್ಕಾರ ಮಾಡಿ ಯಾದರೂ ಲೈಂಗಿಕ ಸುಖ ಪಡೆಯಬೇಕೆನ್ನುವ ವಿಕೃತ ಮನಸ್ಸುಗಳು ಬದಲಾಗಬೇಕು.

ಕಾಮುಕ ವ್ಯಕ್ತಿಗಳಿಗೆ, ಅತ್ಯಾಚಾರಿಗಳಿಗೆ ಶಿಕ್ಷೆಯೊಂದಿಗೆ ಸಾಮಾಜಿಕ, ರಾಜಕೀಯ ಬಹಿಷ್ಕಾರ ಹಾಕಬೇಕು. ಅಂತಹ ಅಪಾದನೆಗೊಂಡ ಅವರನ್ನು ಚುನಾವಣೆಗೆ ಸ್ಪರ್ಧಿಸಲು ಅವಕಾಶ ನೀಡಬಾರದು.

*ಹೆಣ್ಣಾಗಿ ಹುಟ್ಟುವುದಕ್ಕಿಂತ*
*ಮಣ್ಣಾಗಿ ಹುಟ್ಟಿದರೇ*
*ಮಣ್ಣಿನ ಮೇಲೊಂದು*
*ಮರವಾಗಿ ಹುಟ್ಟಿದರೆ*
*ಪುಣ್ಯವಂತರಿಗೆ ನೆರಳಾದೆ*



ಈ ಜನಪದ ತ್ರಿಪದಿ ಮಹಿಳೆಗಿರುವ ಹೊಣೆ, ಒತ್ತಡ, ಬೇಸರ, ದುಃಖವನ್ನು ಎತ್ತಿ ತೋರಿಸುತ್ತದೆ. ಪರಂಪರಾಗತ ಸಾಹಿತ್ಯದಲ್ಲಿ ಮಹಿಳೆಯರನ್ನು ಪುರುಷಾಧೀನವಾಗಿ ನಡೆಸಿಕೊಂಡು ಬಂದದ್ದು ಕಂಡುಬರುತ್ತದೆ. ಧರ್ಮ, ಸಮಾಜ, ಸಾಹಿತ್ಯ, ರಾಜಕಾರಣ, ಸಂಸ್ಕೃತಿ ಎಲ್ಲ ಆಯಾಮಗಳಲ್ಲಿ ಮಹಿಳೆಯರು ಹಿಂದಿನಿಂದಲೂ ಸಂಕಷ್ಟದ ದಾರಿ ಸವೆಸುತ್ತ ಬಂದಿದ್ದಾರೆ. ಮೂಲದಲ್ಲಿ ಗಂಡು - ಹೆಣ್ಣು ಎಂಬ ತಾರತಮ್ಯವಿಲ್ಲದೆ ಬದುಕನ್ನು ಹೂಡಿದ್ದ ಆ ಆದಿಮ ಹಂತದಿಂದ ಪುರುಷ ಪ್ರಧಾನ ವ್ಯವಸ್ಥೆಗೆ ತಳ್ಳಲ್ಪಟ್ಟು ಶತಮಾನ ಗಳಿಂದ ಕ್ರೌರ್ಯ, ದಬ್ಬಾಳಿಕೆ, ಶೋಷಣೆಯನ್ನು ಸಹಿಸಿ, ಎದುರಿಸಿ, ಪ್ರತಿಭಟಿಸಿ ಇಂದು ಈ ಸ್ಥಿತಿಗೆ ತಲುಪಿರುವುದು ಸಂಗತಿ. ಹೀಗೆ ಶತಶತಮಾನಗಳಿಂದ, ಲಿಂಗಭೇದ ನೀತಿಯನ್ನು ಅನುಸರಿಸಿಕೊಂಡು ಬರುತ್ತಿರುವ ಸಮಾಜ ನಮ್ಮದು. ಇದಕ್ಕೆ ಯಾವುದೇ ವ್ಯಕ್ತಿ, ಸಮುದಾಯ, ಜನಾಂಗಗಳು ಕಾರಣವಲ್ಲವಾದರೂ ಇಡೀ ಸಾಮಾಜಿಕ ವ್ಯವಸ್ಥೆಯೇ ಕಾರಣವಾಗಿದೆ.

**ಕಾರಣಗಳು**

೧. ಪುರುಷ ಪ್ರಧಾನ ಮೌಲ್ಯಗಳು - ಪುರುಷಾಹಂಕಾರದ ಮದ

೨. ಹೆಣ್ಣು ಭ್ರೂಣಹತ್ಯೆ ಹೆಚ್ಚಾಗಿರುವುದು. ಇದರಿಂದಾಗಿ ಮಹಿಳೆ - ಪುರುಷ ಲಿಂಗಾನುಪಾತ ಇಳಿಕೆಯಾಗಿರುವುದು.

೩. ಹೆಣ್ಣನ್ನು ಸರಕು ಸಂಸ್ಕೃತಿಯ ಭಾಗವಾಗಿ ಸಮಾಜ ನೋಡುವುದು

೪. ಸಮಾಜದಲ್ಲಿನ ಮುಕ್ತ ಲೈಂಗಿಕ ಚಟುವಟಿಕೆಗಳು. ಮಹಿಳೆಯರ ಅಕ್ರಮ ಕಳ್ಳಸಾಗಾಣಿಕೆ

೫. ಮಾಧ್ಯಮಗಳು ಪುರುಷ ಪ್ರಧಾನ ಮೌಲ್ಯಗಳನ್ನೇ ಬಿಂಬಿಸುತ್ತಿರುವುದು

೬. ಶಾಲಾ ಪಠ್ಯಪುಸ್ತಕಗಳಲ್ಲಿಯೂ ಪುರುಷ ಪ್ರಧಾನ ಮೌಲ್ಯಗಳ ಪ್ರತಿಪಾದನೆ

೭. **ಮೂಢನಂಬಿಕೆ :** ಅಪ್ರಾಪ್ತ ಬಾಲಕಿಯೊಡನೆ ಲೈಂಗಿಕ ಸಂಪರ್ಕ ಮಾಡುವುದರಿಂದ ಏಯ್ಡ್ಸ್ ವಾಸಿಯಾಗುತ್ತದೆ ಎನ್ನುವ ಮೂಢನಂಬಿಕೆ ಇದೆ. ಅಲ್ಲದೇ ಬಾಲಕಿಯೊಡನೆ ಲೈಂಗಿಕ ಸಂಪರ್ಕ ಹೊಂದುವುದರಿಂದ ತಮ್ಮ ಲೈಂಗಿಕ ಶಕ್ತಿ ಹೆಚ್ಚುತ್ತದೆನ್ನುವ ಮೌಢ್ಯವೂ ಇದೆ.

**ಪರಿಹಾರಗಳು**

೧. ಪೊಲೀಸ್ ಇಲಾಖೆ ಮತ್ತು ನ್ಯಾಯಾಂಗ ವ್ಯವಸ್ಥೆಯಲ್ಲಿ ಲಿಂಗ ಸಂವೇದನೆಯುಳ್ಳ ಅಧಿಕಾರಿಗಳ ನೇಮಕ

೨. ಶಿಕ್ಷಣದಲ್ಲಿ ಮಹಿಳಾ ಸಮಾನತೆಯ ಪ್ರತಿಪಾದನೆಯ ಪಠ್ಯಕ್ರಮ

೩. ರಾಜಕೀಯದಲ್ಲಿ ಸಮಾನತೆ

೪. ಮಹಿಳೆಯರಿಗೆ ಆಸ್ತಿಹಕ್ಕಿನ ಕಟ್ಟುನಿಟ್ಟಿನ ಜಾರಿ

೫. ಮಹಿಳಾ ಪರ ಕಾನೂನುಗಳ ಕಟ್ಟುನಿಟ್ಟಿನ ಜಾರಿ

೬. ಪುರುಷರಲ್ಲಿ ಮತ್ತು ಇಡೀ ಸಮಾಜದಲ್ಲಿ ಮಹಿಳೆಯರ ಬಗೆಗೆ ಸಂವೇದನಾಶೀಲತೆ

೭. ಹೆಣ್ಣು ಭ್ರೂಣಹತ್ಯೆ ತಡೆಗಟ್ಟಲು ಕಾನೂನಿನ ಬಿಗಿ ಕ್ರಮಗಳು

೮. ಅತ್ಯಾಚಾರಿಗಳಿಗೆ ಕಠಿಣ ಶಿಕ್ಷೆ

೯. ಮಹಿಳೆಯರ ಆರ್ಥಿಕ ಸ್ವಾವಲಂಬನೆ

೧೦. ಸಾಮಾಜಿಕ ನ್ಯಾಯ ಒದಗಿಸುವ ಕಾನೂನುಗಳ ಸಮರ್ಪಕ ಜಾರಿ

೧೧. ಸರಳ ವಿವಾಹಗಳಿಗೆ, ಅಂತರ್ಜಾತಿ ವಿವಾಹಗಳಿಗೆ ಹೆಚ್ಚಿನ ಆದ್ಯತೆ

೧೨. ವರದಕ್ಷಿಣೆ ನಿಷೇಧ ಕಾನೂನಿನ ಸಮರ್ಪಕ ಜಾರಿ

೧೩. ಸಾಮಾಜಿಕ ಹಕ್ಕುಗಳ ಉಲ್ಲಂಘನೆ ವಿರುದ್ಧ ತೀವ್ರ ಕ್ರಮ

ಅತ್ಯಾಚಾರಕ್ಕೊಳಗಾದ ಹುಡುಗಿಯ ದೇಹದ ಮೇಲಿನ ಗಾಯದ ಗುರುತುಗಳು ಮಾಯಬಹುದು. ಆದರೆ ಲೈಂಗಿಕ ರೋಗಗಳು, ಎಚ್.ಐ.ವಿ.ಯಂತಹ ಕಾಯಿಲೆಗಳು ಹರಡಿದಲ್ಲಿ ಹುಡುಗಿಯ ಗತಿಯೇನು ? ಅಲ್ಲದೇ ಆಕೆಗಾದ ಮಾನಸಿಕ ಆಘಾತ ಸರಿಪಡಿಸುವುದು ಹೇಗೆ ? ವಿಶ್ವಸಂಸ್ಥೆಯ ಒಂದು ವರದಿಯ ಪ್ರಕಾರ ವಿಶ್ವದಾದ್ಯಂತ ಶೇ. ೧೦ರಷ್ಟು ಜನನಗಳು ಹದಿಹರೆಯದ ಹೆಣ್ಣುಮಕ್ಕಳಿಂದ ಆಗುತ್ತವೆ.



೨೫ ವರ್ಷಕ್ಕೂ ಕಡಿಮೆ ವಯಸ್ಸಿನ ಯುವಕ - ಯುವತಿಯರಲ್ಲಿ ಕನಿಷ್ಠ ೧೧.೧ ದಶಲಕ್ಷ ಜನರು ಪ್ರತಿ ವರ್ಷ ಲೈಂಗಿಕ ಸಂಪರ್ಕದಿಂದ ಉಂಟಾಗುವ ಕಾಯಿಲೆಗಳಿಗೆ ತುತ್ತಾಗುತ್ತಾರೆ. ಎಚ್.ಐ.ವಿ. ಸೋಂಕು ಇರುವ ಅರ್ಧದಷ್ಟು ವ್ಯಕ್ತಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ಜನ ೧೫-೨೪ ವರ್ಷ ವಯಸ್ಸಿನವರೇ ಇರುತ್ತಾರೆ.

ಅತ್ಯಾಚಾರಿಗಳ ಬಗ್ಗೆ ಮತ್ತು ಅತ್ಯಾಚಾರಕ್ಕೆ ಒಳಗಾದ ಮಹಿಳೆಯರ ಬಗ್ಗೆ ನಮ್ಮ ಸಮಾಜ ತಳೆದಿರುವ ನಿಲುವಿನ ಬಗ್ಗೆ ಅಧ್ಯಯನ ನಡೆಸಿದಾಗ ತಿಳಿದುಬಂದಿದ್ದೇನೆಂದರೆ ಶೇ. ೬೦ ಪ್ರಕರಣಗಳಲ್ಲಿ ಅತ್ಯಾಚಾರಕ್ಕೊಳಗಾದ ಮಹಿಳೆಯರನ್ನು ಅವರ ಕುಟುಂಬದವರೇ ಹೀನಾಯವಾಗಿ ಕಾಣುತ್ತಾರೆ ಎಂಬುದು. ಶೇ. ೧೨.೫ರಷ್ಟು ಪ್ರಕರಣಗಳಲ್ಲಿ ಅತ್ಯಾಚಾರಕ್ಕೆ ಒಳಗಾದ ಮಹಿಳೆಯನ್ನೇ ದೂರುತ್ತಾರೆ. ಪ್ರತಿ ಮೂರನೇ ಬಲಿಪಶು ಇನ್ನೂ ಚಿಕ್ಕ ವಯಸ್ಸಿನ ಹುಡುಗಿಯಾಗಿರುತ್ತಾಳೆ ಎಂಬ ಅಂಕಿ-ಅಂಶವನ್ನು ರಾಷ್ಟ್ರೀಯ ಅಪರಾಧ ಬ್ಯೂರೋ ನೀಡಿದೆ. ಅತ್ಯಾಚಾರದ ಅಪರಾಧದಲ್ಲಿ ಬೆಂಗಳೂರು ನಗರ ದೇಶದಲ್ಲಿ ೪ನೇ ಸ್ಥಾನ ಪಡೆದುಕೊಂಡಿದೆ ಎಂಬುದು ಅತ್ಯಂತ ದುಃಖದ ಸಂಗತಿ.

ಶಾಲಾ ಪಠ್ಯಕ್ರಮಗಳಲ್ಲಿ ಮಹಿಳೆಯರ ಕುರಿತು ಸಂವೇದನೆ ಬೆಳೆಸಿಕೊಳ್ಳುವ ಬಗ್ಗೆ ಪಾಠ ಮಾಡಲೇಬೇಕಾದ ಅನಿವಾರ್ಯತೆ ಇದೆ. ಆರೋಗ್ಯಕರ ಲೈಂಗಿಕ ಶಿಕ್ಷಣದ ಕುರಿತು ಕಲಿಸಿಕೊಡಬೇಕಾಗಿದೆ. ಪ್ರಕೃತಿಯ ದೃಷ್ಟಿಯಲ್ಲಿ ಮಹಿಳೆ, ಪುರುಷ ಎಂಬ ಭೇದಭಾವವಿಲ್ಲ. ಆದರೆ ಮನುಷ್ಯ ಕಟ್ಟಿಕೊಂಡಿರುವ ಸಮಾಜದಲ್ಲಿ ಎಲ್ಲ ಬಗೆಯ ಅತಿರೇಕಗಳನ್ನು ನಾವು ಕಾಣುತ್ತಿರುವುದು ಅತ್ಯಂತ ದುರಂತದ ಸಂಗತಿ.

ಸಮಾಜದ ಪ್ರತಿ ವ್ಯಕ್ತಿಯ ವರ್ತನೆಯಲ್ಲಾಗುವ ಸಣ್ಣ ಬದಲಾವಣೆ, ಸ್ಪಂದಿಸುವ ರೀತಿ ಸಾಮಾಜಿಕ ಬದಲಾವಣೆಗೆ ಒಂದು ಹೆಜ್ಜೆಯಾಗುತ್ತದೆ, ವಿಕೃತ ಮನಸ್ಸುಗಳು ಪರಿವರ್ತನೆಯಾಗುವ ನಿಟ್ಟಿನಲ್ಲಿ ಸಹಾಯಮಾಡುತ್ತದೆಂಬ ಆಶಯದೊಂದಿಗೆ ಮುಂದಿನ ಹೆಜ್ಜೆ ಇಡೋಣ.

**೨೦೦೮ರಿಂದ ೨೦೧೨ ಅತ್ಯಾಚಾರ - ಲೈಂಗಿಕ ಕಿರುಕುಳ**

| ವರ್ಷ | ಅತ್ಯಾಚಾರ | ಸಾಮೂಹಿಕ ಅತ್ಯಾಚಾರ | ಲೈಂಗಿಕ ಕಿರುಕುಳ |
|---|---|---|---|
| ೨೦೦೮ | ೪೪೬ | ೮ | ೧೯೫೪ |
| ೨೦೦೯ | ೫೦೯ | ೬ | ೨೧೮೬ |
| ೨೦೧೦ | ೫೮೬ | ೧೦ | ೨೫೪೪ |
| ೨೦೧೧ | ೬೩೬ | ೩ | ೨೬೦೮ |
| ೨೦೧೨ | ೫೬೪ | ೫ | ೨೯೬೦ |

**ಡಾ॥ ವಸುಂಧರಾ ಭೂಪತಿ**
ನಂ. ೨೨೨, 'ಭಾರಧ್ವಾಜ', ೨ನೇ 'ಇ' ಅಡ್ಡರಸ್ತೆ, ೩ನೇ ಫೇಸ್, ೩ನೇ ಬ್ಲಾಕ್ ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

## ಅತ್ಯಾಚಾರ ಸಹಿಸುವುದು ಎಲ್ಲಿಯವರೆಗೆ ?

''ನಾನು ಬದುಕಬೇಕು. ನನ್ನನ್ನು ಈ ಸ್ಥಿತಿಗೆ ತಳ್ಳಿದವರಿಗೆ ಶಿಕ್ಷೆಯಾಗುವುದನ್ನು ನೋಡಬೇಕು.'' ಡಿಸೆಂಬರ್ ೧೬, ೨೦೧೨ರಂದು ನಡೆದ ಪೈಶಾಚಿಕ ಅತ್ಯಾಚಾರಕ್ಕೊಳಗಾದ ಯುವತಿ ದಿನಾಂಕ ೧೯-೧೨-೧೨ರಂದು ತನ್ನ ತಾಯಿ ಮತ್ತು ಸೋದರನ ಬಳಿ ಹೇಳಿದ ಮಾತುಗಳಿವು. ೧೩ ದಿನಗಳ ಜೀವನ್ಮರಣದ ಹೋರಾಟದ ನಂತರ ದೆಹಲಿಯ ಪ್ಯಾರಾ ಮೆಡಿಕಲ್ ವಿದ್ಯಾರ್ಥಿನಿ ಶನಿವಾರ ೨೯-೧೨-೨೦೧೨ರ ಬೆಳಗಿನ ಜಾವ ತನ್ನ ನೋವಿಗೆ ವಿದಾಯ ಹೇಳಿದಳು.

''ದೇಶದ ಪ್ರೀತಿಯ ಮಗಳ ಹೋರಾಟಕ್ಕೆ ಖಂಡಿತವಾಗಿಯೂ ನ್ಯಾಯ ಸಿಗುತ್ತದೆ. ಈ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಲಾಗಿದೆ. ಆರೋಪಿಗಳಿಗೆ ಶೀಘ್ರವೇ ಶಿಕ್ಷೆ ನೀಡಲಾಗುತ್ತದೆ'' ಎಂದು ಸೋನಿಯಾ ಗಾಂಧಿ ಭರವಸೆ ನೀಡಿದ್ದಾರೆ. ಆರೋಪಿಗಳ ವಿರುದ್ಧ ಭಾರತೀಯ ದಂಡ ಸಂಹಿತೆಯ ಸೆಕ್ಷನ್ ೩೦೨ (ಕೊಲೆಯತ್ನ), ೨೦೧ (ಸಾಕ್ಷ್ಯನಾಶ), ೩೬೫ (ಅಪಹರಣ), ೩೭೬(೨) (ಸಾಮೂಹಿಕ ಅತ್ಯಾಚಾರ), ೩೭೭ (ಅಸ್ವಾಭಾವಿಕ ತಪ್ಪು), ೩೯೪ (ದರೋಡೆ ಮಾಡಿ ಘಾಸಿಗೊಳಿಸುವಿಕೆ) ಮತ್ತು ೩೪ರ (ಒಂದೇ ಉದ್ದೇಶ) ಇದರ ಅಡಿಯಲ್ಲಿ ೬ ಜನ ಅತ್ಯಾಚಾರಿಗಳ ವಿರುದ್ಧ ಕೇಸು ದಾಖಲಾಗಿದೆ.

೨೦೧೩ರ ಹೊಸ ವರ್ಷದಲ್ಲಿ ಮಹಿಳಾ ಸುರಕ್ಷತೆಗೆ ಆದ್ಯತೆ ನೀಡಬೇಕೆಂಬ ಆಶಯವನ್ನು ರಾಷ್ಟ್ರಪತಿ ಸೇರಿದಂತೆ ವಿವಿಧ ರಾಜಕೀಯ ಪಕ್ಷಗಳ ಮುಖಂಡರು ಆಶಿಸಿದ್ದಾರೆ. ಆದರೆ ಹೊಸ ವರ್ಷದ ಮುನ್ನಾದಿನವೇ ಬೆಂಗಳೂರಿನ ಎರಡು ಪ್ರತ್ಯೇಕ ಘಟನೆಗಳಲ್ಲಿ ಇಬ್ಬರು ಅಪ್ರಾಪ್ತ ಬಾಲಕಿಯರು ಅತ್ಯಾಚಾರಕ್ಕೆ ಗುರಿಯಾಗಿದ್ದಾರೆ. ಲೈಂಗಿಕ ಹಿಂಸೆಯೊಂದಿಗೆ ಮಹಿಳಾ ಸುರಕ್ಷತೆಯ ಹೊಸ ವರ್ಷದ ಆಗಮನವಾಗಿರುವುದು ವಿಪರ್ಯಾಸವೇ ಸರಿ. ದೇವರಜೀವನಹಳ್ಳಿ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿಕೊಳ್ಳಲು ಪೊಲೀಸರು ಆರಂಭದಲ್ಲಿ ನಿರಾಕರಿಸಿದ್ದಾರೆ. ಅಪರಿಚಿತ ವ್ಯಕ್ತಿಯಿಂದ ಅತ್ಯಾಚಾರಕ್ಕೊಳಗಾದ ಬಾಲಕಿಯ ಪರವಾಗಿ ಸ್ಥಳೀಯರು ಪ್ರತಿಭಟಿಸಿದ ನಂತರವೇ ಪೊಲೀಸರು ಪ್ರಕರಣವನ್ನು ದಾಖಲಿಸಿಕೊಂಡಿದ್ದಾರೆ.

೨೦೦೮ರಿಂದ ೨೦೧೨ರವರೆಗೆ ರಾಜ್ಯದಲ್ಲಿ ಒಟ್ಟು ೨೫೨೫ ಅತ್ಯಾಚಾರ ಪ್ರಕರಣಗಳು ದಾಖಲಾಗಿವೆ. ಈ ಪೈಕಿ ೧೬೧೨ ಮಹಿಳೆಯರ ಮೇಲೆ ಮಾನಭಂಗ ಪ್ರಕರಣಗಳು ನಡೆದಿದ್ದರೆ, ಅಪ್ರಾಪ್ತ ಬಾಲಕಿಯರ ಮೇಲೆ ೯೧೩ ಅತ್ಯಾಚಾರ ಪ್ರಕರಣಗಳು ದಾಖಲಾಗಿವೆ. ರಾಜ್ಯದ ಅಪರಾಧ ದಾಖಲಾತಿ ಕೇಂದ್ರದ ಅಧಿಕೃತ ಮಾಹಿತಿಗಳೇ ಇಷ್ಟೊಂದು ಇರುವಾಗ, ಮಾನ, ಮರ್ಯಾದೆ, ಹೆದರಿಕೆಯಿಂದ ವರದಿಯಾಗದ, ದಾಖಲಾಗದ ಪ್ರಕರಣಗಳು ಅದಕ್ಕೆ ನಾಲ್ಕು-ಐದು ಪಟ್ಟು ಜಾಸ್ತಿ ಇರುತ್ತವೆ. ರಾಷ್ಟ್ರದಲ್ಲಿ ಪ್ರತಿ ೨೦ ನಿಮಿಷಗಳಿಗೆ ಒಬ್ಬ ಮಹಿಳೆ ಅತ್ಯಾಚಾರಕ್ಕೆ ಗುರಿಯಾಗುತ್ತಿದ್ದಾಳೆ., ಅದರಲ್ಲಿ ಪ್ರತಿ ಮೂರನೇ ಬಲಿಪಶು ಇನ್ನೂ ಚಿಕ್ಕ ವಯಸ್ಸಿನ ಬಾಲೆಯಾಗಿರುತ್ತಾಳೆ. ಈ ಅಂಕಿ-ಅಂಶಗಳು ರಾಷ್ಟ್ರೀಯ ಅಪರಾಧ ದಾಖಲೆ ಬ್ಯೂರೋ (ಎನ್.ಸಿ.ಆರ್.ಬಿ.) ಇತ್ತೀಚೆಗೆ ನೀಡಿದೆ. ಅತ್ಯಾಚಾರ ಪ್ರಕರಣಗಳಲ್ಲಿ ಬೆಂಗಳೂರು ನಗರವು ಭಾರತದಲ್ಲಿ ನಾಲ್ಕನೇ ಸ್ಥಾನ ಪಡೆದುಕೊಂಡಿದೆ. ಈಗಲಾದರೂ ಕರ್ನಾಟಕ ಸರ್ಕಾರ ಪೊಲೀಸು ಕಾನೂನು ವ್ಯವಸ್ಥೆಯನ್ನು ಬಲಪಡಿಸುವತ್ತ ಮುಖ ಮಾಡಲಿ. ಉದಾತ್ತ ಪೋಸುಗಳನ್ನು ನೀಡುತ್ತಾ ಸಮಸ್ಯೆಯನ್ನು ಮರೆಮಾಚುವುದು ಬೇಡ. ಗಂಭೀರವಾಗಿ ಪರಿಗಣಿಸಲಿ. ಅತ್ಯಾಚಾರ ಪ್ರಕರಣಗಳನ್ನು ನಿರ್ವಹಿಸುವಲ್ಲಿ ಪೊಲೀಸರ ಸಂವೇದನಾಶೀಲತೆಯ ಕೊರತೆಯಿದೆ.

ದೆಹಲಿಯ ಖಾಸಗಿ ಬಸ್ಸಿನಲ್ಲಿ ದಿನಾಂಕ ೧೬-೧೨-೧೨ರಂದು ಸಾಮೂಹಿಕ ಬಲಾತ್ಕಾರದ ನಂತರ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಎಣ್ಮೂರು ಗ್ರಾಮದ ಯುವತಿ ಮೇಲೆ ದಿನಾಂಕ ೧೭-೧೨-೧೨ರಂದು ಅದೇ ಗ್ರಾಮದ ದುಷ್ಕರ್ಮಿಯಿಂದ ಅತ್ಯಾಚಾರ. ಹಾಸನ ಜಿಲ್ಲೆಯ ಆಲೂರು ತಾಲೂಕಿನ ಕಿತಬೂರಿನ ಯುವತಿ ಮೇಲೆ ದಿನಾಂಕ ೧೯-೧೨-೧೨ರಂದು ಎಂಟು ಜನ ಏಳು ದಿನಗಳಿಂದ ನಿರಂತರ ಅತ್ಯಾಚಾರ ಎಸಗಿದರು. ಇದೇ ಹಾಸನ ಜಿಲ್ಲೆಯ ಶೆಟ್ಟಿಹಳ್ಳಿಯಲ್ಲಿ ೧೫ ವರ್ಷದ ಹುಡುಗಿ ಮೇಲೆ ಅತ್ಯಾಚಾರವನ್ನು ದಿನಾಂಕ ೧೯-೧೨-೧೨ರಂದು ಗೈದರು. ದಿನಾಂಕ ೧೯-೧೨-೧೨ರಂದು ಗುಲಬರ್ಗಾದ ಚಿಂಚೋಳಿ ತಾಲೂಕಿನ ೧೧ ವರ್ಷದ ಬಾಲಕಿ ಮೇಲೆ ಅದೇ ಗ್ರಾಮದ ವ್ಯಕ್ತಿ ಹೊಲದಲ್ಲಿ ಅತ್ಯಾಚಾರವೆಸಗಿದ. ಅದೇ ಗುಲಬರ್ಗಾದ ತೆಗನೂರಿನ ಅಪ್ರಾಪ್ತ ಬಾಲಕಿ ಮೇಲೆ ಅತ್ಯಾಚಾರ. ದಿನಾಂಕ ೨೦-೧೨-೧೨ರಂದು ತುಮಕೂರಿನ ಮಧುಗಿರಿ ತಾಲೂಕಿನ ಗರ್ಭಿಣಿ ಮೇಲೆ ಸಾಮೂಹಿಕ ಅತ್ಯಾಚಾರ. ೨೪ರಂದು ಮಂಡ್ಯದ ಕೆರೆಗೋಡಿನ ಉಪ್ಪಾರಕನ ಹಳ್ಳಿಯ ೭ನೇ ತರಗತಿಯ ಬಾಲಕಿಯನ್ನು ಅತ್ಯಾಚಾರ ಮಾಡಿ ಗರ್ಭಿಣಿಯಾಗಿಸಿದ. ೨೪ರಂದು ಮಂಗಳೂರಿನ ಮನೆಗೆಲಸದ ೧೪ರ ಯುವತಿಗೆ ೮ ಮಂದಿ ಅತ್ಯಾಚಾರ. ೨೫ರಂದು ಕೊಡಗಿನ ಬಂಜೆಗುಂಡಿ ಗ್ರಾಮದ ೯ನೇ ತರಗತಿಯ ಹಾಕಿ ಆಟಗಾರ್ತಿಯ ಮೇಲೆ ನಿರಂತರ ಅತ್ಯಾಚಾರ ಎಸಗಿ ಗರ್ಭಿಣಿಯಾಗಿಸಿದ್ದಾರೆ. ಚಿಕ್ಕಮಂಗಳೂರಿನಲ್ಲಿ ೮ ವರ್ಷದ ಬಾಲಕಿ ಮೇಲೆ ೫೫ ವರ್ಷದ ಗಂಡಸು ಅತ್ಯಾಚಾರ. ಧಾರವಾಡದಲ್ಲಿ ಬೆಳಗಾಂನಲ್ಲಿ ಅನೇಕ ಕಡೆಗಳಲ್ಲಿ ನಿರಂತರ ಅತ್ಯಾಚಾರಗಳು ನಡೆಯುತ್ತಿವೆ. ಯಾರ ಭಯವೂ ಇಲ್ಲದಂತೆ ನಡೆಯುತ್ತಿರುವ ಈ ಅತ್ಯಾಚಾರಗಳನ್ನು ನೋಡಿ, ನಮ್ಮ ದೇಶದಲ್ಲಿಯ ಕಾನೂನಿಗೆ ಏನಾಗಿದೆ? ಕಾನೂನು ಬಿಗಿಯಾಗಿದ್ದರೆ ರೇಪಿಸ್ಟರ ಮನೋಬಲ ಕುಸಿಯುತ್ತಿತ್ತು. ಅತ್ಯಾಚಾರ ಪ್ರಕರಣಗಳಾದರೂ ಕಡಿಮೆಯಾಗುತ್ತಿದ್ದವು. ಸ್ನೇಹಿತರೊಬ್ಬರು ಹೇಳುತ್ತಾರೆ ''ದಿಲ್ಲಿಯ ರೇಪು ಸುದ್ದಿಯನ್ನು ಕೇಳಿ ನನ್ನ ಗಂಡಸ್ತನದ ಬಗ್ಗೇ ಅಸಹ್ಯವಾಗುತ್ತಿದೆ / ಹಾಗೆಯೇ ಎಂದೂ ಹುಟ್ಟದ ಮಗಳೂ ನೆನಪಾದಳು'' ಎಂಬಂತಹ ವಿಷಾದಗಳು ಮನಸ್ಸನ್ನು ಕಲಕುತ್ತಿವೆ. ತನ್ನದೇ ೩ ವರ್ಷದ ಮಗಳ ಮೇಲೆ ಅತ್ಯಾಚಾರಗೈದ ಬೆಂಗಳೂರಿನ ಪಾಸ್ಕಲ್, ಸಿಂಧನೂರಿನ ೭ ವರ್ಷದ ಮಗಳ ಮೇಲೆ ಅತ್ಯಾಚಾರಗೈದ ಜನತಾ ಕಾಲೋನಿಯ ಅಪ್ಪ, ಚಾಕಲೇಟಿನ ನೆಪ, ಗೊಂಬೆ ಕೊಡಿಸುವ ನೆಪದಲ್ಲಿ ೧೧ ವರ್ಷ, ೮ ವರ್ಷದ ಬಾಲಕಿಯರ ಮೇಲೆ ಅತ್ಯಾಚಾರಗೈದಿದ್ದಾರೆ. ರಾಷ್ಟ್ರಾಧ್ಯಕ್ಷೆಯಾಗಿದ್ದ ಪ್ರತಿಭಾ ಪಾಟೀಲರು ಗಲ್ಲು ಶಿಕ್ಷೆಯಾದ ೩೦ ಜನರಿಗೆ ಜೀವಾವಧಿ ಶಿಕ್ಷೆಗಿಳಿಸಿದ್ದಾರೆ. ಅದರಲ್ಲಿ ೫ ಜನ ರೇಪಿಸ್ಟರಾಗಿದ್ದರು. ೨೦೧೨ರಲ್ಲಿ ದೆಹಲಿಯಲ್ಲಿ ನಡೆದ ೨೬೪೪ ಅತ್ಯಾಚಾರ ಪ್ರಕರಣಗಳಲ್ಲಿ ಶಿಕ್ಷೆಯಾಗಿದ್ದು ಕೇವಲ ೧೯೦ ಪ್ರಕರಣಗಳಲ್ಲಿ ಮಾತ್ರ – ಇದು ಗೃಹ ಸಚಿವಾಲಯದ ಅಂಕಿ-ಅಂಶಗಳು.

ಆರು ತಿಂಗಳ ಹೆಣ್ಣು ಶಿಶುವಿನಿಂದ ಹಿಡಿದು ೮೦ ವರ್ಷದ ಮುದುಕಿಯರವರೆಗೂ ಅತ್ಯಾಚಾರ ನಡೆಯುತ್ತಿವೆ. ಅಮೇರಿಕಾ, ದಕ್ಷಿಣ ಆಫ್ರಿಕಾಗಳ ನಂತರ ಹೆಚ್ಚಿನ ಅತ್ಯಾಚಾರಗಳು ನಡೆಯುತ್ತಿರುವುದು ಭಾರತದಲ್ಲಿ. ಭಾರತದಲ್ಲಿ ನಡೆಯುವ ೭೦ ಅತ್ಯಾಚಾರಗಳಲ್ಲಿ ಕೇವಲ ಒಂದು ಮಾತ್ರ ದಾಖಲಾಗುತ್ತದೆ. ವರದಿಯಾದ ನೂರು ಪ್ರಕರಣಗಳಲ್ಲಿ ೯೦ರಷ್ಟು ಜನ ಮರ್ಯಾದೆಯಿಂದ ಖುಲಾಸೆಯಾಗುತ್ತಾರೆ. ಇದಕ್ಕೆ ಭ್ರಷ್ಟ ವ್ಯವಸ್ಥೆಯೇ ಕಾರಣ. ರಾಜಕಾರಣಿ, ಪೊಲೀಸರು, ಕಾನೂನುಗಳು ಅತ್ಯಾಚಾರಿಗೆ ಶಿಕ್ಷಿಸುವ ಬದಲು ಹೆಣ್ಣಿಗೇ ''ನೀನು ಹೊರಗೆ ಏಕೆ ಹೋಗಿದ್ದೆ?'', ''ನೀನು ಸೀರೆ ಏಕೆ ಉಟ್ಟಿಲ್ಲ?'', ''ರಾತ್ರಿ ಹೊರಗೆ ಹೋಗಬಾರದು'', ''ರಾತ್ರಿ ಪಾಳಿ ಕೆಲಸ ಮಾಡಬೇಡ'' ಎನ್ನುವ ಧಾರಾಳ ನೀತಿ ಪಾಠಗಳು ಸಿಗುತ್ತವೆ. ಅವಳೇ ದೌರ್ಜನ್ಯಕ್ಕೆ ಆಹ್ವಾನ ನೀಡುತ್ತಿದ್ದಾಳೆಂದು ನೋವಿನಲ್ಲಿರುವವಳಿಗೆ ಮತ್ತೊಂದು ಏಟು ಕೊಡುತ್ತಾರೆಯೇ ವಿನಾ ತಪ್ಪಿತಸ್ಥ ಅತ್ಯಾಚಾರಿಗೆ ಶಿಕ್ಷಿಸುವುದರ ಕಡೆ ಗಮನಹರಿಸುವುದಿಲ್ಲ.. ಆದದ್ದು ಆಯಿತು ಕಂಪ್ಲೇಂಟ್ ಮಾಡಿ ಉಪಯೋಗವೇನು? ಎಂದು ಸಂಧಾನ ಮಾಡಿ ಚೂರು ಪಾರು ಹಣ ಕೊಡಿಸಿ ಕಳಿಸುವ ಕಿರಾತಕ ಮುಂದಾಳು, ರಾಜಕಾರಣಿ, ಪೊಲೀಸರಿದ್ದಾರೆ.

ರಾಷ್ಟ್ರಕ್ಕೆ ಸ್ವಾತಂತ್ರ್ಯ ಸಿಕ್ಕು ೬೫ ವರ್ಷ ಕಳೆದರೂ ಮಹಿಳೆಗೆ ಸ್ವಾತಂತ್ರ್ಯ ಸಿಗುವುದು ಯಾವಾಗ? ಹೆಣ್ಣಿನ ಮಾನವ ಹಕ್ಕುಗಳ ರಕ್ಷಣೆ ಹೇಗೆ? ಅವಳಿಗೆ ಘನತೆಯ ಬದುಕು ದಕ್ಕುವುದಾದರೂ ಯಾವಾಗ? ಸಾರ್ವಜನಿಕ ಪ್ರಜ್ಞೆ ಜಾಗ್ರತವಾಗುವುದು ಯಾವಾಗ? ಒಡಿಸಾದಲ್ಲಿ ಮಹಿಳೆಗೆ ಚುಡಾಯಿಸಿದ ಆರೋಪಿ ಪರ ಯಾವೊಬ್ಬ ವಕೀಲನೂ ಸೇವೆ ನಿರಾಕರಿಸಿದ್ದಾರೆ. ಅಲ್ಲಿನ ಬಾರ್ ಅಸೋಸಿಯೇಶನ್ ಚುಡಾಯಿಸಿದ ಆರೋಪಿಪರ ವಕಾಲತ್ತು ಮಾಡದಿರುವ ತೀರ್ಮಾನ ಕೈಗೊಂಡಿದೆ. ಹೀಗೆ ಪ್ರಜ್ಞೆ ಭಾರತದಾದ್ಯಂತ ಜಾಗೃತವಾಗಿ ಅತ್ಯಾಚಾರಿಗಳ ಪರ ವಕಾಲತ್ತು ಮಾಡಬಾರದು. ಉತ್ತರ ಪ್ರದೇಶದ ''ಗುಲಾಬಿ ಗ್ಯಾಂಗ್'' ಅತ್ಯಾಚಾರಿಯ ಜನನಾಂಗವನ್ನೇ ಕೊಯ್ದು ಬಿಡುವ ಪ್ರತಿಜ್ಞೆ ಕೈಗೊಂಡಿದ್ದಾರೆ. ಅತ್ಯಾಚಾರ ವಿರೋಧಿ ಆಂದೋಲನ ಎಚ್ಚೆತ್ತ ನಾಗರೀಕರ ಸಾಕ್ಷಿ ಪ್ರಜ್ಞೆಯ ಪ್ರತೀಕವಾಗಿದೆ. ಕಾನೂನು ಪಾಲನೆ, ಜನರ ಪ್ರತಿರೋಧ, ರಾಜಕೀಯ ಇಚ್ಛಾಶಕ್ತಿ, ಎಲ್ಲವನ್ನೂ ಪ್ರಶ್ನಿಸುತ್ತದೆ. ಸಾರ್ವಜನಿಕರ ಆಕ್ರೋಶ, ಸಾಮಾಜಿಕ ಪ್ರಜ್ಞೆ ಮತ್ತು ಜವಾಬ್ದಾರಿಯ ಸಂಕೇತವಾಗಿದೆ. ಪ್ರತಿಭಟನೆಯ ಧ್ವನಿಯನ್ನೇ ಕಳೆದುಕೊಳ್ಳುತ್ತಿದ್ದ ಯುವಜನತೆಗೆ ಬಡಿದೆಬ್ಬಿಸಿದೆ. ಭಾರತದಾದ್ಯಂತ ಆಕ್ರೋಶ ಮುಗಿಲು ಮುಟ್ಟಿದೆ. ಆದರೆ ದೆಹಲಿಯಲ್ಲಿ ಅತ್ಯಾಚಾರ ನಡೆದುದಕ್ಕೆ ಪ್ರತಿಭಟನೆಯಾದರೆ ಸಾಕೆ?

ಅದು ದಿಲ್ಲಿಯಲ್ಲಾಗಲಿ ಹಳ್ಳಿಯಲ್ಲಾಗಲಿ ಅತ್ಯಾಚಾರದ ನೋವು ನೋವೇ ತಾನೇ? ಬೆಳ್ತಂಗಡಿ, ಕಾಸರಗೋಡು, ಬೆಳಗಾಂನಲ್ಲಿ ನಡೆದ ಅತ್ಯಾಚಾರ, ಸಾವು ಪ್ರಕರಣಗಳ ಹಿಂದಿನ ರಾಜಕಾರಣವೇನು? ಈ ಎಲ್ಲ ಘಟನೆಗಳ ಅಪರಾಧಿಗಳನ್ನು ಶಿಕ್ಷಿಸುವುದು ಯಾವಾಗ? ಅಪರಾಧಿಗಳು ರಾಜಾರೋಷವಾಗಿ ಧಾರ್ಮಿಕ, ರಾಜಕೀಯ ನಾಯಕರ ಬೆಂಬಲ ಪಡೆದು ತಿರುಗುತ್ತಿದ್ದಾರೆ. ಪರಪೀಡನೆಯಿಂದ, ಅತ್ಯಾಚಾರದಿಂದ ಸಂತೋಷ ಪಡುವ ಮನೋವಿಕಾರದ ಸಂಸ್ಕೃತಿ ಸರ್ವವ್ಯಾಪಿಯಾಗಿದೆ. ಮಹಿಳೆಯನ್ನು ಮನಬಂದಂತೆ ಉಪಯೋಗಿಸಿ ಬಿಸಾಕುವ, ಪಶು ಸಂಸ್ಕೃತಿ ಬೆಳೆಯುತ್ತಿದೆ. ವ್ಯವಸ್ಥೆಯೇ ಭ್ರಷ್ಟವಾದಾಗ ರಕ್ಷಣೆಗಾಗಿ ಯಾರ ಮೊರೆ ಹೋಗಬೇಕು? ತ್ವರಿತಗತಿ ನ್ಯಾಯಾಲಯ ಸ್ಥಾಪನೆ ಅವಶ್ಯ ಹೆಜ್ಜೆಯಾಗಿದೆ. ನ್ಯಾಯಮೂರ್ತಿ ವರ್ಮಾರವರ ನೇತೃತ್ವದ ಆಯೋಗ ಅತ್ಯುತ್ತಮ ಪ್ರಸ್ತಾಪ ನೀಡುವುದರ ಮೂಲಕ ನೊಂದವರ ನೆರವಿಗೆ ನಿಲ್ಲಬೇಕಾಗಿದೆ.

**ಡಾ॥ ಕೆ. ಷರೀಫಾ**
ನಂ. ೪, ೬ನೇ ಅಡ್ಡರಸ್ತೆ
ರಹಮತ್‌ನಗರ
ಬೆಂಗಳೂರು - ೫೬೦ ೦೩೨






# ಬುಧ, ಮಂಗಳ ಸಮಾಗಮ

ತಿಂಗಳ ಮೊದಲದಿನವೇ ಸಂಜೆ ಪಶ್ಚಿಮದತ್ತ ದೃಷ್ಟಿ ಹರಿಸಿ. ಸಂಜೆಗೆಂಪಿನ ನಡುವೆ ಚುಕ್ಕೆಯೊಂದು ಕಾಣುತ್ತದೆ; ಸ್ವಲ್ಪ ಗಮನವಿರಿಸಿ ನೋಡಿದಲ್ಲಿ ಇನ್ನೂ ಒಂದು ಚುಕ್ಕೆ ಕಾಣುತ್ತದೆ. ಪ್ರತಿ ಸಂಜೆಯೂ ಗಮನ ಹರಿಸಿ. ದಿನಗಳೆದಂತೆ ಎರಡೂ ಚುಕ್ಕೆಗಳು ಸಮೀಪಿಸಿದಂತೆ ಕಾಣುತ್ತವೆ. ಪ್ರಕಾಶಮಾನವಾದದ್ದು ಬುಧ ಇನ್ನೊಂದು ಮಂಗಳ. ಈ ಎರಡೂ ಕೆಂಪಾಗಿಯೇ ಕಾಣುತ್ತವೆ. ಕಾರಣ ನಮ್ಮ ಭೂಮಿಯ ವಾತಾವರಣ. ದಿಗಂತದ ಅಂಚಿನಲ್ಲಿ ಸೂರ್ಯ, ಚಂದ್ರ ಮಾತ್ರವಲ್ಲ ಎಲ್ಲ ಗ್ರಹ ನಕ್ಷತ್ರಗಳೂ ಕೆಂಪಾಗಿಯೇ ಕಾಣುತ್ತವೆ ಎಂಬುದರ ಪ್ರಾತ್ಯಕ್ಷಿಕೆ ಇದು.




ಎಂಟರಂದು ಎರಡೂ ಚುಕ್ಕೆಗಳು ಸಮೀಪವಾಗಿ ಪುನಃ ದೂರ ದೂರ ಸರಿಯುತ್ತವೆ. ಪ್ರಕಾಶಮಾನವಾದ ಬುಧ ಮೇಲೇರುವುದು. ಕ್ಷೀಣವಾದ ಮಂಗಳ ದಿಗಂತದ ಅಂಚಿಗೆ ಸರಿಯುವುದು. ಬುಧವನ್ನು ನೋಡಲು ಈ ತಿಂಗಳ ವಿಶೇಷ ಅವಕಾಶ ೧೬ರಂದು. ಆ ದಿನ ಅದು ಗರಿಷ್ಠ ಎತ್ತರದಲ್ಲಿ ಕಾಣುತ್ತದೆ.

ಇದಾದ ನಂತರ ಇನ್ನೊಂದು ವಿಶೇಷವನ್ನೂ ಗಮನಿಸಬಹುದು. ದೂರ ಸರಿದಿದ್ದ ಈ ಎರಡು ಚುಕ್ಕೆಗಳು ಮತ್ತೆ ಹತ್ತಿರವಾಗುತ್ತವೆ. ೨೪ರಂದು ಎರಡರ ಸಮಾಗಮ ಪುನಃ ನಡೆಯಲಿದೆ. ಬುಧ ೧೬ರ ನಂತರ ಹಿನ್ನಡೆಯುವುದೇ ಇದಕ್ಕೆ ಕಾರಣ. ತಿಂಗಳ ಕೊನೆಗೆ ಎರಡೂ ಮರೆಯಾಗುತ್ತವೆ.

ಸಂಜೆ ಕಾಣುವ ಇನ್ನೊಂದು ಗ್ರಹ ಗುರು; ಸಂಜೆ ನೆತ್ತಿಯ ಮೇಲೆಯೇ ಕಾಣುತ್ತದೆ. ೧೮ರಂದು ಚಂದ್ರ ಗುರುಗ್ರಹವನ್ನು ಮರೆಮಾಡುವ ಆಚ್ಛಾದನೆ ನಡೆಯುತ್ತದೆ. ಆದರೆ ನಮಗೆ ಅವೆರಡೂ ಹತ್ತಿರ ಇರುವಂತೆ ಮಾತ್ರ ಕಾಣುತ್ತವೆ.

೨ ನೆಯ ತಾರೀಖು ಬೆಳಗಿನ ಜಾವ ಚಂದ್ರನನ್ನು ಹುಡುಕಿ. ಆ ದಿನ ಚಿತ್ರಾ ನಕ್ಷತ್ರವನ್ನು ಚಂದ್ರ ಮರೆಮಾಡುತ್ತದೆ. ಅದೂ ಕೂಡ ನಮಗೆ ಕಾಣುವುದಿಲ್ಲ, ಆದರೆ ಆ ಸಂದರ್ಭವನ್ನು ಬಳಸಿ ಚಿತ್ರಾ ನಕ್ಷತ್ರವನ್ನು ಗುರುತುಮಾಡಿಕೊಳ್ಳಬಹುದು. ಅದಕ್ಕೆ ತುಸು ಕೆಳಗೆ ಅಂದರೆ ಪೂರ್ವಕ್ಕೆ ಕಾಣುವುದೇ ಶನಿ ಗ್ರಹ. ಮರುದಿನ ಚಂದ್ರ ಶನಿಗ್ರಹದ ಪಕ್ಕಕ್ಕೆ ಕಾಣುವದು. ಈ ತಿಂಗಳಲ್ಲಿ ಹೀಗೆ ಸಂಜೆ ಬುಧ, ಮಂಗಳ, ಗುರು ಈ ಗ್ರಹಗಳನ್ನು ಸಂಜೆಯೇ ನೋಡಬಹುದು. ಶನಿ ಮತ್ತು ಶುಕ್ರ ಬೆಳಗಿನ ಜಾವ ಕಾಣುತ್ತವೆ.



ಫೆಬ್ರವರಿ ೮ರಂದು ಮುಸ್ಸಂಜೆ ಪಶ್ಚಿಮದಲ್ಲಿ ಬುಧ, ಮಂಗಳವನ್ನು ಕಾಣಬಹುದು.

ಹುಣ್ಣಿಮೆಯಂದು ಚಂದ್ರನ ಪಕ್ಕದಲ್ಲಿ ಕಾಣುವ ನಕ್ಷತ್ರವೇ ಮಘ; ಆದ್ದರಿಂದ ಈ ತಿಂಗಳಿಗೆ ಮಾಘ ಮಾಸ ಎಂದು ಹೆಸರು.

ಸಂಜೆ ಕಾಣುವ ನಕ್ಷತ್ರಪುಂಜಗಳಲ್ಲಿ ಪ್ರಮುಖವಾದುದು ಮಹಾವ್ಯಾಧ (ಒರೈಯನ್); ಇದರ ದಕ್ಷಿಣಕ್ಕೆ ಕಾಣುವ ಪ್ರಖರ ನಕ್ಷತ್ರವೇ ಲುಬ್ಧಕ ಅಥವಾ ಸಿರಿಯಸ್. ಇನ್ನೂ ದಕ್ಷಿಣಕ್ಕೆ ಅಗಸ್ತ್ಯ (ಕನೋಪಸ್). ಅಗಸ್ತ್ಯ, ಲುಬ್ಧಕ ಮತ್ತು ಮಹಾವ್ಯಾಧ ಪುಂಜದ ಪ್ರಖರ ನಕ್ಷತ್ರವೊಂದನ್ನು ಸೇರಿಸಿ ಸಮಬಾಹು ತ್ರಿಕೋಣವನ್ನು ಕಲ್ಪಿಸಿಕೊಳ್ಳಬಹುದು.

ಗುರುಗ್ರಹದ ಸಮೀಪವೇ ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳನ್ನು ಕಾಣಬಹುದು. ಮೇಷ, ವೃಷಭ, ಮಿಥುನ, ಕಟಕ ಇವುಗಳನ್ನು ಸುಲಭವಾಗಿ ಗುರುತಿಸಬಹುದು. ಮೀನ ಮತ್ತು ನಕುಲ ಪಶ್ಚಿಮದ ಅಂಚಿಗೆ ಸರಿದಿರುತ್ತವೆ. ಮಿಥುನ ಮತ್ತು ವೃಷಭದ ನಡುವೆ ಸ್ವಲ್ಪ ಉತ್ತರಕ್ಕೆ ಇರುವುದೇ ಪಂಚಕೋಣಾಕೃತಿಯ ವಿಜಯಸಾರಥಿ (ಆರಿಗಾ). ಇದರಲ್ಲಿಯ ಪ್ರಖರ ನಕ್ಷತ್ರ ಬ್ರಹ್ಮಹೃದಯ (ಕಪೆಲ್ಲಾ). ವಾಯುವ್ಯದ ಅಂಚಿನಲ್ಲಿ ದ್ರೌಪದಿ (ಆಂಡ್ರೊಮೆಡಾ), ಉತ್ತರದಲ್ಲಿ ಕುಂತಿ (ಕೆಸಿಯೋಪಿಯಾ), ಪಾರ್ಥ (ಪರ್ಸಿಯಸ್), ದಕ್ಷಿಣದಲ್ಲಿ ಮಹಾಶ್ವಾನ (ಕ್ಯಾನಿಸ್ ಮೇಜರ್), ವೈತರಣೀ (ಎರಿಡಾನಿಸ್) ಇವು ಸ್ಪಷ್ಟವಾಗಿ ಕಾಣುತ್ತವೆ. ಆಕಾಶಗಂಗೆಯ ಒಂದು ಭಾಗ ಮಹಾಶ್ವಾನ, ಮಹಾವ್ಯಾಧದ ಮೂಲಕ ಹಾದು ಉತ್ತರದ ಕುಂತಿಯ ಕಡೆಗೆ ಸಾಗುತ್ತದೆ.

### ಖಗೋಳ ದಿನಚರಿ

- ೨ (ಮುಂಜಾವು) ಶನಿ - ಚಂದ್ರ ಜೋಡಿ*
- ೩ ಚಾಂದ್ರಮಾಸದ ಕೊನೆಯಪಾದ (ಚಂದ್ರೋದಯ ನಡುರಾತ್ರಿಗೆ)
- ೭ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ
- ೮ (ಸಂಜೆ) ಮಂಗಳ - ಬುಧ ನಡುವೆ ಕನಿಷ್ಠ ಕೋನ*
- ೯ (ಮುಂಜಾವು) ಶುಕ್ರ - ಚಂದ್ರ ಜೋಡಿ*
- ೧೦ ಅಮಾವಾಸ್ಯೆ ೧೨:೫೦ಕ್ಕೆ
- ೧೧ (ಸಂಜೆ) ಚಂದ್ರ - ಮಂಗಳ - ಬುಧ ಇವುಗಳ ಪುಟ್ಟ ಗುಂಪು*
- ೧೬ (ಸಂಜೆ) ಬುಧ ಗ್ರಹದ ಗರಿಷ್ಠ ಕೋನೋನ್ನತಿ*
- ೧೭ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
- ೧೮ (ಸಂಜೆ) ಗುರು - ಚಂದ್ರ ಜೋಡಿ*
- ೧೯ ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ
- ೨೦ ಶನಿಗ್ರಹದ ಹಿನ್ನಡೆ ಆರಂಭ
- ೨೪ (ಸಂಜೆ) ಬುಧ - ಮಂಗಳ ಜೋಡಿ*
- ೨೬ ಹುಣ್ಣಿಮೆ ೦೧:೫೬ಕ್ಕೆ (ಚಂದ್ರನ ಪಕ್ಕ ಮಘ ನಕ್ಷತ್ರ)

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧


ಉದ್ಯೋಗನಿರತ ಕಾರ್ಮಿಕರು

# ಎಲ್ಲಿದೆ ಬರಗಾಲ ? ಯಾರಿಗೆ ೧೫೦ ದಿನಗಳ ಉದ್ಯೋಗ ಖಾತರಿ ?

ಶಾರದಾ ಗೋಪಾಲ

> ನಾಗರಿಕರ ಏಳಿಗೆಗಾಗಿ ಸರಕಾರ ಹತ್ತಾರು ಯೋಜನೆಗಳನ್ನು ಮಾಡುತ್ತದೆ. ಆದರೆ ಅದನ್ನು ಜಾರಿಗೊಳಿಸಬೇಕಾದ ಅಧಿಕಾರಿಗಳಲ್ಲಿ ತಮ್ಮ ಜನರ ಬಗ್ಗೆ ಕಳಕಳಿ ಮತ್ತು ಸೂಕ್ಷ್ಮತೆಯನ್ನು ತರದ ಹೊರತು ಈ ಎಲ್ಲ ಯೋಜನೆ, ಕಾನೂನುಗಳೂ ನೀರಲ್ಲಿ ಮಾಡಿದ ಹೋಮಗಳೇ ಆಗುತ್ತವೆನ್ನಲು ಉದ್ಯೋಗ ಖಾತರಿ ಕಾನೂನೇ ಸಾಕ್ಷಿ. ತಮ್ಮದಾದುದನ್ನು ಪಡೆದುಕೊಳ್ಳಲು ನಾಗರಿಕರು ಹೋರಾಟಕ್ಕಿಳಿಯದೆ ಬೇರೆ ದಾರಿಯೇ ಇಲ್ಲವಲ್ಲ!

ಆ ಊರಿಗೆ ಹೋದಾಗ ಎಲ್ಲ ಮನೆಗಳ ಕಟ್ಟೆಗಳ ಮೇಲೂ ಹೆಣ್ಣುಮಕ್ಕಳು. ಗಲ್ಲಕ್ಕೆ ಕೈಕೊಟ್ಟು ಕುಳಿತವರು, ಶೂನ್ಯದಲ್ಲಿ ದೃಷ್ಟಿ ಇಟ್ಟು ಕುಳಿತವರು. 'ಮಳಿ ಇಲ್ಲ, ಬೆಳಿ ಇಲ್ಲ, ಕೆಲಸ ಕೇಳಿದರೆ ಈ ಪಂಚಾಯತಿಯವರು ಕೊಡುವುದಿಲ್ಲ' ಎಂದು ಸಪ್ಪೆ ಮೋರೆ ಮಾಡಿ ಕುಳಿತವರು.

ಧಾರವಾಡ ಜಿಲ್ಲೆಯ ಮುಕ್ಕಲ ಗ್ರಾಮದಲ್ಲಿ ಜನರು ಮಾಡುತ್ತಿದ್ದ ಕಾಮಗಾರಿಯನ್ನು ರಾತ್ರೋ ರಾತ್ರಿ ಜೆಸಿಬಿ ಬಂದು ಮಾಡಿ ಮುಗಿಸಿತು. ರಾಮನಾಳ ಗ್ರಾಮದ ಮಹಿಳೆಯರು ಅರ್ಜಿ ಹಾಕಿದ್ದಕ್ಕೆ ಅವರಿಗೆ ನೀಗಲಾರದ ಕೆಲಸ ಕೊಟ್ಟು ಮತ್ತೆ ಬಾರದಂತೆ ತಡೆಯಲಾಯಿತು. ತಬಕದ ಹೊನ್ನಳ್ಳಿಯಲ್ಲಿ ಕೂಲಿ ಮಾಡಿದ್ದಕ್ಕೆ ಸಂಬಳವನ್ನು ೪ ತಿಂಗಳಾದರೂ ಕೊಡದಿದ್ದಾಗ ಮತ್ತೆ ಪಂಚಾಯತಿ ಕೆಲಸಕ್ಕೆ ಹೋಗಲೇಬಾರದೆಂದು ಜನ ನಿರ್ಧರಿಸ ಬೇಕಾಯಿತು. ತಾವರಗೆರೆಯಲ್ಲಿ ಕೆಲಸ ಮಾಡಿ ಕೂಲಿ ಹಣ ತೆಗೆದುಕೊಳ್ಳಲು ಹೊರಟಿದ್ದ ಜನರನ್ನು ತಡೆದು ಕೈಯಲ್ಲಿ ಒಂದಷ್ಟು ಹಣವಿಟ್ಟು ಮತ್ತೆ ಕೆಲಸಕ್ಕೆ ಹೋಗದಂತೆ ತಡೆ ಹಿಡಿಯಲಾಗಿದೆ. ಇನ್ನು ಕಾಶೇನಟ್ಟಿ, ಹುಲಿಕೆರಿಗಳಲ್ಲಂತೂ ಅರ್ಜಿ ಹಾಕಿ ವರ್ಷವೊಂದಾದರೂ ಉದ್ಯೋಗಾರ್ಥಿ ಗಳಿಗೆ ಉದ್ಯೋಗ ಚೀಟಿಗಳೇ ಸಿಗುತ್ತಿಲ್ಲ.

ಪಂಚಾಯತಿಗಳಿಗೆ ಕೆಲಸ ಕೇಳಿಕೊಂಡು ಹೋದಾಗ ಧಾರವಾಡ ಜಿಲ್ಲೆಯ ಬೇರೆ ಬೇರೆ ಗ್ರಾಮಗಳಲ್ಲಿ ನಡೆದ, ನಡೆಯುತ್ತಿರುವ ಜನರ ಅನುಭವಗಳಿವು. ಬೇರೆ ಜಿಲ್ಲೆಗಳಲ್ಲಿ ಅನುಭವ ಬೇರೆಯದಿರಬಹುದೆಂದು ನೀವು ತಿಳಿದಿದ್ದರೆ ಅದು ತಪ್ಪು ಕಲ್ಪನೆ. ರಾಯಚೂರು ಜಿಲ್ಲೆ, ಚಾಮರಾಜ ನಗರ ಜಿಲ್ಲೆ, ಬಾಗಲಕೋಟ ಜಿಲ್ಲೆಗಳಲ್ಲೂ ಇದೇ ಕತೆಗಳು, ಇಂಥಹುದೇ ಅನುಭವಗಳು. ಚೆನ್ನಪಟ್ಟಣ ತಾಲೂಕಿನಲ್ಲಂತೂ ಕಳೆದ ವರ್ಷ ಕಡೆಗೂ ಜನರಿಗೆ ಉದ್ಯೋಗವನ್ನೇ ಕೊಡದಿದ್ದಾಗ, ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯವರೆಗೆ ಹೋಯಿತದು.

ಬಾಗಲಕೋಟೆ ಜಿಲ್ಲೆಯ ಬಾದಾಮಿ, ಹುನಗುಂದ ಮತ್ತು ಬಾಗಲಕೋಟೆ ತಾಲೂಕುಗಳ ವಿವಿಧ ಪಂಚಾಯತಿ ಗಳಲ್ಲಿ ಉದ್ಯೋಗ, ಕೂಲಿ ಮುಂತಾದ ಉದ್ಯೋಗ ಖಾತ್ರಿಗೆ ಸಂಬಂಧಪಟ್ಟ ಯಾವುದೇ ವಿಚಾರವನ್ನು ಒಯ್ದರೂ ಗ್ರಾಮ ಪಂಚಾಯತಿಗಳಲ್ಲಾಗಲೀ, ತಾಲೂಕು ಪಂಚಾಯತಿಗಳಲ್ಲಾಗಲೀ, ಜಿಲ್ಲಾ ಪಂಚಾಯತಿಗಳಲ್ಲಾಗಲೀ ನಿರಾಸಕ್ತಿಯ ಹೊರತು ಯಾವುದೇ ರೀತಿಯ ಸ್ಪಂದನೆ ಕಾಣುತ್ತಿರಲಿಲ್ಲ. ಮಳೆಯನ್ನೇ ಕಾಣದೆ ಬರಪೀಡಿತ ವಾಗಿರುವ ಈ ಜಿಲ್ಲೆಯಲ್ಲಿ ಈ ವರ್ಷ ೧೫೦ ದಿನಗಳ ಉದ್ಯೋಗವನ್ನು ಕೊಡಬೇಕು. ಆದರೆ ಅರ್ಧ ವರ್ಷ ಕಳೆದರೂ ಇನ್ನೂವರೆಗೆ ಉದ್ಯೋಗ ಖಾತರಿ ಕೆಲಸಗಳನ್ನು ಆರಂಭಿಸಲು ಬೇಕಾದ ಕ್ರಿಯಾ ಯೋಜನೆಗಳನ್ನು ಕೂಡ ಎಷ್ಟೋ ಗ್ರಾಮ ಪಂಚಾಯತಿಗಳು ಮಾಡುತ್ತಿಲ್ಲ. ಜಿಲ್ಲೆಯಲ್ಲಿ ಉದ್ಯೋಗ ಖಾತರಿ ಕೆಲಸಗಳನ್ನು ಜಾರಿಗೊಳಿಸಬೇಕಾದ ಜಿಲ್ಲಾ ಪಂಚಾಯತಿಯು ಮೌನವಾಗಿದೆ, ಜಿಲ್ಲಾಡಳಿತದ ಮೌನವನ್ನೇ ಮಾದರಿಯಾಗಿಟ್ಟುಕೊಂಡು ಇಡೀ ಪಂಚಾಯತಿ ವ್ಯವಸ್ಥೆಯು ನಿರ್ಲಿಪ್ತವಾಗಿ ಕುಳಿತಿದೆ. ಮತ್ತೆ ಮತ್ತೆ ಕೇಳಿ ಕೇಳಿ ರೋಸಿಹೋದ ಜನ ಕಡೆಗೆ ಕೆಲಸ, ಕೂಲಿ ಹಣ ಪಡೆದೇ ಪಡೆಯುವೆವೆಂದು ಕಳೆದ ಅಕ್ಟೋಬರ್ ೩೦ರಿಂದ ಸಾವಿರಾರು ಕೂಲಿಕಾರರು ಬಾಗಲಕೋಟೆ ಜಿಲ್ಲಾ ಪಂಚಾಯತಿಯ ಮುಂದೆ ಧರಣಿ ಕುಳಿತರು.

ಜಿಲ್ಲಾ ಪಂಚಾಯತಿಯ ಎದುರು ಸಾವಿರ ಸಂಖ್ಯೆಯಲ್ಲಿ ಜನರು ಜಮಾಯಿಸಿದ್ದು, ಇಡೀ ದಿನ ಧರಣಿ ಕುಳಿತದ್ದು, ಬೀದಿಯಲ್ಲೇ ಅಡಿಗೆ ಮಾಡಿ ಉಂಡಿದ್ದು, ಸಂಜೆಯಾದರೂ ಎದ್ದು ಹೋಗದೇ ಇದ್ದುದು ಬಹುಶಃ ಬಾಗಲಕೋಟೆ ಜಿಲ್ಲಾ ಪಂಚಾಯತಿಯ ಇತಿಹಾಸದಲ್ಲೇ ಮೊದಲೇನೋ. ದೂರದ ಹುನಗುಂದ, ಬಾದಾಮಿ ಜಿಲ್ಲೆಗಳ ಹತ್ತಾರು ಗ್ರಾಮಗಳಿಂದ ಕೂಲಿಕಾರರು ವಾರಕ್ಕಾಗುವಷ್ಟು ರೊಟ್ಟಿ, ಅಕ್ಕಿ, ಖಾರ ಮತ್ತು ಕಟ್ಟಿಗೆಯನ್ನು ಕಟ್ಟಿಕೊಂಡು ಎಷ್ಟು ದಿನವಾದರೂ ಕುಳಿತೇ ಬಿಡಬೇಕೆಂದು ನಿರ್ಧರಿಸಿ ಬಾಗಲಕೋಟೆಗೆ ಬಂದಿದ್ದರು. ಪ್ರತಿವರ್ಷ ಕೂಲಿಯನ್ನು ಅರಸಿ ಮಂಗಳೂರಿನತ್ತ ದೌಡಾಯಿಸುವ ಜನರು ಮೊದಲ ಬಾರಿ ಉದ್ಯೋಗ ಖಾತರಿಯತ್ತ ದೃಷ್ಟಿ ಹಾಯಿಸಿದ್ದರು. ತಮ್ಮ ಹಕ್ಕಾದ, ತಮಗೆ ಸಿಗಬೇಕಾದ ಹಣವನ್ನು ಸಹಿ ಮಾಡಿ ಇನ್ನಾರಿಗೋ ಲಪಟಾಯಿಸಲು ಬಿಟ್ಟು ಬಿಡುತ್ತಿದ್ದ ಅವರು ಈಬಾರಿ ತಾವೇ ದುಡಿದು ತಮ್ಮ ಹೊಟ್ಟೆ ತುಂಬಿಕೊಳ್ಳಲು ನಿರ್ಧರಿಸಿದ್ದರು.




***ಖಾನಾಪುರದಲ್ಲಿ ಕೂಲಿ ಪಾವತಿಗಾಗಿ ಧರಣಿ***

ಆದರೆ ಕೇಂದ್ರ ಸರಕಾರವೆಂಬ ದೇವರು ಹಕ್ಕಾಗಿ ಕೊಟ್ಟಿದ್ದನ್ನು ಅರ್ಥೈಸಿಕೊಳ್ಳದೆ ಅಡ್ಡಗಾಲು ಹಾಕಿ ಕುಳಿತಿದ್ದ ಪಂಚಾಯತಿಯ ಪೂಜಾರಿಗಳು ಕೂಲಿ ಜನರಿಗೆ ಉದ್ಯೋಗ ಖಾತರಿಯ ಹತ್ತಿರವೂ ಹಾಯಲು ಬಿಡದಾಗಿದ್ದರು. ಹೇಗೆ ಬಿಡುತ್ತಾರೆ ? ಪಂಚಾಯತಿ ವ್ಯವಸ್ಥೆ ಇನ್ನೂವರೆಗೆ ಕೂಲಿ ಜನರನ್ನು ಗಂಭೀರವಾಗಿ ತೆಗೆದುಕೊಂಡಿದ್ದೇ ಇಲ್ಲ. ಕಾನೂನನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ಎನ್ನೋಣವೋ, ಯಾರಿಗೆ ಬೇಕು ಈ ಹೆಚ್ಚಿನ ಜವಾಬ್ದಾರಿ ಎಂಬ ನಿರ್ಲಿಪ್ತತೆಯೋ ಅಥವಾ ಬಂದಿದ್ದನ್ನು ಮುಂದೆ ಹೋಗಗೊಡದೆ ನುಂಗಿ ಹಾಕುವ ಹುನ್ನಾರವೋ, ಅಂತೂ ಯಾವುದೇ ಅಧಿಕಾರಿಯ ಬಳಿಗೆ ಕೂಲಿಕಾರರು ಅರ್ಜಿ ಹಿಡಿದು ಹೋಗಲಿ ಬರಿಗೈಯಲ್ಲಿ ಮರಳಬೇಕು. ಪಟ್ಟು ಬಿಡದೆ ಕೆಲಸ ದೊರಕಿಸಿಕೊಂಡರೆ ಹಾಜರಾತಿ ತುಂಬಿಕೊಳ್ಳಲು ಬರುವವರಿಲ್ಲ, ಹಾಜರಾತಿ ತುಂಬಿದರೆ ಅದನ್ನು ಪಂಚಾಯತಿಯ ಕಂಪ್ಯೂಟರಿನಲ್ಲಿ (ಎನ್.ಎಂ.ಆರ್.) ಹಾಕುವವರಿಲ್ಲ, ಅವೆರಡೂ ಮುಗಿದರೆ ಬಂದ ಕೂಲಿಕಾರರೆಷ್ಟು, ಎಷ್ಟು ಕೆಲಸವಾಯಿತು ಎಂದು ಅಳೆದು (ಎಂ.ಬಿ.) ಬರೆಯುವವರಿಲ್ಲ, ಇವೆಲ್ಲವೂ ಇಲ್ಲದೆ ಕೂಲಿ ಹಣವು ಕೈಗೆ ಬರುವುದಿಲ್ಲ.

ಹುನಗುಂದ ಪಂಚಾಯತಿಯ ಹಿರೇಮಾಗಿ, ಮೂಗನೂರ, ಚಿತ್ತರಗಿ, ದನ್ನೂರ, ರಕ್ಕಸಗಿ, ಐಹೊಳೆ ಅಮಿನಗಡ ಪಂಚಾಯತಿಗಳ ಕತೆ ಇದು. ಇನ್ನು ಬಾದಾಮಿ ತಾಲೂಕಿನ ಕೋಟೆ ಕಲ್ಲು, ಹಂಸನೂರು, ಪಟ್ಟದ ಕಲ್ಲು, ನಂದಿಕೇಶ್ವರ, ಹೊಸೂರು, ಚೊಳಚಗುಡ್ಡ, ಜಾಲಿಹಾಳ, ಬೇಲೂರುಗಳಲ್ಲಿ ಕೆಲಸ ಕೇಳಿ ಹೋದವರಿಗೆ ಕೆಲಸವನ್ನೇ ಕೊಟ್ಟಿಲ್ಲ, ಇನ್ನೂ ಕ್ರಿಯಾ ಯೋಜನೆ ತಯಾರಾಗಿಲ್ಲ ಎಂದು ಗ್ರಾಮ ಪಂಚಾಯತಿಯ ಉತ್ತರ. ಮೇಲಧಿಕಾರಿಗಳ ಬಳಿ ದೂರಿತ್ತಾಗ, ಕ್ರಿಯಾ ಯೋಜನೆಗಳೆಲ್ಲ ತಯಾರಾಗಿವೆ, ಪಂಚಾಯತಿ ಅಧಿಕಾರಿಗಳೇ ಕೆಲಸ ಮಾಡುತ್ತಿಲ್ಲ ಎಂದು ಅವರ ಪ್ರತಿ ದೂರು. ಎರಡು ದಿನ ಹಗಲು ರಾತ್ರಿಯೆನ್ನದೆ ಸಾವಿರಾರು ಜನರು ಧರಣಿ ಕುಳಿತಾಗ ಜಿಲ್ಲಾ








**ನವಕರ್ನಾಟಕ ಪ್ರಕಾಶನದಿಂದ ಹೊರತಂದಿರುವ ಶ್ರೀ ವೈ. ಜಿ. ಮುರಳೀಧರನ್ ಅವರ 'ಭ್ರಷ್ಟಾಚಾರದ ಸುಳಿಯಲ್ಲಿ ಭಾರತ' ಮತ್ತು 'Corruption - the rot within' ಎಂಬ ಎರಡು ಅಮೂಲ್ಯ ಕೃತಿಗಳನ್ನು ಲೋಕಾರ್ಪಣೆ ಮಾಡಲಾಯಿತು. ದಿನಾಂಕ ೨೦-೧-೨೦೧೩ರಂದು 'ನಯನ ಸಭಾಂಗಣ'ದಲ್ಲಿ ಆಯೋಜಿಸಲಾದ ಈ ಕಾರ್ಯಕ್ರಮದಲ್ಲಿ ಭ್ರಷ್ಟಾಚಾರ ದೇಶದಾದ್ಯಂತ ನಡೆಸುತ್ತಿರುವ ಹಾವಳಿಯ ಬಗ್ಗೆ ವೇದಿಕೆಯಲ್ಲಿದ್ದ ಗಣ್ಯರು ಸಭಿಕರಿಂದ ಕೇಳಲಾದ ಪ್ರಶ್ನೆಗಳಿಗೆ ಉತ್ತರಿಸುವ ಸಂವಾದ ಕಾರ್ಯಕ್ರಮವೂ ನಡೆಯಿತು. ಸಭೆಯ ಅಧ್ಯಕ್ಷತೆಯನ್ನು ಕೇಂದ್ರ ವಿಚಕ್ಷಣ ಆಯುಕ್ತರಾದ ಶ್ರೀ ಆರ್. ಶ್ರೀ ಕುಮಾರ್ ಅವರು ವಹಿಸಿದ್ದು ಶ್ರೀ ಎಸ್. ಆರ್. ಹಿರೇಮಠ ಹಾಗೂ ಶ್ರೀ ರವಿವರ್ಮ ಕುಮಾರ್ ಕೃತಿಗಳ ಬಿಡುಗಡೆ ಮಾಡಿದರು.**

ಪಂಚಾಯತಿ ಸಡಿಲಾಗಿ ಮಾತುಕತೆಗೆ ಮುಂದೆ ಬಂತು. ಬೇಡಿಕೆ ಇರುವ ಎಲ್ಲ ಗ್ರಾಮಗಳಲ್ಲೂ ಕೆಲಸ ಕೊಡಲು, ಕೆಲಸ ಮಾಡಿದವರಿಗೆ ಕೂಲಿ ಪಾವತಿ ಮಾಡಲು, ತಪ್ಪು ನಡೆದ ಪಂಚಾಯತಿಗಳಲ್ಲಿ ವಿಚಾರಣೆ ಮಾಡಲು ಒಪ್ಪಿಕೊಂಡಿತು. ಕೂಲಿಕಾರ್ಮಿಕ ಸಂಘಟನೆಯ ಅಂದಿನ ಪುಟ್ಟ ಗೆಲುವು ಇದು. ಒಪ್ಪಿಕೊಂಡಿದ್ದೆಲ್ಲ ಕಾರ್ಯರೂಪದಲ್ಲಿ ಬರಲು ಜನರು ಮತ್ತೆ ಅಷ್ಟೇ ಹೋರಾಡಬೇಕು ಎನ್ನುವುದು ಬೇರೆ ವಿಚಾರ.

ಉದ್ಯೋಗ ಖಾತರಿ ಯೋಜನೆಯು ಸರಿಯಾಗಿ ಲಾಗೂ ಆಗಬೇಕೆಂದರೆ ಹಳ್ಳಿಗಳ ಕೂಲಿಕಾರರಷ್ಟೇ ಅಲ್ಲ, ಇಡೀ ಪಂಚಾಯತಿ ವ್ಯವಸ್ಥೆಯೇ ಒಟ್ಟಾಗಿ ದುಡಿಯಬೇಕು. ಅಧಿಕಾರಿಗಳೂ ದುಡಿಯಬೇಕು, ಜನಪ್ರತಿನಿಧಿಗಳೂ ಸಹಕರಿಸಬೇಕು ಅಥವಾ ಸುಮ್ಮನಿರಬೇಕು. ಉದ್ಯೋಗ ಖಾತೆಯಿಂದ ಕೋಟಿಗಟ್ಟಲೆ ಹಣ ಗ್ರಾಮ ಪಂಚಾಯತಿಗೆ ಬರತೊಡಗಿದಾಗ ಕಾರ್ಯದರ್ಶಿಗೆ ಕೆಲಸ ಹೊರೆಯಾಯಿತೆಂದು 'ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ' ನೇಮಕವಾಯಿತು. ಕಂಪ್ಯೂಟರುಗಳು ಬಂದು ಕಂಪ್ಯೂಟರ್-ಮನ್‌ಗಳ ನೇಮಕವಾಯಿತು. ಇವರೆಲ್ಲರೂ ನೇಮಕವಾಗಿದ್ದು ಉದ್ಯೋಗ ಖಾತರಿಯಲ್ಲಿ ಜನರಿಗೆ ಕೆಲಸ ಕೊಡುವ ಜವಾಬ್ದಾರಿಯನ್ನು ಹೊರುವುದಕ್ಕಾಗಿ. ಏಕೆಂದರೆ ೫೦೦ ಕುಟುಂಬಗಳಿರುವ ಒಂದು ಹಳ್ಳಿಗೆ ೫೦೦ ಜಾಬ್ ಕಾರ್ಡ್‌ಗಳಾದರೂ ಬೇಕು. ಅಂಥ ಮೂರ್ನಾಲ್ಕು ಹಳ್ಳಿಗಳು ಒಂದು ಗ್ರಾಮ ಪಂಚಾಯತಿಯಲ್ಲಿ. ಇಷ್ಟು ಕುಟುಂಬಗಳಿಗೆ ೧೦೦ ದಿನಗಳ ಕೆಲಸಗಳ ಸೃಷ್ಟಿಯೆಂದರೆ ಸುಲಭದ ಮಾತಲ್ಲ. ಎಲ್ಲೆಲ್ಲಿ ಕೆರೆ ಹೂಳು ತುಂಬಿದೆ, ಯಾರ ಹೊಲದಲ್ಲಿ ಕೃಷಿ ಹೊಂಡಗಳಾಗಬೇಕು, ಸಂಪರ್ಕ ರಸ್ತೆ ನಿರ್ಮಾಣ, ಗಿಡ ನೆಡುವುದು, ಬೇಲಿ ಸವರುವುದು, ಗಟಾರು ನಿರ್ಮಾಣ ಹೀಗೆ ಹತ್ತು ಹಲವು ಉದ್ಯೋಗಗಳ ಕ್ರಿಯಾ ಯೋಜನೆಗಳು ಅವಶ್ಯಕತೆಗೆ ತಕ್ಕಂತೆ, ಬೇಡಿಕೆಗಳಿಗೆ ಅನ್ವಯವಾಗುವಂತೆ ರೂಪುಗೊಳ್ಳಬೇಕು. ದುಡಿಯಲು ಬಂದವರಿಗೆ ಕೆಲಸ ತೋರಿಸಿದರೆ ಆಗಲಿಲ್ಲ, ಅಳತೆ ಹಾಕುವುದು, ನಿತ್ಯ ಹಾಜರಿ ಪಡೆಯುವುದು, ಎನ್.ಎಂ.ಆರ್. ಜನರೇಟ್ ಮಾಡುವುದು, ಕೂಲಿ ಹಣ ಹಾಕುವುದು ಹೀಗೆ ಕಾರ್ಯದರ್ಶಿ, ಕ್ಲರ್ಕ್, ಕಂಪ್ಯೂಟರ್ ಆಪರೇಟರ್, ಇಂಜಿನಿಯರ್, ಅಧ್ಯಕ್ಷರು ಎಲ್ಲರಿಗೂ ಕೆಲಸವಿದೆ ಇಲ್ಲಿ. ಇಡೀ ಪಂಚಾಯತಿ ರಾಜ್ ವ್ಯವಸ್ಥೆಯೇ ಒಟ್ಟಾಗಿ ಕೆಲಸ ಮಾಡಿದಾಗ ಮಾತ್ರ ಇದು ಸಾಧ್ಯ.

ದುರದೃಷ್ಟದಿಂದ ಪಂಚಾಯ್ತಿ ವ್ಯವಸ್ಥೆಯಲ್ಲಿ ಎಲ್ಲರೂ ಒಟ್ಟಾಗಿ ಕೆಲಸ ಮಾಡಿದರೂ ಅದು ಜನಹಿತಕ್ಕಾಗಿಯಂತೂ ಅಲ್ಲ ಎಂಬುದು ಇಂದು ಸರ್ವವೇದ್ಯವಾಗಿದೆ. ಅಧಿಕಾರಶಾಹಿ ಮತ್ತು ಜನಪ್ರತಿನಿಧಿಗಳು ಕೂಡಿ ಆಯಾ ಗ್ರಾಮದ ಜನಸಾಮಾನ್ಯರ ಹಿತಕ್ಕಾಗಿ ಕೆಲಸ ಮಾಡಿದ ಉದಾಹರಣೆಗಳು ತೀರಾ ಅಪರೂಪ. ಅಭಿವೃದ್ಧಿ ಅಧಿಕಾರಿ ಕ್ರಿಯಾ ಯೋಜನೆ ತಯಾರಿಸಿದರೆ ಜನಪ್ರತಿನಿಧಿಗಳು ಅನುಮೋದಿಸುವುದಿಲ್ಲ. ಅವರು ಹೇಳಿದ ಕೆಲಸಗಳನ್ನು ಇವರು ತೆಗೆದುಕೊಳ್ಳುವುದಿಲ್ಲ. ಅವರಾದರೂ ಇವರನ್ನು ಪಳಗಿಸುತ್ತಾರೆ, ಇವರಾದರೂ ಅವರನ್ನು ಪಳಗಿಸುತ್ತಾರೆ. ಸ್ವಹಿತಾಸಕ್ತಿಗಾಗಿ ಮಾತ್ರ ಇಬ್ಬರೂ ಒಂದಾಗಿರುತ್ತಾರೆ. ಜನರಿಂದ ಅರ್ಜಿ ಸ್ವೀಕರಿಸಬೇಕು, ಕ್ರಿಯಾ ಯೋಜನೆಗೆ ಒಪ್ಪಿಗೆ ಪಡೆಯಬೇಕು. ಸರಿಯಾದ ಸಮಯಕ್ಕೆ ಕೆಲಸದ ಕೂಲಿ ಹಾಕಬೇಕು. ಮೇಲಿನವರು ಒಪ್ಪಿಗೆ ಕೊಡಬೇಕು, ಕೆಳಗಿನವರು ಕೆಲಸ ಮಾಡಬೇಕು. ಎರಡೂ ಕಡೆ ಜವಾಬ್ದಾರಿ ನಿರ್ವಹಣೆಯ ಮನೋಭೂಮಿಕೆಯೇ ಇಲ್ಲದಾಗ ಮೇಲಿನವರ ಮೇಲೆ ಹಾಕಿ ಕೆಳಗಿನವರು ಪಾರಾಗುತ್ತಾರೆ, ಕೆಳಗಿನವರಿಗೆ ಬಯ್ದು ಮೇಲಿನವರು ಜಾರಿಕೊಳ್ಳುತ್ತಾರೆ.

ಕೋರಿದ ಹದಿನೈದು ದಿನಗಳಲ್ಲಿ ಕೆಲಸ ಕೊಡದಿದ್ದರೆ ಆಯಾ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಜವಾಬ್ದಾರನಲ್ಲವೇ? ಕೆಲಸದ ಅಳತೆ ಹಾಕಿಕೊಡದಿದ್ದರೆ ಇಂಜಿನಿಯರ್ ಜವಾಬ್ದಾರನಲ್ಲವೇ? ಕಂಪ್ಯೂಟರಿನಲ್ಲಿ ಹಾಜರಾತಿ ತುಂಬಿ ಎನ್.ಎಂ.ಆರ್. ಜನರೇಟ್ ಮಾಡದಿದ್ದರೆ ಕಂಪ್ಯೂಟರ್ ಆಪರೇಟರ್ ಜವಾಬ್ದಾರನಲ್ಲವೇ? ಕೂಲಿ ಹಣ ಸರಿಯಾಗಿ ಪಾವತಿಯಾಗದಿದ್ದರೆ ಅಭಿವೃದ್ಧಿ ಅಧಿಕಾರಿ ಮತ್ತು ಅಧ್ಯಕ್ಷರು ಜವಾಬ್ದಾರರಲ್ಲವೇ? ಜವಾಬ್ದಾರಿಯನ್ನು ಕಿಂಚಿತ್ತೂ ನಿರ್ವಹಿಸದ ಈ ಅಧಿಕಾರಿ ವರ್ಗಕ್ಕೆ ಹೇಗೆ ಸಂಬಳ ಬಟವಡೆ ಆಗುತ್ತದೆ? ಕೂಲಿಕಾರರ ಖಾತೆಗೆ ಕೂಲಿ ಹಣ ಜಮಾ ಆಗಬೇಕಾದರೆ ಧರಣಿ ಮಾಡಲೇಬೇಕು, ಏಕೆ?

ಇಷ್ಟು ವರ್ಷಗಳಲ್ಲಿ ಉದ್ಯೋಗ ಖಾತರಿಯಿಂದ ರಸ್ತೆ, ಗಟಾರು ಕೆಲಸಗಳಾಗಿರಬಹುದು, ಬದು ನಿರ್ಮಾಣ, ಗಿಡ ನೆಡುವಂಥ ಕೆಲಸಗಳೂ ಆಗಿರಬಹುದು. ಮುಂದೆಯೂ ಆಗಬಹುದು ಆದರೆ ಆ ಕೆಲಸಗಳಿಂದ ದುಡಿಯುವ ವರ್ಗಕ್ಕೆ ದುಡ್ಡು ಸಿಕ್ಕಿದೆಯೇ ಎಂದು ಪ್ರಶ್ನೆ ಕೇಳಿದರೆ ಮಾತ್ರ ಸರಕಾರದ ದಾಖಲೆ ಹೇಳುವುದೇ ಬೇರೆ, ನಿಜ ಸ್ಥಿತಿಯೇ ಬೇರೆ. ಬೀದರ, ರಾಯಚೂರು, ಬಾಗಲಕೋಟೆ, ಬೆಳಗಾವಿಯ ಖಾನಾಪುರ, ಧಾರವಾಡದ ಕಲಘಟಗಿ, ಚಾಮರಾಜನಗರದ ಕೊಳ್ಳೆಗಾಲ, ಹಾವೇರಿ ಜಿಲ್ಲೆ



*ಕಲಘಟಗಿಯಲ್ಲಿ ಉದ್ಯೋಗಕ್ಕಾಗಿ ಧರಣಿ*

ಹೀಗೆ ಎಲ್ಲೆಲ್ಲಿ ಕೂಲಿಕಾರರು ಗ್ರಾಮೀಣ ಕೂಲಿಕಾರರ ಸಂಘಟನೆ ಸೇರಿದ್ದಾರೋ ಅಲ್ಲಿ ಹೋರಾಟ ಮಾಡಿಯೇ ಉದ್ಯೋಗವನ್ನು, ಕೂಲಿ ಹಣವನ್ನು ಪಡೆದಿದ್ದಾರೆ. ಆದರೆ ಎಲ್ಲೆಲ್ಲಿ ಒಬ್ಬೊಬ್ಬರೇ ಗುತ್ತಿಗೆದಾರರು ಕರೆದಾಗಲೋ, ಮೆಂಬರು ಕರೆದಾಗಲೋ ಹೋಗಿದ್ದಾರೋ ಅಲ್ಲಿ, 'ಕಳೆದ ವರ್ಷ ಕೂಲಿ ಹಣವನ್ನೇ ಕೊಟ್ಟಿಲ್ಲ' ಎಂಬುದೇ ಅನುಭವ.

ಈ ವರ್ಷ ಮಲೆನಾಡಿನ ಕೆಲವು ಭಾಗಗಳನ್ನು ಬಿಟ್ಟು ಇನ್ನುಳಿದೆಲ್ಲಾ ಕಡೆ ಬರಗಾಲ. ಹಾಕಿದ ಬೀಜ ಮೊಳಕೆಯೊಡೆಯಲಿಲ್ಲ, ಮೊಳಕೆಯೊಡೆದ ಸಸಿ ಮತ್ತೆ ಚಿಗುರಲಿಲ್ಲ, ಬೆಳೆಯನ್ನು ಕೊಡದ ಗಿಡಗಳನ್ನು ಕಿತ್ತು ಕಿತ್ತು ಒಗೆಯಬೇಕಾದ ಪರಿಸ್ಥಿತಿ. ಹೀಗಾಗಿ ಉತ್ತರ ಕರ್ನಾಟಕದ ತಾಲೂಕುಗಳಲ್ಲಂತೂ ಎಲ್ಲಿ ಉದ್ಯೋಗ ಖಾತರಿಯ ಮಾಹಿತಿ ಹೇಳಿದರೂ ತಕ್ಷಣವೇ ಜನರು ಗುಂಪಾಗಿ ಅರ್ಜಿ ಬರೆಸುತ್ತಾರೆ. ಪಂಚಾಯತಿಗೆ ಹೋಗುತ್ತಾರೆ. ಆದರೆ ಕಾನೂನು ಜಾರಿಯಾಗಿ ೬ ವರ್ಷಗಳೇ ಸಂದಿದ್ದರೂ ಇನ್ನೂವರೆಗೆ ಬಹುತೇಕ ಮಂದಿ ಜಾಬ್ ಕಾರ್ಡುಗಳನ್ನೇ ನೋಡಿಲ್ಲ. ಜಾಬ್ ಕಾರ್ಡ್ ಮಾಡಿಸಿದ್ದವರೂ ಅದರ ಉಪಯೋಗ ಹೇಗೆ ಎನ್ನುವುದೇ ಗೊತ್ತಿಲ್ಲದೆ ಮೆಂಬರು ಅಥವಾ ಗುತ್ತಿಗೆದಾರರಿಗೆ ಕೊಟ್ಟುಬಿಟ್ಟಿದ್ದಾರೆ.

ಕೆಲವು ತಿಂಗಳ ಹಿಂದೆ ಉದ್ಯೋಗ ಖಾತರಿಯಲ್ಲಿ 'ರಾಜ್ಯದ ಬರಪೀಡಿತ ೧೭೫ ತಾಲೂಕುಗಳಿಗೆ ೫೦ ದಿನಗಳು ಹೆಚ್ಚುವರಿ ಕೆಲಸ' ಎಂದು ಸರಕಾರವು ಘೋಷಿಸಿತು. ಆದರೆ 'ಹೆಚ್ಚುವರಿ ಹಾಜರಿಗಳು ಬಂದಿವೆ, ಕೆಲಸ ಮಾಡಿ' ಎಂದು ಹಳ್ಳಿ ಹಳ್ಳಿಗಳಲ್ಲಿ ಪ್ರಚಾರ ಮಾಡುವುದಂತಿರಲಿ, ಯಾವುದೇ ಪಂಚಾಯತಿಯಲ್ಲಿ, ತಾಲೂಕು ಪಂಚಾಯತಿಗಳಲ್ಲಿ ಅಥವಾ ಜಿಲ್ಲಾ ಪಂಚಾಯತಿಗಳಲ್ಲಿ ವಿಚಾರಿಸಿದರೂ ಇಲ್ಲ, ನಮ್ಮಲ್ಲಿ ಬಂದಿಲ್ಲ ಎಂದೇ ಉತ್ತರ. ತಾವೇ ತಿಳಿದು ಅರ್ಜಿ ಕೊಟ್ಟವರಿಗೂ ಕಂಪ್ಯೂಟರ್ ನಿಮ್ಮ ಅರ್ಜಿಯನ್ನು ಸ್ವೀಕರಿಸುತ್ತಿಲ್ಲ ಎಂದು ಹೇಳಿದರೆ ಅವರಿಗೇನು ಅರ್ಥ ಆಗಬೇಕು? ಘೋಷಣೆಗಳೇಕೆ ಆದೇಶಗಳಾಗುವುದಿಲ್ಲ? ಜನಪರ ಆದೇಶಗಳೇಕೆ ಜಾರಿಯಲ್ಲಿ ಬರುವುದಿಲ್ಲ? ೫೦ ಹೆಚ್ಚುವರಿ ದಿನಗಳು ಕೆಲಸ ಸಿಕ್ಕಿದ ೧೭೫ ತಾಲೂಕುಗಳು ಯಾವವು ಎಂಬ ಆದೇಶ ಬಂದು ತಿಂಗಳಾಗಿದ್ದರೂ ಕಂಪ್ಯೂಟರಿನಲ್ಲಿ ಜನರ ಅರ್ಜಿಗಳೇಕೆ ದಾಖಲಾಗುವುದಿಲ್ಲ?

ಕಾನೂನು, ಘೋಷಣೆ, ಆದೇಶಗಳಿಗಷ್ಟೇ ನಮ್ಮ ಜನಪರ ಕಾರ್ಯಕ್ರಮಗಳು ನಿಲ್ಲಬಾರದು. ಅಧಿಕಾರಿಗಳಲ್ಲಿ, ಜನಪ್ರತಿನಿಧಿಗಳಲ್ಲೂ ಕೂಡ ಆ ಮನೋಭಾವ ಬರಬೇಕು. ಅಂದಾಗ ಮಾತ್ರ ನಿರುದ್ಯೋಗಿಗಳ ಕೈಗೆ ಬರಪರಿಹಾರದ ಉದ್ಯೋಗ ಸಿಗುತ್ತದೆ, ಕೂಲಿಗಳ ಹೊಟ್ಟೆಯೂ ತುಂಬುತ್ತದೆ, ಬರ ಕಳೆದು ಭೂಮಿಯಲ್ಲಿ ಹಸಿರೂ ತುಂಬುತ್ತದೆ.

**ಶಾರದಾ ಗೋಪಾಲ**

ನಂ. ೫೭, ತೇಜಸ್ವಿನಗರ, ಧಾರವಾಡ - ೫೮೦ ೦೦೨




# ಸಿರಿಯಾ : ಹಸ್ತಕ್ಷೇಪಕ್ಕೆ ಪಾಶ್ಚಾತ್ಯ ದೇಶಗಳ ಸನ್ನಾಹ

ಅರಬ್ ದೇಶಗಳಲ್ಲಿ ಕಳೆದ ವರ್ಷ ಪ್ರಾರಂಭವಾದ ತಳಮಳದ ಕಾವು ಇನ್ನೂ ಆರಿಲ್ಲ. ಈಜಿಪ್ಟ್, ಲಿಬಿಯಾಗಳಲ್ಲಿ ಅಸ್ಥಿರತೆ ಮುಂದುವರಿದಿದೆ. ಜನಾಂದೋಳನ ನಡೆದ ಈ ದೇಶಗಳಲ್ಲಿ ಆಡಳಿತದ ಬದಲಾವಣೆ ಬಂದಿತೇ ಹೊರತು ಪುರೋಗಾಮಿ ಸುಧಾರಣೆಗಳೇನೂ ಆಗಲಿಲ್ಲ. ಬಲಪಂಥೀಯ ಇಸ್ಲಾಮಿಕ್ ಬ್ರದರ್ ಹುಡ್‌ದೇ ಮೇಲುಗೈ. ಸಿರಿಯಾದಲ್ಲಿ ಈ ಹಿನ್ನೆಲೆಯಲ್ಲೇ ಪ್ರಾರಂಭವಾದ ಚಳವಳಿ ಇನ್ನೂ ಮುಕ್ತಾಯದ ಹಂತ ಕಂಡಿಲ್ಲ. ೧೯೭೦ರಲ್ಲಿ ಸಿರಿಯಾದಲ್ಲಿ ಅಧಿಕಾರಕ್ಕೆ ಬಂದ ಅರಬ್ ಬಾತ್ ಸೋಷಿಯಲಿಸ್ಟ್ ಪಾರ್ಟಿ ಸರಕಾರವನ್ನು ಪದಚ್ಯುತಗೊಳಿಸಲು ನಡೆಯುತ್ತಿರುವ ಹೋರಾಟ ಸರಕಾರ ಮತ್ತು ವಿರೋಧಿಗಳ ನಡುವೆ ಸುದೀರ್ಘವಾದ ಅಂತರ್ಯುದ್ಧದಲ್ಲಿ ಪರಿಣಮಿಸಿದೆ. ಕಳೆದ ಕೆಲ ತಿಂಗಳಿಂದ ಈ ಅಂತರ್ಯುದ್ಧ ನೆನೆಗುದಿಗೆ ಬಿದ್ದಿದೆ. ಸಿರಿಯಾದಲ್ಲಿ ಆಡಳಿತದ ಬದಲಾವಣೆಗೆ ಪಟ್ಟು ಹಿಡಿದಿರುವ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ನೇರವಾದ ಹಸ್ತಕ್ಷೇಪದಲ್ಲಿ ತೊಡಗಲು ತುದಿಗಾಲ ಮೇಲೆ ನಿಂತಿವೆ. ಅಸ್ಸಾದ್ ನೇತೃತ್ವದಲ್ಲಿರುವ ಬಾತ್ ಪಾರ್ಟಿ ಸರಕಾರದ ವಿರುದ್ಧ ಹೋರಾಟದಲ್ಲಿ ನಿರತವಾಗಿರುವ ತಂಡಗಳಿಗೆ ಸಾಕಷ್ಟು ಶಸ್ತ್ರಾಸ್ತ್ರಗಳು ಮತ್ತು ಹಣದ ನೆರವನ್ನು ಈ ರಾಷ್ಟ್ರಗಳು ಒದಗಿಸುತ್ತ ಬಂದಿವೆ.

ಇದೀಗ ಪಶ್ಚಿಮ ರಾಷ್ಟ್ರಗಳು ಒಂದು ಹೆಜ್ಜೆ ಮುಂದೆ ಹೋಗಿ ಸಿರಿಯಾದ ವಿರೋಧಿ ಗುಂಪುಗಳಿಗೆ ಮಾನ್ಯತೆ ನೀಡಿವೆ. ಕಳೆದ ಡಿಸೆಂಬರ್ ತಿಂಗಳ ಎರಡನೇ ವಾರದಲ್ಲಿ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ 'ಸಿರಿಯಾದ ವಿರೋಧಿ ಗುಂಪುಗಳ ಕ್ರಾಂತಿಕಾರಿ ಕೂಟ'ವನ್ನು ಸಿರಿಯಾದ ಜನತೆಯ ಏಕೈಕ ಪ್ರಾತಿನಿಧಿಕ ಸಂಸ್ಥೆಯಾಗಿ ಅಧಿಕೃತವಾಗಿ ಮನ್ನಣೆ ನೀಡಿದ್ದಾರೆ. ಬ್ರಿಟನ್, ಫ್ರಾನ್ಸ್ ಹಾಗೂ ಪರ್ಷಿಯನ್ ಗಲ್ಫ್ ಪ್ರದೇಶದ ರಾಜಪ್ರಭುತ್ವಗಳು ಈ ಹಿಂದೆಯೇ ಈ ಕೂಟಕ್ಕೆ ಮಾನ್ಯತೆ ನೀಡಿದ್ದವು. ಸಿರಿಯಾದಲ್ಲಿ ಸಶಸ್ತ್ರ ಹೋರಾಟದಲ್ಲಿ ನಿರತವಾಗಿರುವ ತಂಡಗಳು ಒಂದುಗೂಡಿರುವುದು ಕೂಡ ಪಾಶ್ಚಾತ್ಯ ದೇಶಗಳ ಒತ್ತಾಯದ ಮೇಲೆ. ೨೦೧೨ರ ನವೆಂಬರ್ ತಿಂಗಳಲ್ಲಿ ಕಾತಾರ್‌ನಲ್ಲಿ ನಡೆದ ಸಮಾವೇಶವೊಂದರಲ್ಲಿ ಹಾಗೂ ಮೊರಾಕ್ಕೋದಲ್ಲಿ ಜರುಗಿದ ನೂರು ದೇಶಗಳ ಪ್ರತಿನಿಗಳ ಸಭೆಯಲ್ಲಿ ಪಶ್ಚಿಮ ರಾಷ್ಟ್ರಗಳು ಮತ್ತು ಶ್ರೀಮಂತ ಅರಬ್ ರಾಜಪ್ರಭುತ್ವಗಳು ಒತ್ತಾಯ ಮಾಡಿ ಹೆಣೆದ ಕೂಟ ಅದು. ಇದಲ್ಲದೆ ಅಲ್‌ಖೈದಾ ಪ್ರೇರಿತ ಸಂಘಟನೆಗಳೂ ಕೂಡ ಹೋರಾಟ ನಡೆಸುತ್ತಿವೆ. ಆತ್ಮಾಹುತಿ ದಾಳಿಗಳೆಲ್ಲ ಈ ಸಂಘಟನೆಗಳಿಂದಲೇ ಪ್ರೇರಿತವಾದುವು. ಈ ಸೆಣಸಾಟದಲ್ಲಿ ಸಹಸ್ರಾರು ಮಂದಿ ಅಮಾಯಕರು ಹತರಾಗಿದ್ದಾರೆ, ನಿರಾಶ್ರಿತರಾಗಿದ್ದಾರೆ. ಅಂತರ್ಯುದ್ಧ ಮತ್ತು ಆರ್ಥಿಕ ದಿಗ್ಬಂಧನಗಳಿಂದಾಗಿ ಜನಜೀವನ ದುಸ್ತರವಾಗಿದೆ. ವಾಷಿಂಗ್ಟನ್ ಮತ್ತು ನ್ಯಾಟೋ ಸಿರಿಯಾದ ವಿರೋಧಿ ಗುಂಪುಗಳ ಕೂಟವನ್ನು ಸ್ಥಾಪಿಸಿ ನೀಡಿರುವ ಮನ್ನಣೆಯನ್ನು ರಷ್ಯಾ ತೀವ್ರವಾಗಿ ವಿರೋಧಿಸಿದೆ. ಕೂಟದ ಮಿಲಿಟರಿ ವಿಜಯವನ್ನು ಖಾತರಿಗೊಳಿಸಲು, ನೇರ ಹಸ್ತಕ್ಷೇಪ ಮಾಡಲು ಇದು ಸನ್ನಾಹವಾಗಿದೆ ಎಂದು ರಷ್ಯಾದ ವಿದೇಶಾಂಗ ಸಚಿವಾಲಯ ಹೇಳಿದೆ. ಸಿರಿಯಾದ ಆಡಳಿತಗಾರರ ಪ್ರಕಾರ ಪರಿಸ್ಥಿತಿ ನಿಯಂತ್ರಣದಲ್ಲಿದೆ, ಸರಕಾರಿ ಪಡೆಗಳು ಮೇಲುಗೈ ಸಾಧಿಸುತ್ತಿವೆ. ಆದರೆ ಸಿರಿಯಾದಲ್ಲಿ ಪರಿಸ್ಥಿತಿ ಗಂಭೀರವಾಗಿಯೇ ಇದೆ. ಯಾವುದೇ ಕ್ಷಣದಲ್ಲಾದರೂ ಪಾಶ್ಚಾತ್ಯ ದೇಶಗಳ ನೇರವಾದ ಮಿಲಿಟರಿ ಹಸ್ತಕ್ಷೇಪದ ಭೀತಿ ಇದೆ. ಸಿರಿಯಾ-ಟರ್ಕಿ ಗಡಿಯಲ್ಲಿ ಅಮೆರಿಕ ಮತ್ತು ಅದರ ಮಿತ್ರರಾಷ್ಟ್ರಗಳು ರವಾನಿಸಿರುವ 'ಪೇಟ್ರಿಯಟ್' ಕ್ಷಿಪಣಿಗಳನ್ನು ನಿಯೋಜಿಸಲಾಗುತ್ತಿದೆ. ಗಲ್ಫ್ ಪ್ರದೇಶದಲ್ಲಿರುವ ಅಮೆರಿಕದ ಮತ್ತು ನ್ಯಾಟೋದ ಪಡೆಗಳು ದಾಳಿ ನಡೆಸಲು ಸಜ್ಜಾಗಿವೆ. ಹಾಗೇನಾದರೂ ಮಿಲಿಟರಿ ಹಸ್ತಕ್ಷೇಪವಾದಲ್ಲಿ ಲಿಬಿಯಾದಲ್ಲಿ ಆದ ಹಾಗೆಯೇ ಸಾವು-ನೋವುಗಳು ಅಧಿಕವಾಗುವ ಸಾಧ್ಯತೆ ಇದೆ.



ಸುಮಾರು ನೂರು ವರ್ಷಗಳ ಹಿಂದೆ ಸ್ವತಂತ್ರ ರಾಜ್ಯವಾಗಿ ದೊರೆ ಫಯ್ಯಾಲ್‌ನಿಂದ ಸ್ಥಾಪನೆಗೊಂಡ ಸಿರಿಯಾ ಅಸ್ತಿತ್ವದಲ್ಲಿದ್ದುದು ಕೆಲವೇ ತಿಂಗಳುಗಳು ಮಾತ್ರ. ಎರಡು ದಶಕಗಳು ಫ್ರೆಂಚರ ಅಧೀನದಲ್ಲಿದ್ದು ಅನಂತರ ೧೯೪೧ರಲ್ಲಿ ಬ್ರಿಟನ್ ಮತ್ತು ಫ್ರಾನ್ಸ್‌ಗಳು ಸಿರಿಯಾವನ್ನು ಆಕ್ರಮಿಸಿಕೊಂಡವು. ೧೯೪೬ರಲ್ಲಿ ಸಿರಿಯಾ ಸ್ವತಂತ್ರಗೊಂಡಿತಾದರೂ ೧೯೬೦ರವರೆಗೆ ಅಸ್ಥಿರತೆ ಇತ್ತು. ೧೯೫೮ರಲ್ಲಿ ಸಿರಿಯ ಈಜಿಪ್ಟ್ ಜೊತೆಗೂಡಿ ಯುನೈಟೆಡ್ ಅರಬ್ ರಿಪಬ್ಲಿಕ್ ರಾಜ್ಯ ಸ್ಥಾಪನೆಗೊಂಡಿತು. ಆದರೆ ಈ ಒಕ್ಕೂಟ ಹೆಚ್ಚು ಕಾಲ ಬಾಳಲಿಲ್ಲ. ೧೯೬೩ರಲ್ಲಿ ಮತ್ತೆ ಸಿರಿಯ-ಈಜಿಪ್ಟ್-ಇರಾಕ್ ಒಕ್ಕೂಟದ ಸ್ಥಾಪನೆಯ ಪ್ರಯತ್ನ ನಡೆಯಿತು. ಆದರೆ ಅದು ಪ್ರಯತ್ನವಾಗಿಯೇ ಉಳಿಯಿತು. ಸಿರಿಯಾಗೆ ಸ್ಥಿರತೆ ಬಂದದ್ದು ೧೯೭೦ರ ನಂತರವೇ. ಅದುವರೆಗೆ ಅರಬ್ ಬಾತ್ ಸೋಷಿಯಲಿಸ್ಟ್ ಪಾರ್ಟಿ ಅಧಿಕಾರದಲ್ಲಿದ್ದರೂ ಒಳ ಜಗಳಗಳಿಂದ ಅಸ್ಥಿರತೆ ಮುಂದುವರಿದಿತ್ತು. ೧೯೭೦ರ ಕೊನೆಯಲ್ಲಿ ರಕ್ಷಣಾ ಸಚಿವನಾಗಿದ್ದ ಹಫೀಜ್ ಅಫ್ಸಲ್ ಮಿಲಿಟರಿ ಕ್ಷಿಪ್ರಕ್ರಾಂತಿಯಲ್ಲಿ ಅಧಿಕಾರ ವಹಿಸಿಕೊಂಡು ಮೂರು ದಶಕಗಳ ಕಾಲ ಆಡಳಿತ ನಡೆಸಿದ. ೧೯೮೨ರಲ್ಲಿ ಬಲಪಂಥೀಯ ಮುಸ್ಲಿಮ್ ಬ್ರದರ್ ಹುಡ್ ಅಸಾದ್ ವಿರುದ್ಧ ಸಶಸ್ತ್ರ ದಂಗೆ ಎಬ್ಬಿಸಿತು. ಆದರೆ ಬಹುಬೇಗ ಆಡಳಿತ ಅದನ್ನು ಬಗ್ಗುಬಡಿಯಿತು. ಅಸಾರ್ ನಿಧನಾನಂತರ ಅವನ ಮಗ ಬಷಾರ್ ಅಲ್ ಅಸಾದ್ ಅಧಿಕಾರದಲ್ಲಿದ್ದಾನೆ. ಇದು ಸಿರಿಯಾ ನಡೆದುಬಂದ ದಾರಿ. ಅಸಾದ್ ಅಧಿಕಾರಾವಧಿಯ ಮೊದಲಿನಲ್ಲಿ ಸಾಕಷ್ಟು ಸುಧಾರಣೆಗಳಾದವು. ತೈಲಸಂಪತ್ತಿನಿಂದ ಕೂಡಿರುವ ಈ ದೇಶದಲ್ಲಿ ಸಾಕಷ್ಟು ಪ್ರಗತಿಯಾಯಿತು. ಅರಬ್ ರಾಷ್ಟ್ರೀಯವಾದಿಯಾಗಿದ್ದ ಆಡಳಿತ ಇತರ ಅರಬ್ ರಾಜ್ಯಗಳ ಜೊತೆಗೂಡಿ ಪ್ಯಾಲಸ್ಟೈನ್ ಸ್ವತಂತ್ರ ರಾಜ್ಯ ಸ್ಥಾಪನೆಗೆ ಪೂರ್ಣ ಬೆಂಬಲ ನೀಡಿ ಎಲ್ಲ ನೆರವನ್ನು ಪ್ಯಾಲಸ್ಟೈನ್ ವಿಮೋಚನಾ ಸಂಘಟನೆಗೆ ನೀಡಿತ್ತು. ಇಸ್ರೇಲಿನ ವಿಸ್ತರಣಾ ನೀತಿಯ ಕಡುವಿರೋಧಿಯಾಗಿದ್ದ ಅಸ್ಸಾದ್ ಸರಕಾರ ಅಮೆರಿಕದ ವಿರೋಧವನ್ನು ಕಟ್ಟಿಕೊಂಡಿತು. ಅರಬ್ ಇಸ್ರೇಲಿ ಯುದ್ಧಾನಂತರ ಈಜಿಪ್ಟ್ ಇಸ್ರೇಲಿನೊಂದಿಗೆ ಒಡಂಬಡಿಕೆ ಮಾಡಿಕೊಂಡಿತು. ಸಿರಿಯಾ ಈ ಒಪ್ಪಂದವನ್ನು ವಿರೋಧಿಸಿತು ಮತ್ತು ಆ ದಿಶೆಯಲ್ಲಿ ಅಮೆರಿಕ ನಡೆಸಿದ ಪ್ರಯತ್ನಗಳನ್ನು ತಿರಸ್ಕರಿಸಿತು.

ಅರಬ್ ರಾಷ್ಟ್ರಗಳ ಪೈಕಿ ಈಗ ಸ್ವತಂತ್ರವಾಗಿ ಅಮೆರಿಕದ ಪ್ರಭಾವಕ್ಕೊಳಗಾಗದೆ ದೂರ ಉಳಿದಿರುವುದು ಸಿರಿಯ ಮತ್ತು ಇರಾನ್‌ಗಳು ಮಾತ್ರ. ಹೆಚ್ಚು ಕಡಿಮೆ ಉಳಿದೆಲ್ಲ ದೇಶಗಳೂ ಕೂಡ ಅಮೆರಿಕದ ಕೃಪೆಯಲ್ಲಿ ಇವೆ. ಅಂತರ್ಯುದ್ಧದ ಪರಿಸ್ಥಿತಿಯಲ್ಲಿರುವ ಸಿರಿಯ ಪಾಶ್ಚಾತ್ಯ ದೇಶಗಳ ಸಶಸ್ತ್ರ ಹಸ್ತಕ್ಷೇಪಕ್ಕೆ ಗುರಿಯಾಗುವ ಸಾಧ್ಯತೆಗಳು ಈಗ ಹೆಚ್ಚಾಗಿದೆ. ಸಿರಿಯಾ ಪತನಗೊಂಡರೆ ಇರಾನಿನ ಆಕ್ರಮಣಕ್ಕೆ ದಾರಿ ಸುಗಮ ಎಂಬುದು ಅಮೆರಿಕದ ಲೆಕ್ಕಾಚಾರ. ಹಾಗಾದರೆ ಇಡೀ ಈ ಭೂಭಾಗ ಅಮೆರಿಕದ ಪ್ರಭಾವ ವಲಯಕ್ಕೆ ಬಿದ್ದಂತಾಗುತ್ತದೆ. ಸಿರಿಯಾದ ಮೇಲೆ ಆಕ್ರಮಣ ನಡೆಸಲು ಇಸ್ರೇಲ್ ತುದಿಗಾಲ ಮೇಲೆ ನಿಂತಿದೆ. ಗಡಿಯಲ್ಲಿ ಸಾಕಷ್ಟು ಉಪಟಳ ನಡೆಸುತ್ತಿದೆ. ಸಿರಿಯಾದ ಸದ್ಯದ ಪರಿಸ್ಥಿತಿಯನ್ನು ಸರಿಪಡಿಸಲು ಸಂಧಾನದ ಮಾರ್ಗವೊಂದೇ ಇರುವುದು. ಮಿಲಿಟರಿ ಪರಿಹಾರ ಜನಸಾಮಾನ್ಯರಿಗೆ ಮತ್ತಷ್ಟು ಸಂಕಷ್ಟಗಳನ್ನು ತರುವುದು ಖಚಿತ. ಏನೇ ಆದರೂ ಪಾಶ್ಚಾತ್ಯ ದೇಶಗಳ ಮಿಲಿಟರಿ ಹಸ್ತಕ್ಷೇಪಕ್ಕೆ ಅವಕಾಶ ಕೊಡಬಾರದು. ಅಂತರರಾಷ್ಟ್ರೀಯ ಸಮುದಾಯ ಎಚ್ಚರವಹಿಸಿ ಮಾರಣಹೋಮ ತಡೆಯಲು ಕ್ರಮ ಕೈಗೊಳ್ಳುವುದು ಅಗತ್ಯ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಮುನ್ನೂರು ವರ್ಷದ ಹಿಂದಿನ 'ಲೇಡೀಸ್ ಡೈರಿ'

ಡಾ॥ ಬಿ. ಎಸ್. ಶೈಲಜಾ

ಅಂದಿನ ಮಹಿಳೆಯರು ಈ ಬಗೆಯ ಲೆಕ್ಕಗಳನ್ನು ಮಾಡಬಲ್ಲ ಪರಿಣತಿ ಪಡೆದಿದ್ದರು ಎಂಬುದು ಗಮನಾರ್ಹ. ಈ ಪತ್ರಿಕೆಯನ್ನು ಟಿಪ್ಪರ್ ಎಂಬಾತ ೧೭೦೪ರಲ್ಲಿ ಆರಂಭಿಸಿದಾಗ ಅಂದಿನ ಮಹಾರಾಣಿ ಆ್ಯನೆ ಬಹಳ ಉತ್ತೇಜನ ಕೊಟ್ಟು ಎಲ್ಲ ಸ್ತ್ರೀಯರು ಓದಲೇಬೇಕೆಂದು ಆಗ್ರಹಿಸಿದ್ದಳಂತೆ. ಆ ದಿನಗಳಲ್ಲಿ ಗಣಿತ ಎಂಬುದು ಬಹಳ ತೊಡಕಿನ ವಿಷಯ; ಮಹಿಳೆಯರ ನಾಜೂಕು ಮೆದುಳಿಗೆ ಇದರಿಂದ ಘಾಸಿಯಾಗಬಹುದು ಎಂಬ ನಂಬಿಕೆ ಪ್ರಚಲಿತವಾಗಿತ್ತಂತೆ; ಇದು ಇನ್ಯಾವುದೋ ಸಂದರ್ಭದಲ್ಲಿ ಪ್ರಕಟವಾಗಿದ್ದ ಸುದ್ದಿ. ಆದರೆ ಈ ಸಂಪುಟಗಳನ್ನು ಓದಿದ ಮೇಲೆ ಈ ನಂಬಿಕೆ ಸುಳ್ಳು ಎಂದು ನನಗೆ ಅನ್ನಿಸುತ್ತದೆ.


THE LADIES' DIARY,
FOR THE YEAR OF OUR LORD
1840,
*Being Bissextile or Leap Year,*
DESIGNED PRINCIPALLY FOR THE AMUSEMENT AND INSTRUCTION OF THE
**FAIR SEX.**
WITH AN APPENDIX OF CURIOUS AND VALUABLE MATHEMATICAL RESEARCH, FOR THE USE OF STUDENTS.
The Hundred and Thirty-seventh Almanack published of this Kind.

Virtue and taste, with female softness join'd,
All that subdues and captivates mankind,
In Britain's matchless fair resplendent shine;
They rule love's empire by a right divine:
Justly their worth the enraptured world admires,
Whom fair VICTORIA's bright example fires.

LONDON:
PRINTED FOR
THE COMPANY OF STATIONERS;
And sold by G. GREENHILL, at their Hall, Ludgate street.
[*Price One Shilling, stitched.*]
PRINTED BY C. ADLARD, BARTHOLOMEW CLOSE.

**ಕಾ**ಲಗಣನೆ ನಡೆದು ಬಂದ ದಾರಿಯನ್ನು ಪರಿಶೀಲಿಸುವಾಗ ಅನೇಕ ಪ್ರಶ್ನೆಗಳು ಏಳುತ್ತವೆ. ಹೊಸ ವರ್ಷದ ಆರಂಭ ಏಪ್ರಿಲ್ ೧ ಇದ್ದದ್ದು ಜನವರಿ ೧ಕ್ಕೆ ಏಕೆ ಬದಲಾಯಿತು? ಅದು ಇರಲಿ ಎಂದು ಜನ ಹೇಗೆ ಒಪ್ಪಿಕೊಂಡರು? ಸರಕಾರ ಆಜ್ಞೆ ಹೊರಡಿಸಿದ ಕೂಡಲೇ 'ಸರಿ' ಎಂದು ಅಂಗೀಕರಿಸಿಬಿಟ್ಟರೇ? ಇಂತಹ ಪ್ರಶ್ನೆಗಳು ನನ್ನನ್ನು ಕಾಡುತ್ತಲೇ ಇದ್ದವು. ಹಳೆಯದಕ್ಕೂ ಹೊಸದಕ್ಕೂ ಹೊಂದಾಣಿಕೆ ಮಾಡಿಕೊಂಡ ಕುರುಹು ಎಲ್ಲಾದರೂ ಇರಲೇಬೇಕು ಎಂದು ಹುಡುಕುತ್ತಲೇ ಇದ್ದೆ.

೧೭೦೪ರಲ್ಲಿ ಜನವರಿ ೧೬ನ್ನು ಹಳೆಯ ಹೊಸ ವರ್ಷ ಎಂದು ಕರೆಯುತ್ತಿದ್ದರು ಎಂಬ ಸುಳಿವು ಸಿಕ್ಕಿತು. ಇದರ ಮೂಲ ಹುಡುಕುತ್ತಾ ಹೋದಾಗ ಕಂಡದ್ದು ಇಂಗ್ಲೆಂಡ್‌ನಿಂದ ಪ್ರಕಟವಾಗುತ್ತಿದ್ದ 'ಲೇಡೀಸ್ ಡೈರಿ' ಎಂಬ ನಿಯತಕಾಲಿಕ! ಅಂದರೆ ಮಹಿಳೆಯರಿಗಾಗಿ ಮೀಸಲಾದ ಪತ್ರಿಕೆ. ೧೭೦೪ರಿಂದ ೧೮೧೬ರವರೆಗೆ ಇದು ಪ್ರಕಟವಾಗುತ್ತಿತ್ತು. ಅದರಲ್ಲಿ ಮೊದಲ ಪುಟದಲ್ಲಿ ಒಂದು ಪಟ್ಟಿ- ಇಂದಿನ ಕ್ಯಾಲೆಂಡರ್‌ಗಳಲ್ಲಿರುವಂತೆ ಆಯಾ ತಿಂಗಳ ವಿಶೇಷಗಳನ್ನು ಅಲ್ಲಿ ಕಾಣಬಹುದಾಗಿತ್ತು. ನನ್ನ ಕಣ್ಣಿಗೆ ಮುಖ್ಯವಾಗಿ ಕಂಡದ್ದು ವಿಷುವ, ಉತ್ತರಾಯಣ, ದಕ್ಷಿಣಾಯನ ಇಂತಹ ಅಂಶಗಳು. ಇವಲ್ಲದೆ ರಾಜ, ರಾಣಿ, ರಾಜಕುವರ, ಕುವರಿಯರ ಹುಟ್ಟಿದ ದಿನಾಂಕಗಳೂ ಇದ್ದವು. ಇದಲ್ಲದೆ ಕೆಲವೊಂದು ಆಚರಣೆಗಳ ದಿನಾಂಕಗಳಿದ್ದವು. ಇಲ್ಲಿ 'ಹಳೆಯ ಹೊಸ ವರ್ಷದ ಆರಂಭ' ಎಂಬ ನಮೂದು ಕಂಡಿತು. ಅಂದರೆ ಹೊಸ ವರ್ಷದ ಆರಂಭವನ್ನು ಜನವರಿ ೧ ಎಂದು ಅಂಗೀಕರಿಸಿದ ಮೇಲೂ ಕೆಲಕಾಲ ಹಳೆಯ ಪದ್ಧತಿ ಜಾರಿ ಇತ್ತು ಎಂದಾಯಿತಲ್ಲವೇ?

ಈಗ ನನ್ನ ಗಮನ ಇಡೀ ಸಂಪುಟದತ್ತ ಸರಿಯಿತು. ಇದು ಇಂಟರ್‌ನೆಟ್‌ನಲ್ಲಿ ಲಭ್ಯವಿದೆ. ಇದರಲ್ಲಿ ಮಹಿಳೆಯರಿಗೆ ವಿಶೇಷ ಎನ್ನಬಹುದಾದ ವಿಷಯಗಳು ಬೆರಳೆಣಿಕೆಯಷ್ಟು ಮಾತ್ರ – ಆರೋಗ್ಯ, ಹೆಣಿಗೆ ಮುಂತಾದವು. ಉಳಿದ ಲೇಖನಗಳೆಲ್ಲಾ ಗಣಿತದ್ದು. ಇದು ನನಗೆ ಆಶ್ಚರ್ಯ ಉಂಟುಮಾಡಿತು. ಬರೆಯುತ್ತಿದ್ದವರಲ್ಲಿ ಮಹಿಳೆಯರು ಮಾತ್ರವಲ್ಲ ಪುರುಷರೂ ಇದ್ದರು. ಹಾಗಾದರೆ ಇದು 'ಲೇಡೀಸ್ ಡೈರಿ' ಯಾಕಾಯಿತು? ನನಗೆ ಉತ್ತರ ತಿಳಿಯಲಿಲ್ಲ. (ಆದರೆ ಮಹಿಳೆಗಾಗಿ ಎಂದು ಹೆಸರಿಸಿದ ಪತ್ರಿಕೆಗಳನ್ನು ಪುರುಷರು ಆಸಕ್ತಿಯಿಂದ ಓದುತ್ತಾರೆ ಎಂಬ ಸತ್ಯವನ್ನು ಆ ಸಂಪಾದಕ ಆಗಲೇ ಕಂಡುಕೊಂಡಿದ್ದರೇ? ಎನ್ನಿಸಿತು.) ಇದೇ ರೀತಿ ಜೆಂಟಲ್‌ಮೆನ್ಸ್ ಮ್ಯಾಗಝೀನ್ ಎಂಬ ನಿಯತಕಾಲಿಕೆಯೂ ಇತ್ತು. ಅದರಲ್ಲಿಯೂ ಗಣಿತದ ಸವಾಲುಗಳು ಇರುತ್ತಿದ್ದವು.

ಇದರಲ್ಲಿರುವ ಗಣಿತದ ಸವಾಲುಗಳು ಬಹಳ ಸ್ವಾರಸ್ಯವಾಗಿವೆ. ಈ ಸವಾಲುಗಳು ಮತ್ತು ಉತ್ತರಗಳು ಇಂಟರ್‌ನೆಟ್‌ನಲ್ಲಿ ಲಭ್ಯವಿವೆ. ೧೮೧೬ರಲ್ಲಿ ಸಂಪಾದಕನಾಗಿದ್ದ ಚಾರ್ಲ್ಸ್ ಹಟನ್ ಇವನ್ನೆಲ್ಲಾ ಸಂಗ್ರಹಿಸಿ ಪ್ರಕಟಿಸಿದ. ಆಯಾ ಸಮಸ್ಯೆಗಳ ಉತ್ತರಗಳು ಮುಂದಿನ ಸಂಚಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಕೆಲವು ಸಮಸ್ಯೆಗಳನ್ನು ಎರಡು ಮೂರು ಬೇರೆ ಬೇರೆ ಬಗೆಯಲ್ಲಿ ಬಿಡಿಸಬಹುದಾಗಿದ್ದುದನ್ನು ಓದುಗರು ಬರೆದು ಕಳುಹಿಸುತ್ತಿದ್ದರು. ಈ ಸಂಗ್ರಹದಲ್ಲಿ ಎಲ್ಲವೂ ಸೇರಿವೆ.

ಹೀಗೆ ಓದುಗರಿಗೆ ಸವಾಲು ಹಾಕುವ ಪ್ರವೃತ್ತಿಯನ್ನು ಈ ಸಂಚಿಕೆಯೇ ಹುಟ್ಟುಹಾಕಿರಬೇಕು. ನ್ಯೂ ಸೈಂಟಿಸ್ಟ್ ಎಂಬ ವಾರ ಪತ್ರಿಕೆ ಈಗಲೂ ಇಂತಹ ಸವಾಲುಗಳನ್ನು ಎನಿಗ್ಮಾ ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸುತ್ತದೆ. ಹಿಂದೆ ಕನ್ನಡದಲ್ಲಿ 'ಕೈಲಾಸ' ಎಂಬ ಮಾಸ ಪತ್ರಿಕೆ ಬರುತ್ತಿತ್ತು. ಅದರಲ್ಲಿ ಇಂತಹ ಸಮಸ್ಯೆಗಳು ಆಗೊಂದು ಈಗೊಂದು ಪ್ರಕಟವಾಗುತ್ತಿದ್ದವು. 'ಹೊಸತು' ಸಂಚಿಕೆಯ ಆರಂಭದ ದಿನಗಳಲ್ಲಿಯೂ ಹೀಗೆ ಪ್ರತಿ ತಿಂಗಳೂ ಸಮಸ್ಯೆ; ಅದರ ಮುಂದಿನ ತಿಂಗಳು ಉತ್ತರ ಪ್ರಕಟವಾಗುತ್ತಿತ್ತು.

೧೮೧೬ರಲ್ಲಿ 'ಲೇಡೀಸ್ ಡೈರಿ' ನಿಯತಕಾಲಿಕೆಯ ಪ್ರಕಟಣೆ ನಿಂತುಹೋಯಿತು. ಕಾರಣ ಗೊತ್ತಿಲ್ಲ. ಒಟ್ಟು ೯೩೨ ಗಣಿತ ಸಮಸ್ಯೆಗಳು ಸುಮಾರು ೧೧೨ ವರ್ಷಗಳ ಅವಧಿಯಲ್ಲಿ ಪ್ರಕಟವಾಗಿವೆ. ಸಂಖ್ಯಾಶಾಸ್ತ್ರಜ್ಞರು ಇವನ್ನು ವರ್ಗೀಕರಿಸಿದ್ದಾರೆ. ಅತ್ಯಂತ ಹೆಚ್ಚು ಸಮಸ್ಯೆಗಳು ರೇಖಾಗಣಿತದ್ದು; ಮುಂದಿನ ಸ್ಥಾನ ಖಗೋಳ ವಿಜ್ಞಾನಕ್ಕೆ. ಬೀಜಗಣಿತ ಮತ್ತು ತ್ರಿಕೋಣ ಮಿತಿಯ ಲೆಕ್ಕಗಳೂ ಇವೆ. ಒಟ್ಟಿನಲ್ಲಿ ಹೇಳುವುದಾದರೆ ಇದರ ಮಟ್ಟ ಸಾಧಾರಣಕ್ಕಿಂತ ಎತ್ತರದ್ದು. ಸ್ತ್ರೀಯರಿಗಾಗಿ ಎಂದು ಸರಳವಾದ ಲೆಕ್ಕಗಳನ್ನೇ ಕೊಟ್ಟಿಲ್ಲ. ಸವಾಲು ಹಾಕುವವರಲ್ಲಿ ಮತ್ತು ಬಿಡಿಸಿರುವವರಲ್ಲಿ ಪುರುಷರೂ ಇದ್ದಾರೆ. ಖಗೋಳದ ಲೆಕ್ಕಗಳಲ್ಲಿ ಹೆಚ್ಚಿನವು ನೌಕಾಯಾನಕ್ಕೆ ಸಂಬಂಧಿಸಿದ್ದು. ಅದರಲ್ಲೂ ದಕ್ಷಿಣ ಗೋಳಾರ್ಧಕ್ಕೆ ಅನ್ವಯಿಸುವಂತಹುದು. ಆ ದಿನಗಳಲ್ಲಿ ಭಾರತದತ್ತ ಬಹಳ ನೌಕೆಗಳು ಪಯಣಿಸುತ್ತಿದುದರಿಂದ ಮತ್ತು ಅವು ಆಫ್ರಿಕಾ ಬಳಸಿ ಬರುವಾಗ ಬಹುಶಃ ಎದುರಾದ ನೈಜ ಸಮಸ್ಯೆಗಳೇ ಇರಬಹುದು.

(೧೮೫೦ರ ದಶಕದಲ್ಲಿ ಪ್ರಕಟವಾದ ಥಾಮಸ್ ಗೋಡ್ ಫ್ರೇ ಬರೆದ ಖಗೋಳ ತ್ರಿಕೋಣ ಮಿತಿಯ ಪಠ್ಯಪುಸ್ತಕದ ಉದಾಹರಣೆಗಳು ಮತ್ತು ಅನೇಕ ಲೆಕ್ಕಗಳು ಮದ್ರಾಸು ಮುಂತಾದ ಭಾರತೀಯ ನಗರಗಳಿಗೆ ಅನ್ವಯಿಸುವಂತಹುದು ಎಂಬುದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು.)

ಕೆಲವೊಂದು ಪ್ರಶ್ನೆಗಳಿಗೆ ಬಹುಮಾನವೂ ಇರುತ್ತಿತ್ತು; ಆದರೆ ಬಹುಮಾನ ಏನು ಎಂಬುದು ತಿಳಿಯುವುದಿಲ್ಲ.

ಇಂದಿನ ಬಿ.ಎಸ್‌ಸಿ. ತರಗತಿಯ ಭೌತಶಾಸ್ತ್ರದ ಪಠ್ಯಪುಸ್ತಕಗಳಲ್ಲಿ ಕಾಣುವ ಲೆಕ್ಕ ಇದರಲ್ಲಿದೆ – ಭೂಮಿಗೊಂದು ಸುರಂಗ ಮಾಡಿ ಅದರ ಕೇಂದ್ರದ ಮೂಲಕ ಹಾದುಹೋಗುವಂತೆ ಮಾಡೋಣ. ಉದಾಹರಣೆಗೆ ಭಾರತದಲ್ಲಿ ಸುರಂಗ ಕೊರೆದು ಅದರ ಮೂಲಕ ಅಮೆರಿಕ ತಲುಪಿದಂತೆ ಎಂದುಕೊಳ್ಳೋಣ. ಈ ಸುರಂಗದೊಳಗೆ ಚೆಂಡೊಂದನ್ನು ಎಸೆದರೆ ಅದರ ಚಲನೆ ಹೇಗಿರುತ್ತದೆ? ವೇಗ ಎಷ್ಟು? – ಈ ಪ್ರಶ್ನೆಯನ್ನು ಕೇಳಿರುವ ವ್ಯಕ್ತಿಯ ಹೆಸರು ಟೆರಿಕೋಲಾ – ಇದು ಬಹುಶಃ ಕಾವ್ಯನಾಮ ಇರಬಹುದು. ಮುಂದಿನ ಸಂಚಿಕೆಯಲ್ಲಿ ಇದರ ಉತ್ತರ ಪ್ರಕಟವಾಗಿದೆ – ಬರೆದವರು ಮಿ॥ ರಾಬ್ ಫಿಲಿಪ್ಸ್. ಉತ್ತರ ಹೀಗಿದೆ :

''ಯಾವುದೇ ಬಲ ವಿರುದ್ಧ ದಿಕ್ಕುಗಳಲ್ಲಿ ಪ್ರಯೋಗವಾದಾಗ ಅದರಿಂದ ಉಂಟಾಗುವ ಚಲನೆಯೂ ವಿರುದ್ಧ ದಿಕ್ಕುಗಳಲ್ಲಿ ಇರುವುದರಿಂದ ಒಟ್ಟು ಚಲನೆ ಶೂನ್ಯವಾಗುತ್ತದೆ. ಚೆಂಡು ಕೇಂದ್ರದತ್ತ ಬೀಳತೊಡಗಿದ ಹಾಗೆ ಅದರ ವೇಗ ವರ್ಧಿಸುತ್ತದೆ. ಕೇಂದ್ರವನ್ನು ದಾಟಿದ ಮೇಲೆ ಪುನಃ ವೇಗ ಗರಿಷ್ಠದಿಂದ ಕಡಿಮೆಯಾಗತೊಡಗುತ್ತದೆ. ಆದರೆ ವಿರುದ್ಧ ದಿಕ್ಕಿನಲ್ಲಿ ಇರುತ್ತದೆ. ಅದು ಮೇಲ್ಮೈಯನ್ನು ತಲುಪಿದಾಗ ಅದರ ವೇಗ ಶೂನ್ಯವಾಗುತ್ತದೆ. ಆದ್ದರಿಂದ ಅದು ಪುನಃ ಕೇಂದ್ರದತ್ತ ಬೀಳತೊಡಗುತ್ತದೆ. ಹೀಗೆ ಅದು ಸುರಂಗದೊಳಗೆ ಓಡಾಡುತ್ತಲೇ ಇರುತ್ತದೆ. ಈ ಆವರ್ತನೆಯ ಅವಧಿ ೧ ಗಂಟೆ ೨೪ ನಿಮಿಷ ೫೧.೨೮ ಸೆಕೆಂಡುಗಳು'' ಈ ಲೆಕ್ಕವನ್ನು ಬಿಡಿಸಿರುವ ವಿಧಾನ ಈಗ ಪಠ್ಯಪುಸ್ತಕಗಳಲ್ಲಿರುವುದೇ ಎಂಬುದು ಸ್ವಾರಸ್ಯ !

ಭೌತಶಾಸ್ತ್ರದ ಪ್ರಯೋಗಶಾಲೆಗಳಲ್ಲಿ ಇರುವ ಒಂದು ಉಪಕರಣ ಸೋನೋ ಮೀಟರ್. ತಂತಿಯೊಂದಕ್ಕೆ ತೂಕದ ಬಟ್ಟು ಹಾಕಿ ಬಿಗಿಯಲಾಗುತ್ತದೆ. ಆಮೇಲೆ ತೂಕವನ್ನು ಹೆಚ್ಚು ಕಡಿಮೆ ಮಾಡುತ್ತಾ ಹೋದಂತೆ ಅದರ ಕಂಪನ ಹೇಗೆ ವ್ಯತ್ಯಾಸ ವಾಗುತ್ತದೆ ಎಂಬುದರ ನಿರೂಪಣೆಗಾಗಿ ಈ ಉಪಕರಣವನ್ನು ಬಳಸಲಾಗುತ್ತದೆ. ತಂಬೂರಿ, ವೀಣೆ, ಪಿಟೀಲು ಬಳಸುವ ಸಂಗೀತಗಾರರಿಗೆ ಇದು ಹೊಸ ವಿಷಯ ವೇನಲ್ಲ, ಇದೂ ಕೂಡ ಲೇಡೀಸ್ ಡೈರಿಯಲ್ಲಿ ಒಂದು ಸವಾಲಾಗಿ ಕಾಣಿಸಿಕೊಂಡಿದೆ. ಈ ಸವಾಲು ಮತ್ತು ಉತ್ತರ ಮತ್ತು ಪ್ರಯೋಗ ಕೂಡ ಈಗಿನ ಪಠ್ಯಪುಸ್ತಕಗಳಲ್ಲಿದೆ.

ಇನ್ನೊಂದು ಬಹಳ ಜನಪ್ರಿಯವಾದ ಸಮಸ್ಯೆಯೂ ಇದರಲ್ಲಿದೆ. ಗಡಿಯಾರದ ಮುಳ್ಳುಗಳನ್ನು ಕುರಿತಾದದ್ದು. ಹನ್ನೆರಡು ಗಂಟೆಗೆ ಒಂದರ ಮೇಲೆ ಒಂದುಗೂಡುವ ಮುಳ್ಳುಗಳು ಪುನಃ ಹಾಗೆಯೇ ಒಂದರ ಮೇಲೊಂದು ಕೂಡುವುದು ಯಾವಾಗ ? ಈ ಪ್ರಶ್ನೆಯನ್ನು ಕೇಳಿದಾಗ ತಕ್ಷಣ ಬರುವ ಉತ್ತರ ಹನ್ನೆರಡು ಗಂಟೆ. ಸ್ವಲ್ಪ ಯೋಚಿಸಿದ ಮೇಲೇ ೬೫ ನಿಮಿಷ ಎಂಬ ಉತ್ತರ ಹೊಳೆಯುವುದು. ಇದನ್ನು ಖಗೋಳಕ್ಕೆ ಅನ್ವಯಿಸಬಹುದು. ವಿದ್ಯಾರ್ಥಿಗಳಿಗೆ ನಾನು ಈ ಸಮಸ್ಯೆಯನ್ನೇ ಕೊಡುತ್ತೇನೆ. ಉದಾಹರಣೆಗೆ ಭೂಮಿಯನ್ನು ಮಧ್ಯದಲ್ಲಿ ಇರಿಸಿ, ಚಂದ್ರ ಮತ್ತು ಸೂರ್ಯ ಎರಡೂ ಗಡಿಯಾರದ ಎರಡು ಮುಳ್ಳುಗಳಂತೆ ಭೂಮಿಯನ್ನು ಸುತ್ತುತ್ತಿವೆ ಎಂದು ಕಲ್ಪಿಸಿಕೊಂಡರೆ ಚಂದ್ರನ ತಿಂಗಳು ೨೭.೩೨ ದಿನಗಳಾದರೂ ಅಮಾವಾಸ್ಯೆಯಿಂದ ಅಮಾವಾಸ್ಯೆಗೆ ೨೯.೫೩ ದಿನಗಳೇಕೆ ಎಂಬ ಪ್ರಶ್ನೆಗೆ ಉತ್ತರ ದೊರಕುತ್ತದೆ.

ಲೇಡೀಸ್ ಡೈರಿಯಲ್ಲಿ ಇರುವ ಪ್ರಶ್ನೆ ಹೀಗಿದೆ :

'ಗಡಿಯಾರದ ಮೂರೂ ಮುಳ್ಳುಗಳ ನಡುವಿನ ಕೋನ ಸಮನಾಗಿರುವಂತೆ ಅಂದರೆ ಅವು ಆ ವೃತ್ತವನ್ನು ಮೂರು ಸಮಭಾಗಗಳಾಗಿ ವಿಭಜಿಸುವಂತೆ ಮಾಡುವ ಅವಧಿ ಎಷ್ಟು?' ಒಂದು ವಿಶಿಷ್ಟ ಗಡಿಯಾರದಲ್ಲಿ ಒಂದು ಮುಳ್ಳು ಸುತ್ತುವ ಅವಧಿ ಇನ್ನೊಂದರ ಹತ್ತು ಪಟ್ಟು ಮತ್ತು ಇನ್ನೂ ಒಂದು ಮುಳ್ಳಿನ ಅವಧಿ ನೂರುಪಟ್ಟು ಇದ್ದರೆ ಆಗ ಅವಧಿ ಎಷ್ಟು?'

ಎರಡೇ ಮುಳ್ಳಿನ ಸಮಸ್ಯೆಯನ್ನು ಬಿಡಿಸಿದ್ದರೆ ಇದೂ ಹಾಗೆಯೇ ಎಂದು ಮುಂದುವರಿದರೆ ಎಡವಿದ ಹಾಗೆಯೇ. ಏಕೆಂದರೆ ಈ ಸಮಸ್ಯೆಗೆ ಉತ್ತರವಿಲ್ಲ, ಮುಂದಿನ ಸಂಚಿಕೆಯಲ್ಲಿ ಮಿ॥ ಹೆನ್ರಿ ಕ್ಲಾರ್ಕ್ ಎಂಬುವರು ಗಣಿತಸೂತ್ರಗಳನ್ನು ರಚಿಸಿ ಬಿಡಿಸುವ ಪ್ರಯತ್ನ ಮಾಡಿ ಉತ್ತರ ದೊರಕುವುದಿಲ್ಲ ಎಂದು ತೋರಿಸಿಕೊಟ್ಟಿದ್ದಾರೆ.

೨೦೦೦ದಲ್ಲಿ ಗ್ರಹಗಳೆಲ್ಲವೂ ಒಂದೇ ನೇರಕ್ಕೆ ಬರುತ್ತವೆ ಎಂಬ ಗುಲ್ಲು ಎದ್ದಿತ್ತು. ಯಥಾಪ್ರಕಾರ ಪ್ರಳಯ ಇತ್ಯಾದಿ ನೈಸರ್ಗಿಕ ವಿಕೋಪಗಳೆಲ್ಲಾ ಒಟ್ಟಿಗೇ ಉಂಟಾಗಿಬಿಡುತ್ತವೆ ಎಂಬ ಪ್ರಚಾರ ನಡೆಯುತ್ತಿತ್ತು. ಆಗ ಇದೇ ವಿಧಾನ ಅನುಸರಿಸಿ ಗ್ರಹಗಳೆಲ್ಲಾ ಒಟ್ಟಿಗೆ ಬರಬಹುದಾದ ಅವಧಿಯನ್ನು ಲೆಕ್ಕಮಾಡಲು ಹೋಗಿ ಉತ್ತರ ಸಿಗದೆ ನಾನು ಕೈ ಬಿಟ್ಟಿದ್ದೆ. ಎಲ್ಲಿ ಎಡವಿದ್ದೇನೆ ಎಂದು ತಿಳಿಯದೇ ಒದ್ದಾಡಿದ್ದೆ. ನಾನು ಮಾಡಿದ್ದ ಲೆಕ್ಕ ಸರಿಯಾಗಿಯೇ ಇತ್ತು ಎಂದು ಈಗ ಖಾತ್ರಿಯಾಯಿತು.

ಈ ಸಂಪುಟದಲ್ಲಿ ಆಗಾಗ್ಗೆ ಕಾಣುವ ಹೆಸರು 'ಪ್ಲಸ್ ಮೈನಸ್' ಎಂಬ ವ್ಯಕ್ತಿಯದು. ನಕ್ಷತ್ರಗಳನ್ನು ಬಳಸಿ ಅಕ್ಷಾಂಶವನ್ನು ಅಳತೆ ಮಾಡುವ ಲೆಕ್ಕದಲ್ಲಿ ಉಂಟಾಗುವ ತಪ್ಪು ಎಷ್ಟು ಎಂಬುದು ಈತ (ಈಕೆಯೂ ಇರಬಹುದು) ಕೇಳಿರುವ ಒಂದು ಲೆಕ್ಕ. ಹಾಗೆಯೇ ರೋಹಿಣಿ ಮತ್ತು ಮೃಗಶಿರಾ ನಕ್ಷತ್ರಗಳ ನಡುವಿನ ಕೋನವನ್ನು ಒಂದು ನಿರ್ದಿಷ್ಟ ದಿನದಲ್ಲಿ ಲಂಡನ್‌ನಿಂದ ಕಾಣುವಂತೆ ಲೆಕ್ಕಹಾಕಲು ಕೇಳುವ ಪ್ರಶ್ನೆ ಇದೆ. ಇದನ್ನು ಓದಿದಾಗ ನನಗೆ ಹಿರಿಯರೊಬ್ಬರು ಕೇಳಿದ್ದ ಪ್ರಶ್ನೆ ನೆನಪಾಯಿತು. ಲಂಡನ್‌ನಿಂದ ಒರೈಯನ್ ಮತ್ತು ಸಿಗ್ನಸ್ ಈ ಎರಡೂ ಪುಂಜಗಳನ್ನು ಒಂದೇ ಹೊತ್ತಿನಲ್ಲಿ ನೋಡಬಹುದೇ ? ಆ ದಿನ ಯಾವುದು ಎಂದವರು ಕೇಳಿದ್ದರು. ಈಗ ಲಭ್ಯವಿರುವ ಸಾಫ್ಟ್‌ವೇರ್‌ಗಳಿಂದ ಇದರ ಉತ್ತರ ಪಡೆಯಲು ಅರ್ಧಗಂಟೆ ಬೇಕಾಯಿತು. ಇನ್ನು ಆ ದಿನಗಳಲ್ಲಿ ಕಂಪ್ಯೂಟರ್ ಇರಲಿ ಕ್ಯಾಲ್ಕುಲೇಟರ್ ಕೂಡ ಇಲ್ಲದಿದ್ದಾಗ – ಹೇಗೆ ಲೆಕ್ಕ ಮಾಡಿದರು ಎಂದು ಆಶ್ಚರ್ಯವಾಗುತ್ತದೆ.

ಕೆಲವು ಸಮಸ್ಯೆಗಳು ಭಾಸ್ಕರಾಚಾರ್ಯನ ಲೀಲಾವತಿ ಗ್ರಂಥವನ್ನು ನೆನಪಿಗೆ ತರುತ್ತವೆ. ಇಲ್ಲೊಂದು ಲೆಕ್ಕ ನೋಡಿ.

ಮಾರ್ಸ್ಕ್‌ನ ಸಮುದ್ರದಂಡೆಯ ಮೇಲೆ ಕುಳಿತಿದ್ದಾಗ ಕಡಲ ಹಕ್ಕಿಯೊಂದು ಹಾರಿಬರುತ್ತಿದ್ದುದನ್ನು ಕಂಡೆ. ಸೆಕೆಂಡಿಗೆ ೬೦ ಅಡಿ ವೇಗದಲ್ಲಿ ಕಲ್ಲೊಂದನ್ನು ಅದರತ್ತ ಎಸೆದೆ. ತನ್ನ ಗರಿಷ್ಠ ಎತ್ತರದಲ್ಲಿ ಕಲ್ಲು ಹಕ್ಕಿಗೆ ತಗುಲಿತು. ಅದು ಗರಿಷ್ಠ ದೂರದ ಅರ್ಧವೂ ಆಗಿತ್ತು. ಹಾಗಾದರೆ ನಾನು ಯಾವ ಕೋನದಲ್ಲಿ ಎಸೆದೆ ? (ಮಾರ್ಸ್ಕ್ ಎಂಬುದು ಇಂಗ್ಲೆಂಡಿನ ಕಡಲ ತೀರ)

ಲೀಲಾವತಿಯ ಲೆಕ್ಕ ಹೀಗಿದೆ – ೯ ಹಸ್ತಗಳ ಎತ್ತರದ ಕಂಬದ ಮೇಲೆ ನವಿಲು ಕುಳಿತಿದೆ. ಕಂಬದ ಬುಡದಲ್ಲಿರುವ ಹುತ್ತವನ್ನು ಸೇರಿಕೊಳ್ಳಲು ಹಾವೊಂದು ಕಂಬದ ಎತ್ತರದ ಮೂರರಷ್ಟು ದೂರದಿಂದ ಧಾವಿಸಿ ಬರುತ್ತಿದೆ. ಅದನ್ನು ಹಿಡಿಯಲು ನವಿಲು ನೇರವಾಗಿ ಅದರತ್ತ ಹಾರಿತು. ಎಷ್ಟು ದೂರದಲ್ಲಿ ನವಿಲು ಹಾವನ್ನು ಹಿಡಿಯುವುದು ? (ಹಸ್ತ ಎಂಬುದು ಒಂದು ಅಳತೆ)

ಉತ್ತರಗಳನ್ನು ಪಡೆಯುವ ವಿಧಾನ ಎರಡರಲ್ಲೂ ಬೇರೆ ಬೇರೆ. ನವಿಲು - ಹಾವಿನ ಲೆಕ್ಕಕ್ಕೆ ಪೈಥಾಗೊರಸ್ ಪ್ರಮೇಯ ಬಳಸಿದರೆ ಉತ್ತರ ಸಿಗುತ್ತದೆ. ಆದರೆ ಲೇಡೀಸ್ ಡೈರಿಯ ಲೆಕ್ಕಕ್ಕೆ ಭೌತ ವಿಜ್ಞಾನದ ತತ್ವಗಳು - ಪ್ರಕ್ಷೇಪ ಚಲನೆ, ಅದರ ಗರಿಷ್ಠ ಎತ್ತರ ಈ ಅಂಶಗಳನ್ನೂ ಬಳಸಬೇಕು.

ಮಿ|| ವಿಲಿಯಂ ಕಿಂಗ್ಸ್ ಎಂಬ ವ್ಯಕ್ತಿ ಕೇಳಿರುವ ಪ್ರಶ್ನೆ ಎರಡು ಹಡಗುಗಳದ್ದು – ಒಂದು ಉತ್ತರಧ್ರುವದಿಂದ ಹೊರಟು ದಕ್ಷಿಣಕ್ಕೆ ಬರುತ್ತಿದೆ. ವೇಗ ದಿನಕ್ಕೆ ಒಂದು ಡಿಗ್ರಿ. ಇನ್ನೊಂದು ಭೂಮಧ್ಯರೇಖೆಯಿಂದ ಹೊರಟು ಉತ್ತರಕ್ಕೂ, ವಾಯುವ್ಯಕ್ಕೂ ನಡುವಿನ ದಿಕ್ಕಿಗೆ ಸಾಗುತ್ತಿದೆ. ವೇಗ ದಿನಕ್ಕೆ ಎರಡು ಡಿಗ್ರಿ. ಅವುಗಳು ಅತಿ ಹತ್ತಿರವಾಗಿ ಎಷ್ಟು ದಿನಗಳ ನಂತರ ಹಾದುಹೋಗುವುವು ?

ಮಿ|| ರಿಚರ್ಡ್ ರಾಲೆ ಅವರ ಪ್ರಶ್ನೆ - ಜೂನ್ ೨೧ರಂದು ಒಂದು ಪ್ರದೇಶದಲ್ಲಿ ಸೂರ್ಯೋದಯವಾದ ೧ ಗಂಟೆ ೧೮ ನಿಮಿಷಗಳ ನಂತರ ಅದೇ ರೇಖಾಂಶದ ಇನ್ನೊಂದು ಸ್ಥಳದಲ್ಲಿ ಸೂರ್ಯೋದಯವಾಗುತ್ತದೆ. ಹಾಗಾದರೆ ಅವುಗಳ ಅಕ್ಷಾಂಶಗಳೆಷ್ಟು ?

ಇದಲ್ಲದೆ ಕೆಲವು ಸುಂದರ ಕವನಗಳಿವೆ - ಅದರಲ್ಲಿಯೇ ಸವಾಲು ಅಡಗಿದೆ. ಒಂದು ಉದಾಹರಣೆ x ಎಂಬುದು ಕವಿಯ ವಯಸ್ಸು; y ಎಂಬುದು ಬಾಲೆಯ ವಯಸ್ಸು : ಅದರ ಸಮೀಕರಣಗಳು

$x^{೩} + x^{೨}y = ೪೬೪೦y$

$x^{೨}y - y^{೩} = ೫೩೭.೬x$

ಇದನ್ನು ಕವಿ ಕೇಳುವ ಪರಿ ಹೀಗಿದೆ.

*ನನ್ನ ಮೆಚ್ಚಿನ ಹುಡುಗಿ, ಭುವನಸುಂದರಿ*
*ನನ್ನ ಒಲುಮೆಯ ನಿವೇದನೆಗಳೆಲ್ಲಾ ನಿರರ್ಥಕವೇ ಸರಿ*
*ನೀ ಪ್ರೌಢ; ನಿನ್ನ ನಾನೊಲ್ಲೆ, ನಾ ಕುವರಿ ಎನ್ನುವಳಲ್ಲಾ*
*ಅವಳ ಮಾತಿದು ಸರಿಯೇ, ತಿಳಿಸಿ ಜಾಣೆಯರೇ, ನೀವೆಲ್ಲಾ*

ಮತ್ತೊಬ್ಬ ಕೇಳುವ ಪ್ರಶ್ನೆ – ಇಂದು ನನ್ನ ನಿಶ್ಚಿತಾರ್ಥದ ದಿನ; ನನ್ನ ವಯಸ್ಸು ಅವಳ ಮೂರರಷ್ಟು; ಚಿಂತೆಯಿಲ್ಲ; ಇನ್ನು ಹದಿನೈದು ವರ್ಷಗಳ ನಂತರ ಅವಳ ವಯಸ್ಸು ನನ್ನ ಅರ್ಧದಷ್ಟು ಮಾತ್ರ. ಹಾಗಾದರೆ ನಮ್ಮ ವಯಸ್ಸುಗಳೆಷ್ಟು ?

ಇಂತಹ ಅನೇಕ ಪ್ರಶ್ನೆಗಳಿವೆ. ಸಣ್ಣ ವಯಸ್ಸಿನ ಹುಡುಗಿಯರು ಎರಡರಷ್ಟು ಮೂರರಷ್ಟು ವಯಸ್ಸಿನವರನ್ನು ಮದುವೆಯಾಗುತ್ತಿದ್ದುದು ಸಾಮಾನ್ಯವೇ ಅಥವಾ ಇದು ಸವಾಲಿಗೋಸ್ಕರ ಸೃಷ್ಟಿಯಾದವೋ ಎಂಬುದರ ಬಗ್ಗೆ ಸಮಾಜಶಾಸ್ತ್ರಜ್ಞರು ತಲೆ ಕೆಡಿಸಿಕೊಳ್ಳಬಹುದು.

ಅದೇನೇ ಇರಲಿ, ಅಂದಿನ ಮಹಿಳೆಯರು ಈ ಬಗೆಯ ಲೆಕ್ಕಗಳನ್ನು ಮಾಡಬಲ್ಲ ಪರಿಣತಿ ಪಡೆದಿದ್ದರು ಎಂಬುದು ಗಮನಾರ್ಹ. ಈ ಪತ್ರಿಕೆಯನ್ನು ಟಿಪ್ಪರ್ ಎಂಬಾತ ೧೭೦೪ರಲ್ಲಿ ಆರಂಭಿಸಿದಾಗ ಅಂದಿನ ಮಹಾರಾಣಿ ಆ್ಯನೆ ಬಹಳ ಉತ್ತೇಜನ ಕೊಟ್ಟು ಎಲ್ಲ ಸ್ತ್ರೀಯರು ಓದಲೇಬೇಕೆಂದು ಆಗ್ರಹಿಸಿದ್ದಳಂತೆ. ಆ ದಿನಗಳಲ್ಲಿ ಗಣಿತ ಎಂಬುದು ಬಹಳ ತೊಡಕಿನ ವಿಷಯ; ಮಹಿಳೆಯರ ನಾಜೂಕು ಮೆದುಳಿಗೆ ಇದರಿಂದ ಘಾಸಿಯಾಗಬಹುದು ಎಂಬ ನಂಬಿಕೆ ಪ್ರಚಲಿತವಾಗಿತ್ತಂತೆ; ಇದು ಇನ್ನಾವುದೋ ಸಂದರ್ಭದಲ್ಲಿ ಪ್ರಕಟವಾಗಿದ್ದ ಸುದ್ದಿ. ಆದರೆ ಈ ಸಂಪುಟಗಳನ್ನು ಓದಿದ ಮೇಲೆ ಈ ನಂಬಿಕೆ ಸುಳ್ಳು ಎಂದು ನನಗೆ ಅನ್ನಿಸುತ್ತದೆ.

ಈ ಪುಸ್ತಕ ವೆಬ್‌ನಲ್ಲಿ ಲಭ್ಯವಿದೆ. ಕೆಳಕಂಡ ವಿವರವನ್ನು ಬರೆದು ಗೂಗಲ್ ಮಾಡಿದರೆ ಸಿಗುತ್ತದೆ.

Thomas Leybourn, "The mathematical Questions, proposed in the Ladies' diary", vol. 3, 1861


**ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರೂ ತಾರಾಲಯ, ಶ್ರೀ ಟಿ. ಚೌಡಯ್ಯರಸ್ತೆ, ಬೆಂಗಳೂರು - ೫೬೦ ೦೦೧


# ಅರಿವು



ಅರಿವು ಅಂತರಂಗದ ಬೆಳಕಿನ ಬೇಗೆ
ಸೂಕ್ಷ್ಮತಮ ಸಂಚಾರಿ ನಿತ್ಯ ನಿರಹಂಕಾರಿ
ಸತ್ಯದೊಲವನು ಕೈಹಿಡಿದು ನಡೆಸುವ ದೀವಿಗೆ
ಸೋಜಿಗದ ಬೆಟ್ಟದ ಗೀಜಗದ ಗೂಡಂತೆ
ಹಸಿರಿನಂಗಳದಿ ಕುಸುರಿ ಬಿಡಿಸಿದ ದೇವನಗೆ.

ಬುದ್ಧದೇವ ತಲೆಮೇಲೆ ಕುಂತರೆ ಸ್ಥಾವರ
ಬರಿದೆ ಅಡ್ಡಾಡಿದರೆ ಬಯಲು ಆಲಯವಲ್ಲ
ಜಗನ್ನಾಥನೂ ಜಂಗಮರೂಪಿಯಾಗಿ ಇಳಿದು
ತಾಳ್ಮೆ ತವನಿಧಿಯಾಗಿ ಬಲ್ಲವರ ಬಲೆಯಾಗಬೇಕು
ಆದಿಮ ಕುಲಾಯುಧ ಹಿಡಿದು ಅಕಾಲ ಬಗೆವುದು
ತಿಳಿವಿನರವಂಟಿಕೆ ಚೂರುಮಾಡಿದ ತಿಳಿಗೇಡಿ ರೀತಿ
ಇಳೆಯೊಳಗಿನ ಆಳಕ್ಕಿಳಿದು ಮಣ್ಣ ಅದಿರ ರಾಶಿತಂದು
ಕಣ್ಣಬೆಳಕಲಿ ಸೋಸಿ ಅಪರಂಜಿಗಟ್ಟಿ ಕಡೆಯಬೇಕು.

ಅರಿವಿನ ಪ್ರಭೆ ಸುತ್ತ ಹತ್ತೂರಿನ ಕೈಮರ
ದಾರಿ ಹುಡುಕುವ ದಾದಿಯರ ಬಿಸಿಲ ಬಳಕೆಗೆ ಚಾಮರ
ಬಸಿರ ಬಯಕೆಯ ತಳಮಳದ ತಳಿರ ಮಾಮರ
ಸಂತೆಯಲಿ ಕುಂತ ಸಂತನಾತ್ಮದ ಒಂಟಿತನದ ವಿಚಾರ
ಋಷಿಮುನಿಗಳಾಗಲು ಗಡ್ಡಧಾರಿಯು ಸಲ್ಲ
ವ್ರತಧಾರಿಯಾದವ ಮಡದಿಮಕ್ಕಳ ಗೆಲ್ಲ
ನಿತ್ಯಪೂಜೆಯ ಕಾವು ಮಂತ್ರಕುದುರದು ಮಾವು
ಶತಮಾನಗಳ ನೋವ ನೀಗುವುದೆ ತಿಳಿವು ಗೌರಿಶಂಕರ.

ಅರಿವಿನ ಪ್ರಭಾವಳಿ ನೆತ್ತಿಗೇರಿದರೆ ಭ್ರಮೆ
ಪಂಚಾಂಗಗಳೆಚ್ಚರದಿ ಪವಡಿಸಿದರೆ ಉಪಮೆ
ವೇಷತೊಟ್ಟರೆ ಬಣ್ಣ ಭಾಷೆಯಿಟ್ಟರೆ ಸುಣ್ಣ
ಪರನಿಂದ ಪಾಪಗೊಳ ಅಸಾದಿಯರ ಬೈಗುಳ
ಜಗದ ಜಂಜಡದೊಳಗೆ ಮುಳುಗೇಳುವ ನಾವೆಗೆ
ಅರಿವಿನರ್ಥದ ಹುಟ್ಟುಹಾಕಿ ದಡ ಸೇರಲಿ ಸುಮ್ಮಗೆ.


**ಡಾ|| ಎಲ್. ಹನುಮಂತಯ್ಯ**
ನಂ. ೧೦೭೩, ೩ನೇ 'ಡಿ' ಅಡ್ಡರಸ್ತೆ, ೧ನೇ ಘಟ್ಟ, ೩ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯




## ಸುಜನಾ

ಡಾ।। ಪ್ರಧಾನ್ ಗುರುದತ್ತ

**ಪುಟ : ೧೨೦**

**ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಭಾರತೀಯ ಸಾಹಿತ್ಯ ಲೋಕದ ಅತ್ಯುನ್ನತ, ಶ್ರೇಷ್ಠ ಪ್ರಶಸ್ತಿಗಳಲ್ಲಿ ಜ್ಞಾನಪೀಠ ಪ್ರಶಸ್ತಿಯ ನಂತರದ ಸ್ಥಾನ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರಕ್ಕಿದೆ. ಸುಮಾರು ೨೦೦೦ಕ್ಕೂ ಅಧಿಕ ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯ ಪರಂಪರೆ ಜ್ಞಾನಪೀಠ ಪ್ರಶಸ್ತಿಯಲ್ಲದೆ, ಸುಮಾರು ಐವತ್ತಕ್ಕೂ ಅಧಿಕ ಅಕಾಡೆಮಿ ಪುರಸ್ಕಾರಗಳಿಗೆ ಭಾಜನವಾಗಿರುವುದು ಕನ್ನಡ ಸಾಹಿತ್ಯ ಸಮೃದ್ಧತೆಗೆ ಸಾಕ್ಷಿಯಾಗಿದೆ. ಇಂತಹ ಶ್ರೇಷ್ಠ ಪ್ರಶಸ್ತಿಯ ಪುರಸ್ಕೃತರಲ್ಲಿ ಸುಜನಾ ಸಹ ಒಬ್ಬರು. ಸುಜನಾರ ಬದುಕು ಹಾಗೂ ಕೃತಿಗಳ ಕುರಿತ ಬರಹಗಳು ಇಲ್ಲಿಯ ತನಕ ಸಂಕ್ಷಿಪ್ತ ಲೇಖನಗಳಿಗೆ ಸೀಮಿತವಾಗಿದ್ದು, ಸಮಗ್ರ ಮಾಹಿತಿಯ ದೃಷ್ಟಿಯಿಂದ ಕೊರತೆಯನ್ನು ಅನುಭವಿಸುತ್ತಿದ್ದವು. ಆದರೆ, ಈ ಕೃತಿ ಸುಜನಾರ ಜೀವನ-ಸಾಧನೆಗಳ ಸಮಗ್ರ ಪರಿಚಯವನ್ನು ಮಾಡಿಕೊಡುವುದಲ್ಲದೆ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ, ಪ್ರಶಸ್ತಿ ಪುರಸ್ಕೃತ ಕೃತಿಗಳ ಸವಿವರ ವಿಮರ್ಶೆ, ಕೃತಿಸೂಚಿ, ಬದುಕಿನ ಮುಖ್ಯ ವರ್ಷಗಳು, ಪ್ರಶಸ್ತಿ-ಪುರಸ್ಕಾರಗಳ ಪಟ್ಟಿಗಳನ್ನೊಳಗೊಂಡ ವಿವರಗಳ ಸಮಗ್ರ ಮಾಹಿತಿಯನ್ನು ಒದಗಿಸುತ್ತದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರು ಮಾಲೆಯಲ್ಲಿ ಪ್ರಕಟವಾಗುತ್ತಿರುವ ಕೃತಿ ಇಲ್ಲಿಯತನಕ ಅನುಭವಿಸಿದ ಕೊರತೆಯನ್ನು ನೀಗುತ್ತದೆ. ಅಲ್ಲಲ್ಲಿ ಮುಖಸ್ತುತಿಯ ಅಂಶಗಳಿದ್ದರೂ ಅದು ಸಹಜ ಎನಿಸುತ್ತದೆ. ಹೀಗೆ ಪ್ರಶಸ್ತಿ ಪುರಸ್ಕೃತರ ಮಾಲೆಯನ್ನು ಪ್ರಕಟಿಸುವುದು ದುಬಾರಿ ಹಾಗೂ ಶ್ರಮದಾಯಕವಾದುದು. ಈ ಕೃತಿ ಸುಜನಾರ ಬದುಕು-ಬರಹಗಳ ಕುರಿತು ಸಮಗ್ರ ಮಾಹಿತಿಯನ್ನು ನೀಡುವ ಮೂಲಕ ಈವರೆಗಿನ ಕೊರತೆಯನ್ನು ನೀಗಿದೆ ಎಂಬುದರಲ್ಲಿ ಸಂಶಯವಿಲ್ಲ.

## ಚಿಂತೆ-ಚಿಂತನೆ

ಡಾ।। ಸಾರಾ ಅಬೂಬಕ್ಕರ್

**ಪುಟ : ೧೯೫ + iv** **ಬೆಲೆ : ರೂ. ೧೪೫**

**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಮೈಕ್ರೋವೇವ್ ಸ್ಟೇಷನ್ ರಸ್ತೆ, ಮಂಗಳೂರು - ೬

ಇಂದಿನ ವಿದ್ಯಾರ್ಥಿಗಳಿಗೆ ತಮ್ಮ ಅಂತರಾಳದ ಚೈತನ್ಯಗಳನ್ನು ಚಿಗುರಿಸಿಕೊಳ್ಳುವ ಶಿಕ್ಷಣ ಸಿಗುತ್ತಿಲ್ಲ. ಕೇವಲ ಶವಸಂಸ್ಕಾರ ಸಂದರ್ಭದ ರೀತಿಯ ಶೃಂಗಾರದ ಶಿಕ್ಷಣವನ್ನು ನೀಡುತ್ತಿದ್ದೇವೆ. ಆದರೆ ಶಿಕ್ಷಣದ ಮುಖ್ಯ ಉದ್ದೇಶ ಸಮಾಜವನ್ನು ಅರ್ಥಮಾಡಿಕೊಂಡು ಸಮಾಜದ ಸ್ವಾಸ್ಥ್ಯವನ್ನು ನಿರಂತರವಾಗಿ ಕಾಪಾಡಲು ಶ್ರಮಿಸುವುದೇ ಆಗಿದೆ. ಈ ಹಿನ್ನೆಲೆಯಲ್ಲಿ ಸಾರಾ ಅಬೂಬಕ್ಕರ್ ಅವರ ಈ ಸಂಕಲನದ ಹಲವು ಲೇಖನಗಳು ತೀವ್ರತರವಾಗಿ ಚರ್ಚಿಸುತ್ತವೆ. ಸಾಹಿತಿಯಾಗಿದ್ದೂ, ಸಾಹಿತ್ಯ ಕೃತಿಗಳಿಗಿಂತ ಸಮಾಜದ ಕುರಿತಾಗಿ ಬರೆದ ಬರಹಗಳು ಈ ಸಂಕಲನದಲ್ಲಿವೆ. ಸುಮಾರು ೪೨ ಲೇಖನಗಳಿರುವ ಈ ಸಂಕಲನದಲ್ಲಿ ಕನ್ನಡಶಾಲೆಗಳು, ಪಠ್ಯಪುಸ್ತಕಗಳ ರೂಪಿಸುವಿಕೆ, ಮುಸ್ಲಿಂ ಮಹಿಳೆಯ ಸ್ಥಿತಿಗತಿ, ಮಹಿಳಾ ವಿರೋಧಿ ಕಾನೂನುಗಳು ಮುಂತಾದ ಸಂಗತಿಗಳ ಬಗೆಗೆ ಚರ್ಚಿಸುವ, ಯೋಚನೆಗೆ ಹಚ್ಚುವ ಚಿಂತನಶೀಲ ಲೇಖನಗಳ ಸಂಗ್ರಹವಿದು, ಸಮಾಜದ ಪ್ರತಿ ಘಟನೆಗೂ ಸ್ಪಂದಿಸುವ ತಾಯಿ ಮನಸ್ಸಿನ ಈ ಲೇಖಕಿಯಲ್ಲಿ ಸಮಾಜಶಾಸ್ತ್ರಜ್ಞೆಯಲ್ಲಿ ಇರಬೇಕಾದ ವಿವೇಕ, ಸ್ತ್ರೀವಾದಿಯಲ್ಲಿರಬೇಕಾದ ಕಾಳಜಿ, ಹೋರಾಟಗಾರ್ತಿಯಲ್ಲಿರಬೇಕಾದ ತೀವ್ರವಾಗಿ ಮಿಡಿಯುವ ಗುಣ, ಹಾಗೂ ಸಾಮಾಜಿಕ ಬದ್ಧತೆ, ಈ ಎಲ್ಲಾ ಗುಣಗಳನ್ನು ಇಲ್ಲಿ ಕಾಣಬಹುದು. ಒಟ್ಟಾರೆ, ಸಮಾಜಮುಖಿ ಚಿಂತನೆಯ ಯುವ ಬರಹಗಾರರಿಗೆ ಕೈಪಿಡಿಯಂತಿದ್ದು, ಸುತ್ತಲಿನ ಸಮಾಜವನ್ನು ಗ್ರಹಿಸಬೇಕಾದ ವಿಧಾನಗಳ ಅನಿವಾರ್ಯತೆಯನ್ನು ಕೃತಿ ಮನದಟ್ಟು ಮಾಡುತ್ತದೆ.




## ಬೆಂದ ಕಾಳು ಆನ್ ಟೋಸ್ಟ್ (ನಾಟಕ)

ಗಿರೀಶ ಕಾರ್ನಾಡ

**ಪುಟ : xii + ೮೮ = ೧೦೦** **ಬೆಲೆ : ರೂ. ೬೦**

**ಮನೋಹರ ಗ್ರಂಥಮಾಲಾ,** ಲಕ್ಷ್ಮೀ ಭವನ, ಸುಭಾಷ್ ರಸ್ತೆ, ಧಾರವಾಡ - ೫೮೦ ೦೦೧

ಪ್ರಸ್ತುತ ಭಾರತೀಯ ಸಮಾಜದಲ್ಲಿ ಗ್ರಾಮಗಳು ನಿರ್ಲಕ್ಷ್ಯಕ್ಕೊಳಗಾಗಿ ನಗರಗಳು ವೈಭವೀಕರಣ ಗೊಳ್ಳುತ್ತಿವೆ. ಗ್ರಾಮ ಬದುಕು ಅನಾಗರಿಕವೆಂತಲೂ, ನಗರ ಬದುಕು ನಾಗರಿಕವೆಂತಲೂ ಕರೆಸಿಕೊಳ್ಳುತ್ತಿವೆ. ಗ್ರಾಮಗಳಲ್ಲಿ ಸಹಜವಾಗಿರುವ ಸಹಕಾರ, ನಿಸ್ವಾರ್ಥತೆ, ಪ್ರೀತಿ, ನಂಬಿಕೆ, ವಿಶ್ವಾಸಗಳು ನಗರಗಳಲ್ಲಿ ಬಂಡವಾಳವಾಗಿಯೂ, ಮುಖವಾಡವಾಗಿಯೂ, ವಂಚಿಸಲು ಅಸ್ತ್ರವಾಗಿಯೂ ಬಳಕೆಯಾಗುತ್ತಿವೆ. ಹೀಗೆ ಮುಖವಾಡವನ್ನೇ ಬದುಕನ್ನಾಗಿ ಜೀವಿಸುವ ನಗರಗಳ ಕರಾಳ ಮುಖಗಳನ್ನು ಕಾರ್ನಾಡರ 'ಬೆಂದ ಕಾಳು ಆನ್ ಟೋಸ್ಟ್' ಅನಾವರಣಗೊಳಿಸುತ್ತದೆ. ಮಹಾನಗರಗಳಾಗುವ ಧಾವಂತದಲ್ಲಿ ಮುನ್ನುಗ್ಗುತ್ತಿರುವ ಎಲ್ಲಾ ಪಟ್ಟಣಗಳಿಗೂ, ಹಳ್ಳಿಗಳಿಂದ ಬಣ್ಣದ ಕನಸುಗಳನ್ನಿಟ್ಟು ಕೊಂಡು ನಗರಗಳೆಡೆಗೆ ಸಾಗುತ್ತಿರುವ ಜನಸಮುದಾಯಕ್ಕೂ ಎಚ್ಚರಿಕೆಯ ಗಂಟೆಯಾಗಿದೆ. ಇಪ್ಪತ್ತೊಂದನೇ ಶತಮಾನದ ಎಲ್ಲ ವಲಯಗಳು ನಗರಗಳೆಂಬ ನಾಗರಿಕತೆಯ ಕಡೆ ಶರವೇಗದಲ್ಲಿ ಸಾಗುತ್ತಿರುವ ಈ ಪ್ರಸ್ತುತದಲ್ಲಿ ಕಾರ್ನಾಡರ ಈ ನಾಟಕ ನಗರ ಸಮಾಜದ ಎಲ್ಲಾ ಸ್ತರಗಳನ್ನೂ ಕಣ್ಣೆದುರು ನಿಲ್ಲಿಸಿ ದಿಗ್ಭ್ರಮೆ ಉಂಟುಮಾಡುತ್ತದೆ. ಹೊಸ ಸಂವೇದನೆಯನ್ನು, ಪರಸ್ಪರಾವಲಂಬನೆಯನ್ನು ಮನಗಾಣಿಸುವ ಈ ಕೃತಿ ನೂರಾರು ಕನಸುಗಳನ್ನು ಹೊತ್ತು ಪ್ರಾಮಾಣಿಕತೆಯ ಮುಖವಾಡದಲ್ಲಿ ಹಳ್ಳಿಯಿಂದ ಬಂದ ಮುಗ್ಧರು ಎಲ್ಲೂ ಸಲ್ಲದ ಎಡಬಿಡಂಗಿಗಳಾಗುತ್ತಿರುವ ಸನ್ನಿವೇಶಗಳನ್ನು ಅನಾವರಣಗೊಳಿಸುತ್ತದೆ. ಇಂದಿನ ನಗರವಾಸಿಗಳು ಅನುಭವಿಸುತ್ತಿರುವ ಸಹಿಸಲೇಬೇಕಾಗಿ ಬಂದಿರುವ ಹಿಂಸೆಗಳು, ಅದನ್ನೇ ನಾಗರಿಕತೆ ಎಂದು ಸಮಾಧಾನ ಮಾಡಿಕೊಳ್ಳಬೇಕಾದ ಅನಿವಾರ್ಯತೆಗಳನ್ನು ಕೃತಿ ಮನೋಜ್ಞವಾಗಿ ವಿವರಿಸುತ್ತದೆ.

## ಉರಿಯ ಪದವು (ನಾಮದೇವ್ ಢಸಾಳ್ ಕವಿತೆಗಳು)

ಕನ್ನಡಕ್ಕೆ : ಡಾ।। ಎಚ್. ಎಸ್. ಅನುಪಮಾ

**ಪುಟ : ೧೩೪** **ಬೆಲೆ : ರೂ. ೧೫೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ ಹಾಸ್ಟೆಲ್, ಗದಗ - ೫೮೨ ೧೦೧




''ಶೋಷಿತ ಜಗತ್ತಿನ ಬರಹಗಾರನಿಗೆ ಅಗತ್ಯವಾದುದು ಸಾಮಾಜಿಕ ಸಿದ್ಧಾಂತವೇ ಹೊರತು ಕಲಾತ್ಮಕ ಸಿದ್ಧಾಂತವಲ್ಲ'' - ಎಂಬ ವೊಲೆ ಷೋಯಿಂಕಾನ ಮಾತು ಈ ಕವನ ಸಂಕಲನಕ್ಕೆ ಹೆಚ್ಚು ಒಪ್ಪುತ್ತದೆ. ಇದು ಶೋಷಿತ ಸಮಾಜದ ಅಷ್ಟದಶಗಳನ್ನು ಹಿಡಿದಿಟ್ಟಿದೆ. ನಾಮದೇವ ಢಸಾಳರು ತಮ್ಮ ಕವನಗಳಲ್ಲಿ ತೋರುವ ಸಿಟ್ಟು, ಆಕ್ರೋಶಗಳಿಗೆ ವಂಚಿತ ಸಮುದಾಯವನ್ನು ಎಚ್ಚರಿಸುವ, ಅನ್ಯಾಯಗಳನ್ನು ಖಂಡಿಸುವ ಉದ್ದೇಶವಿದೆ. ಈ ಕಾವ್ಯವನ್ನು ಸುಮ್ಮನೆ ಓದಿಕೊಂಡು ಇದ್ದುಬಿಡಲಾಗದೆ ಸಮಾಜದ ಕುರಿತು ತೀವ್ರತರವಾದ ಚಿಂತನೆಗೆ ದೂಡುತ್ತದೆ. ನಮ್ಮೊಳಗಿನ ಮನುಷ್ಯನನ್ನು ಎಚ್ಚರಿಸುತ್ತದೆ. ನಾಮದೇವ ಢಸಾಳರ ಭಾಷಾ ಲೋಕ ಹಾಗೂ ಜನಪದ ಸಂಪೂರ್ಣ ಭಿನ್ನ. ಲೇವಡಿ, ವ್ಯಂಗ್ಯ, ಸಿಟ್ಟಿನ ಅಭಿವ್ಯಕ್ತಿಗೆ ಬಳಸುವ ಗ್ರಾಮ್ಯ (ಕಚ್ಚಾ) ಭಾಷೆ ಸಾಂಪ್ರದಾಯಿಕ ಭಾಷೆಯ ಎಲ್ಲಾ ನಿರ್ಬಂಧಗಳನ್ನು ಛಿದ್ರಗೊಳಿಸಿ ಕಾವ್ಯಕ್ಕೆ ಗಡುಸುತನವನ್ನು ಘಾತಿಸಿ ಹೇಳುವ ಶೈಲಿ ಇವರದ್ದಾಗಿದೆ. ಇದು ಅಗತ್ಯವೂ ಕೂಡ. ವಂಚನೆಗೆ ಒಳಗಾದ ಸಮುದಾಯದ ಜಾಗೃತ ಮನಸ್ಸುಗಳು ತಮ್ಮ ಸಿಟ್ಟು, ಆಕ್ರೋಶ, ನೋವು, ಹಿಂಸೆ ಹಾಗೂ ಬೇಗುದಿಯನ್ನು ಸಹಜವಾಗಿ ಹೊರಗೆಡವಲು ನೈಜತೆಯಿಂದ ಕೂಡಿರಲು ಗ್ರಾಮ್ಯ ಭಾಷೆಯೇ ಹೆಚ್ಚು ಸೂಕ್ತ. ಒಟ್ಟಾರೆ ಎಲ್ಲಾ ಸಾಮಾಜಿಕ, ರಾಜಕೀಯ, ಧಾರ್ಮಿಕ ಮೌಲ್ಯದ ಕಟ್ಟುಪಾಡುಗಳನ್ನು ಮುಟ್ಟುಮೈಲಿಗೆಗಳನ್ನು ಝುಂಕಿಸಿ ಮಾತನಾಡುವ ಇಲ್ಲಿನ ಕವನಗಳು ವಚನಕಾರ ಅಲ್ಲಮನ ಶೈಲಿಯನ್ನು ನೆನಪಿಸುತ್ತವೆ. ತಿವಿಯುವ ಬಾಣದಂತೆ ತೂರಿಬರುತ್ತವೆ. ಅನುಪಮಾ ಅವರ ಅನುವಾದ ನಾಮದೇವ ಢಸಾಳರನ್ನು ಹಾಗೂ ಅವರ ಕವಿತೆಗಳನ್ನು ಕನ್ನಡವಾಗಿಸಿದೆ. ಈ ಅನುವಾದಕರು ಕನ್ನಡದ ಸಹಜ ಪದಗತಿಯ ನೆಲಮಾತು, ಕನ್ನಡ ಭಾಷೆಯ ಬಣ್ಣ, ಲಯ, ವಾಸನೆಯನ್ನು ಹಿಡಿದಿಡುವಲ್ಲಿ ಯಶ ಕಂಡಿದ್ದಾರೆ.

– **ರಮೇಶ ಕೋಲಾರ,** ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧

## ರಹಮತ್ ತರೀಕೆರೆ

*ಡಾ॥ ರಂಗನಾಥ ಕಂಟನಕುಂಟೆ*

**ಪುಟ : ೧೩೨** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

'ನವಕರ್ನಾಟಕ ಸಾಹಿತ್ಯ ಸಂಪದ' ಮಾಲೆಯಲ್ಲಿ ಸೇರ್ಪಡೆಗೊಂಡ ಈ ಪುಸ್ತಕವು ನಾಡಿನ ಪ್ರಸಿದ್ಧ ಲೇಖಕರೂ, ಹೊಸ ಚಿಂತನೆಯ ಹರಿಕಾರರೂ ಆಗಿರುವ ರಹಮತ್ ತರೀಕೆರೆ ಅವರ ಬದುಕು - ಬರಹಗಳ ಕುರಿತದ್ದಾಗಿದೆ. 'ಕತ್ತಿಯಂಚಿನ ದಾರಿ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿರುವ ಇವರ ಬಾಳದಾರಿಯೂ ಕತ್ತಿಯಂಚಿನ ಮೇಲಿನ ನಡೆಯೇ ಆಗಿರುತ್ತದೆ. ತಮ್ಮ ಓದು-ಪ್ರವಾಸಗಳಿಂದ ವಿವಿಧ ಅನುಭವಗಳನ್ನು ಗಳಿಸಿದ ರಹಮತ್ ಒಳ್ಳೆಯ ಸಾಹಿತ್ಯವನ್ನು ಕನ್ನಡಿಗರಿಗೆ ನೀಡಿ ಆದರಣೀಯ ಬರಹಗಾರರಾಗಿ ಹೊಮ್ಮಿದ್ದಾರೆ. ಯಾವುದೇ ಮುಲಾಜಿಗೆ ಒಳಗಾಗದೆ ತನ್ನ ನಿಲುವನ್ನು ನಿಷ್ಠುರವಾಗಿ ಪ್ರತಿಪಾದಿಸಿ ನಿರ್ಭಿಡೆಯಿಂದ ಬರೆಯಬಲ್ಲವರಿವರು. ಸಾಂಸ್ಕೃತಿಕ ಮುಖಾಮುಖಿಯೆಂಬ ಹೊಸ ಆಯಾಮವನ್ನೇ ಸೃಷ್ಟಿಸಿ, ವಿವಿಧ ಪ್ರಕಾರಗಳಲ್ಲಿ ಬರವಣಿಗೆ ರೂಢಿಸಿಕೊಂಡು, ವಿಶ್ವವಿದ್ಯಾಲಯದಲ್ಲಿ ಸಾಹಿತ್ಯಯೋಜನೆಗಳನ್ನು ಸಾಕಾರಗೊಳಿಸಿ ಜನಪ್ರಿಯರಾಗಿದ್ದಾರೆ. ಆರೋಗ್ಯಕರ ವಾಗ್ವಾದಗಳನ್ನು ಹುಟ್ಟುಹಾಕಿ




ಸಾಹಿತ್ಯ ಸಮುದ್ರವನ್ನು ಮಥಿಸಿದ್ದಾರೆ, ಹೊಸ ಚಿಂತನೆಯ ನವನೀತ ನಮಗಿತ್ತಿದ್ದಾರೆ. ಇವರ ಬದುಕು-ಬರಹ, ವೃತ್ತಿಜೀವನ, ಇವರನ್ನರಸಿಬಂದ ಪ್ರಶಸ್ತಿ-ಪುರಸ್ಕಾರಗಳು, ವ್ಯಕ್ತಿಗತ ಸಾಧನೆಗಳು – ಇವೇ ಮುಂತಾದ ವಿವರಗಳನ್ನು ಸಂಗ್ರಹಿಸಿ, ದಾಖಲಿಸಿ ಕೃತಿರಚನೆ ಮಾಡಿದವರು ಡಾ॥ ರಂಗನಾಥ ಕಂಟನಕುಂಟೆ. ಪ್ರತಿಭೆಯೆದುರಿಗೆ ಇನ್ನೊಂದು ಪ್ರತಿಭೆ ಭೇಟಿಯಾದರೆ ಪರಸ್ಪರ ಗೌರವ ಮೂಡುವಂತೆ, ರಹಮತ್ ಬಗ್ಗೆ ಬರೆದು ಅವರನ್ನು ತಿಳಿದುಕೊಳ್ಳಲು ಇದೇ ಸೂಕ್ತ ಪುಸ್ತಕ ಎಂದೆನ್ನುವಂತೆ ಇದನ್ನು ರಚಿಸಿಕೊಟ್ಟಿದ್ದಾರೆ.

## ಜಿ. ಎಸ್. ಶಿವರುದ್ರಪ್ಪ




*ಡಾ॥ ಎಚ್. ಎಸ್. ವೆಂಕಟೇಶಮೂರ್ತಿ*

**ಪುಟ : ೧೨೦** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ನವಕರ್ನಾಟಕ ಪ್ರಕಾಶನ ಸುಮಾರು ಹನ್ನೆರಡು ವರ್ಷಗಳಿಂದ ತನ್ನ ಹೆಮ್ಮೆಯ ಯೋಜನೆಗಳಲ್ಲೊಂದಾದ 'ನವಕರ್ನಾಟಕ ಸಾಹಿತ್ಯ ಸಂಪದ' ಮಾಲೆಯಲ್ಲಿ ಈಗಾಗಲೇ ಐವತ್ತೆರಡು ಕೃತಿಗಳನ್ನು ಹೊರತಂದಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರನ್ನು ಪರಿಚಯಿಸುವ ಅಮೋಘ ಸಾಧನೆಯಿದೆಂದು ಈಗಾಗಲೇ ಸಾಹಿತ್ಯ ವಲಯದಲ್ಲಿ ಪ್ರಶಂಸೆ ಪಡೆದಿದೆ. ಪ್ರಸ್ತುತ ಕೃತಿ ಈ ಪ್ರಶಸ್ತಿ ಪಡೆದಿರುವ ರಾಷ್ಟ್ರಕವಿ - ಶ್ರೇಷ್ಠಕವಿಯೆಂದು ನಾಡಿನಾದ್ಯಂತ ಗೌರವಿಸಲ್ಪಟ್ಟ ಡಾ॥ ಜಿ. ಎಸ್. ಶಿವರುದ್ರಪ್ಪ ಅವರನ್ನು ಕುರಿತದ್ದಾಗಿದೆ. ಜಿ. ಎಸ್. ಎಸ್. ತಮ್ಮ ಸಾಧನೆಯನ್ನು ಗದ್ಯ-ಪದ್ಯ ಎರಡೂ ಪ್ರಕಾರಗಳಲ್ಲಿ ಸರಿದೂಗಿಸಿ ಸೈ ಎನಿಸಿಕೊಂಡವರು. ಕರ್ಣಾನಂದಕರವಾದ ಇವರ ಭಾವಗೀತೆಗಳನ್ನು ಕೇಳದ ಕನ್ನಡಿಗನಿಲ್ಲ - ಹಾಡದ ಗಾಯಕನಿಲ್ಲ ಎಂಬಷ್ಟು ಖ್ಯಾತಿ ಇವರದ್ದು. ಇವರ ಭಾವಗೀತೆಗಳನ್ನಾಯ್ದು ಗಾಯಕರು ಮಧುರ ಕಂಠದಿಂದ ಭಾವಪೂರ್ಣವಾಗಿ ಹಾಡುತ್ತಿದ್ದರೆ, ಸುತ್ತಲೂ ಹೊಸದಾದ ಭಾವಲೋಕವೊಂದು ಸೃಷ್ಟಿಯಾಗಿ ಶ್ರೋತೃ ಮೈಮರೆತು ಕೇಳುವುದು ಕಛೇರಿಗಳಲ್ಲಿ ಸಾಮಾನ್ಯ. ತಮ್ಮ 'ಕಾವ್ಯಾರ್ಥ ಚಿಂತನ'ಕ್ಕಾಗಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿರುವ ಜಿ. ಎಸ್. ಎಸ್. ಅವರ ಬಾಲ್ಯ, ವಿದ್ಯಾಭ್ಯಾಸ, ವೃತ್ತಿಜೀವನ, ಸಾಹಿತ್ಯಲೋಕದ ಸಾಧನೆ, ಪಡೆದಿರುವ ಪ್ರಶಸ್ತಿ-ಪುರಸ್ಕಾರ-ಗೌರವ – ಇವೆಲ್ಲವನ್ನೂ ಅವರ ಕೃತಿಗಳ ಪರಿಚಯದೊಂದಿಗೆ ಈ ಕೃತಿಯಲ್ಲಿ ನೀಡಲಾಗಿದೆ. ಜಿ. ಎಸ್. ಎಸ್. ಅವರನ್ನು ನಿಕಟವಾಗಿ ಬಲ್ಲ ಇನ್ನೋರ್ವ ಕವಿ ಡಾ॥ ಎಚ್. ಎಸ್. ವೆಂಕಟೇಶಮೂರ್ತಿ ಇದನ್ನು ಬರೆದಿದ್ದಾರೆ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

---

# ಸಾದರ ಸ್ವೀಕಾರ

**ಎ. ಕೆ. ರಾಮಾನುಜನ್ ಆಯ್ದ ಪ್ರಬಂಧಗಳು**

*ಅನುವಾದಕರು : ಓ. ಎಲ್. ನಾಗಭೂಷಣಸ್ವಾಮಿ*

***ಪುಟ : x + ೩೪೦ = ೩೫೦*** ***ಬೆಲೆ : ರೂ. ೩೦೦***

**ಹೆಗ್ಗುರುತು** (ಸಣ್ಣ ಕಥೆಗಳ ಸಂಕಲನ) *ಕೆ. ಸತ್ಯನಾರಾಯಣ*

***ಪುಟ : xxii + ೧೩೮ = ೧೬೦*** ***ಬೆಲೆ : ರೂ. ೧೨೦***

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಮನೋಹರ ಗ್ರಂಥಮಾಲಾ,** ಲಕ್ಷ್ಮಿ ಭವನ, ಸುಭಾಷ್ ರಸ್ತೆ, ಧಾರವಾಡ - ೫೮೦ ೦೦೧

**ಗೀತಾಂಜಲಿ** (ರವೀಂದ್ರನಾಥ ಟ್ಯಾಗೋರ, ಕನ್ನಡ ಭಾವಾನುವಾದ)

*ಡಾ॥ ಕೆ. ಬಿ. ಪವಾರ*

***ಪುಟ : xx + ೧೨೪ = ೧೪೪*** ***ಬೆಲೆ : ರೂ. ೯೫***

**ಕಣ್ವ ಪ್ರತಿಷ್ಠಾನ,** ನಂ. ೨೩/ಎ, ಮೊದಲಮಹಡಿ, ೧೦ನೇ ಅಡ್ಡರಸ್ತೆ, ಮೊದಲ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ನಾನು ಕಂಡಂತೆ ನನಗೆ ಕಂಡಷ್ಟು** (ವಿ. ಕ. ಅಂಕಣಗಳು)

*ಚಂದ್ರಶೇಖರ ಪಾಟೀಲ (ಚಂಪಾ)*

***ಪುಟ : viii + ೧೭೩ = ೧೮೧*** ***ಬೆಲೆ : ರೂ. ೧೧೦***

**ಆಲೋಕನ** *ಸಿ. ಪಿ. ಕೆ.*

***ಪುಟ : vi + ೨೫೫ = ೨೬೧*** ***ಬೆಲೆ : ರೂ. ೧೬೦***

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಸಪ್ನ ಬುಕ್ ಹೌಸ್,** ನಂ. ೧೧, ೩ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು - ೫೬೦ ೦೦೯

**ಭೂಮಿ ತಿರುಗುವ ಶಬ್ದ** (ಕವಿತೆಗಳು) *ಚನ್ನಪ್ಪ ಅಂಗಡಿ*

***ಪುಟ : ೧೦೮*** ***ಬೆಲೆ : ರೂ. ೬೦***

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

**ಬೊಗಸೆ ತುಂಬಾ ಬಯಲು** (ಕಥಾ ಸಂಕಲನ)

*ಸಂ. : ಎ. ಎಸ್. ಮಕಾನದಾರ*

***ಪುಟ : xviii + ೩೩೮ = ೩೫೬*** ***ಬೆಲೆ : ರೂ. ೨೨೫***

**ನಿರಂತರ ಪಬ್ಲಿಕೇಷನ್ಸ್,** ನಂ. ೪೦೨೨/ಎ/೧ಎ/೧೦ ಎಐಬಿ ಗಾಂಧಿನಗರ, ಲೋಯಲಾ ಕಾನ್ವೆಂಟ್ ಹಿಂಭಾಗ, ೫ನೇ ಅಡ್ಡರಸ್ತೆ, ಬೆಟಗೇರಿ, ಗದಗ - ೫೮೨ ೧೦೨

**ಮಾತೃತ್ವದ ಹಾದಿಯಲ್ಲಿ** *ಡಾ॥ ಎಚ್. ಆರ್. ಮಣಿಕರ್ಣಿಕಾ*

***ಪುಟ : ೨೫೬ + iv = ೨೬೦*** ***ಬೆಲೆ : ರೂ. ೧೮೦***

**ಪ್ರಗತಿ ಪ್ರಕಾಶನ,** ಮಹಡಿ, ನಂ. ೨೪೦೬, ೨೪೦೭/ಕೆ-೧, ೧ನೇ ಕ್ರಾಸ್, ಹೊಸ ಬಂಡಿಕೇರಿ, ಕೆ. ಆರ್. ಮೊಹಲ್ಲಾ, ಮೈಸೂರು - ೫೭೦ ೦೦೪

**ಭರತೇಶ ವೈಭವ** (ಸಂಗ್ರಹ) *ಸಂಪಾದಕ : ಸಿ. ಪಿ. ಕೆ.*

***ಪುಟ : ೮೮*** ***ಬೆಲೆ : ರೂ. ೫೦***

**ಅಶ್ವತ್ಥಾಮನ್** (ಮೂಲ ಹಾಗೂ ಗದ್ಯಾನುವಾದ)

*ಮೂಲ : ಶ್ರೀ, ಗದ್ಯಾನುವಾದ : ಸಿಪಿಕೆ*

***ಪುಟ : ೧೩೬*** ***ಬೆಲೆ : ರೂ. ೫೫***

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಪೊಡವಿ ಪ್ರಕಾಶನ,** ೮೫೯, ೨ನೇ ಮೇನ್, 'ಸಿ' ಅಡ್ಡರಸ್ತೆ, ಶ್ರೀರಾಂಪುರ ೨ನೇ ಹಂತ, ಮೈಸೂರು - ೫೭೦ ೦೨೩

**ಅಕ್ಕರೆಯ ಅಮ್ಮಯ್ಯ** *ಸಂಪಾದಕರು :*

*ಪ್ರೊ॥ ಎಸ್. ಎಂ. ವೃಷಭೇಂದ್ರ ಸ್ವಾಮಿ*

***ಪುಟ : x + ೮೬ = ೯೬*** ***ಬೆಲೆ : ರೂ. ೪೫***

**ಶ್ರೀಮತಿ ಸರೋಜಮ್ಮ ಸ್ಮರಣ ಸಮಿತಿ,** ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು - ೫೬೦ ೦೮೬



# ಹೀಗಿದ್ದ ಒಬ್ಬ ಊರೊಳಗ...

ಬಣ್ಣ ಮಾಸಿದ ಕರೀ ರಟ್ಟಿನ ಟೊಪ್ಪಿಗಿ, ಅದರ ಸುತ್ತಲೂ ಹಿಮಾಲಯ ಪರ್ವತ ಶ್ರೇಣಿಗಳನ್ನ ಬಿಡಿಸಿರೋ ಥರಾ ಕಾಣೋ ಒಣಗಿದ ಬೆವರಿನ ಗುರುತು, ಕಮಟುಗಟ್ಟಿದ ಮಂಜರಪಟ್ಟ ಅಂಗಿಯ ಕಾಲರು, ಇಲಿ ಹಲ್ಲು ಮಸೆಯಲೆಂಬಂತೆ ಕತ್ತರಿಸಿದಂತೆ ಕಾಣೊ ಅಂಗಿಯ ಕೈ ಕಪ್ಪು, ಹೊಗೆ ಸುತ್ತಿದಂತೆ ಕಾಣೊ ದೋತರ, ಮತ್ತೆ ಮತ್ತೆ ಮೊಳೆ ಜಡಿಸಿಕೊಂಡ ಮೆಟ್ಟುಗಳು, ರಣಹದ್ದಿನಂಥಾ ಮೂಗು, ಗುಳಿ ಬಿದ್ದ ಕಣ್ಣು, ಹೊಂದಾಣಿಕೆಯಿಲ್ಲದ ಹಲ್ಲು, ನಿರಿಗೆಗಳನ್ನೇ ಹೊತಗೊಂಡಿರೋ ಮುಖ, ಪೊರೆಬಿಡುವ ಮುದಿ ಗೋದಿ ಬಣ್ಣದ ನಾಗರಹಾವಿನಂತಿರೋ ಈ ಮನುಷ್ಯನಿಗೀಗ ಅಜಮಾಸು ತೊಂಬತ್ತರ ಆಸುಪಾಸು. ಹನುಮಂತ ದೇವರ ಕಟ್ಟೀ ಮ್ಯಾಲ ಕುಂತು, ಮುಷ್ಠಿ ಮಾಡಿ, ಅದರ ನಡುವ ಗಚ್ಚಾಗಿ ಬೀಡಿ ಹಿಡದು, ಕಿರುಬೆರಳು ಮತ್ತು ಹೆಬ್ಬರಳನ್ನು ನಿಮಿರಿಸಿ ಉಷ್..! ಅಂತ ದಮ್ಮು ಎಳದು ಬೆರಳಿಂದ ಚಟ್...ಚಟ್ ಅಂತ ಚಿಟಕೀ ಹಾರಸಿ, ಬೂದಿ ಉದುರಿಸಿ, ಮೂಗಿಂದ ಹೊಗಿ ಬಿಡೋ ಆ ಹಿರಿ ಮನುಷ್ಯಾನೇ ಕತೀ ಹೇಳೋ ತಿಪ್ಪಣ್ಣ. ಅಂವಾ ಬರೀ ನನಗ ಮಾತ್ರ ಕತೀ ತಿಪ್ಪಣ್ಣ ಅಲ್ಲ, ಆ ಮನಿಯೊಳಗಿನ ನಾಕಿಪ್ಪತ್ತು ಮಂದಿ, ಮಕ್ಕಳು, ಮೊಮ್ಮಕ್ಕಳಿಗೂ ಅಂವಾ ಕತಿ ತಿಪ್ಪಣ್ಣನೇ... ನನಗ ತಿಳುವಳಿಕಿ ಬಂದ ದಿಂದಿಂದ ಅವನ್ನ ನಾ ನೋಡಾಕತ್ತೀನಿ ಅಂವಾ ಅವಾಗೂ ಹಂಗೇ ಇದ್ದ, ಈಗಲೂ ಹಂಗೇ ಅದಾನ. ಫರಕ್ ಏನಂದರ ಅವಾಗ ಅಂವಗ ಕಣ್ಣ ನಿಚ್ಚಳಾಗಿ ಕಾಣತಿದ್ವು ಈಗ ಕಾಣೂದಿಲ್ಲ ಅಷ್ಟೇ. ನಾ ಮುಂದ ನಿಂತರೂ ನನ್ನ ಗುರುತು ಅಂವಗ ಸಿಗುವಂಗಿಲ್ಲ. ಅವನ ಮಗಾ ಅಲ್ಲೇ ಇದ್ದರೂ ಅವನ ಎದುರಲ್ಲೇ ಅವನ್ನ ಹಿಗ್ಗಾ ಮುಗ್ಗಾ ಬೈದು, ''ಅದು ಬಾಳ ಖೋಡಿ ಐತಿ, ಅದರ ಮುಂದ ನಿಮ್ಮಪ್ಪ ಹಿಂಗ ಬೈಯಾಕತ್ತಿದ್ದ ಅಂತ ಹೇಳಬ್ಯಾಡ್ರಿ'' ಅಂತ ಅಂದಿದ್ದು ಕೇಳಿ ಅವನ ಮಗ ಮಲಕಾಜಿಗೆ ನಗು ತಡಿಲಾರದೆ, ''ಆಯ್ತು ತಗೋರಪಾ ಹೇಳೂವಂಗಿಲ್ಲ'' ಅನ್ಕೊಂತ ನಡದಿದ್ದ. ಈ ತಿಪ್ಪಣ್ಣನಿಗಿಂತ ಸಣ್ಣವರು ಅವನ ಬೆನ್ನ ಮ್ಯಾಲ ಮತ್ತ ಮೂರು ಮಂದಿ ಇದ್ದರು. ಅವರೆಲ್ಲಾ ಸತ್ತು ಸ್ವರ್ಗ ಸೇರಿದ ಮ್ಯಾಲೂ ಈ ತಿಪ್ಪಣ್ಣ ಇನ್ನೂ ಭೇಷ ಗಟ್‌ಮುಟ್ಟಿದ್ದ. ಆ ಚೋಳಗಿಯವರ ಮನಿತನದೊಳಗ ಇಂವಾ ಅಂದ್ರ ಹಳೀ ಬೇರ ಇದ್ದಂಗ ಆಗಿತ್ತು. ತಿಪ್ಪಣ್ಣನ್ನ ಅವನ ಮಕ್ಕಳು ಸೈತ ಕತೀ ತಿಪ್ಪಣ್ಣ ಅಂತೇ ಕರೀತಿದ್ರು. ಅಷ್ಟೇ ಅಲ್ಲ ಓಣ್ಯಾಗಿನ ಚುಕ್ಕೋಳು ಸೈತ ಅವನ್ನ ಹಂಗೇ ಕರೀತಿದ್ದರು.

ಚೋಳಗಿ ಲಕ್ಷ್ಮಣನ ಮನೆತನದೊಳಗ ಐದು ಮಕ್ಕಳು. ಅದರಾಗ ನಾಕು ಗಂಡು, ಒಂದು ಹೆಣ್ಣು. ಈ ಗಂಡುಮಕ್ಕಳ ಪೈಕಿ ಎಲ್ಲರಿಗಿಂತ ಹಿರೀ ಮನುಷ್ಯಾನೇ ಈ ತಿಪ್ಪಣ್ಣ, ಅರ್ಥಾರ್ಥ ಕತೀ ತಿಪ್ಪಣ್ಣ. ಇವನ ತಮ್ಮಂದೇರು ತೀರಿಹೋಗಿ ಹತ್ತಿಪ್ಪತ್ತು ವರ್ಷ ಆಗಲಿಕ್ಕ ಬಂದರೂ ಈ ತಿಪ್ಪಣ್ಣ ಮಾತ್ರ ಇನ್ನೂ ಭೇಷ ಇದ್ದ. ಅದಕ್ಕ ಕಾರಣ ಅಂವಾ ಯಾವದರ ಬಗ್ಗೆನೂ ತಲೀ ಕೆಡಸಕೋತಿರಲಿಲ್ಲ ಅನ್ನೂದು ಆ ಓಣಿಯೊಳಗಿನ ಮಂದೀ ಮಾತು. ಅದು ಖರೆನೂ ಇತ್ತು. ನನಗ ತಿಳದಂಗ ತಿಪ್ಪಣ್ಣ ಮೈ ಬಗ್ಗಿಸಿದ್ದು ಬಾಳ ಕಡಿಮೆ. ಮುಂಜಮುಂಜಾನೆ ಎದ್ದು ನಾಕು ಬಿಸಿ ರೊಟ್ಟಿ ಕತ್ತರಿಸಿ, ಬಯಲಿಗಿ ಬಿದ್ದ ಅಂದರ ಮುಗೀತು ಅಲ್ಲೀಟು ಕುಂತೆ, ಕತಿ ಹೇಳದೆ... ಇಲ್ಲೀಟು ಕುಂತೆ, ಕತೀ ಹೇಳದೆ ಅನ್ಕೊಂಡು ದೇಶಾವರಿ ಮಾತಾಡಿ ಮತ್ತ ಹೊಟ್ಟಿ ಕವ್...ಕವ್... ಅಂದಾಗಲೇ ಮನಿಕಡಿ ಹಾಯ್ತಿದ್ದ. ತಿಪ್ಪಣ್ಣನ ಹೆಂಡತಿ ಗುರನಿಂಗವ್ವ ಮತ್ತು ಮಕ್ಕಳೇ ಕಟಿಬಿಟಿ ಮಾಡಿ ಇವನ ಹೊಟ್ಟೀ ತುಂಬಬೇಕು. ಹೀಂಗ ಇದ್ದ ಮ್ಯಾಲೂ ತಿಪ್ಪಣ್ಣ ಮತ್ತ ಮತ್ತ ಅವರ ಮ್ಯಾಲೇ ಜಿಗದಾಡೂದು ಇತ್ತು. ಮಾತೆತ್ತಿದರ, ''ಮಕ್ಕಳೇ ಈ ಹೊಲ ಮನಿ ನಂದು. ನನಗೇನು ಪುಗಸಟ್ಟೆ ಕೂಳ ಹಾಕ್ತೀರೆನೂ...?'' ಅಂತಿದ್ದ.

ತಿಪ್ಪಣ್ಣನ ಅಪ್ಪ ಲಕ್ಷ್ಮಣ ಚುಲೋ ಆಸ್ತಿ ಮಾಡಿದ್ದ. ನಾಲ್ಕೂ ಮಕ್ಕಳಿಗಿ ತಲಾಗ ಐದೈದು ಎಕರೆ ಜಮೀನ

**ಡಾ।। ಎಸ್. ಬಿ. ಜೋಗುರ**

ಬಂದಿದ್ವು. ದುಡದರ ಕಡಿಮಿ ಇರಲಿಲ್ಲ. ಆದರ ಈ ತಿಪ್ಪಣ್ಣ ಹೊಲದ ಕಡಿ ಹಾಯೂದು ವರ್ಷದಾಗ ಒಂದೇ ಸಾರಿ ಆಗಿತ್ತು. ಅದೂ ಮಾವಿನ ಗಿಡಕ ಹೂವ ಆಗ್ಯಾವೋ, ಇಲ್ಲೋ ಅಂತ ನೋಡಾಕ. ಹಂಗೇನಾರೇ ಹೂ ಭರ್ಚಕ್ ಅಗ್ಯಾವ ಅಂದ್ರ ಅವನ್ನ ಭಾಗವಾನರ ನಬೀಸಾಬಗ ಗುತ್ತಗಿ ಕೊಟ್ಟು ಆ ರೊಕ್ಕ ಖಾಲೀ ಆಗೂಮಟ ಮನಿಕಡಿ ಹಾಯ್ತಿರಲಿಲ್ಲ. ಅವಾಗ ತಿಪ್ಪಣ್ಣ ಪಕ್ಕಾ ಕತೆಗಾರನೇ.. ಕುಡದು ಬಂದು ಓಣ್ಯಾಗಿನ ಎಲ್ಲಾ ಚುಕ್ಕೋಳಿಗಿ ಸುತ್ತಾ ಕೂಡಸಕೊಂಡು ಅವುಕ್ಕ ಎರಡೆರಡು ಕಾಳು ಹುರಕಡ್ಲಿ ಕೊಟ್ಟು ತನ್ನ ನಶೆ ಇಳಿಯೂಮಟ ಕುತಗೊಂಡು ಕತಿ ಹೇಳತಿದ್ದ. ಇಂಥಾ ತಿಪ್ಪಣ್ಣ ಈಗ ಇದ್ದಕ್ಕಿದ್ದಂಗ ನನಗ ನೆನಪಾಗಲಿಕ್ಕ ಕಾರಣಿತ್ತು...

✶ ✶ ✶

ಅವತ್ತೊಂದಿನ ಕಾನ್ವೆಂಟ್‌ನಲ್ಲಿ ಮೂರನೇ ಕ್ಲಾಸಲ್ಲಿ ಓದೋ ನನ್ನ ಮಗ, ಹಗೂರಕ ನಾ ಕುಳಿತ ಕುರ್ಚಿ ಬಾಜೂ ಬಂದು, ''ಪಪ್ಪಾ.. ಒಂದು ಕತಿ ಹೇಳು'' ಅಂದ. ಆದರೆ... ಟರ್ಮ್ಸ್ ಆಂಡ್ ಕಂಡಿಶನ್ಸ್ ಅಪ್ಲೈ ಅನ್ನೋ ಥರಾ ಕರಾರು ಹಾಕಾಕ ಶುರು ಮಾಡದ. ಅವನ ಕಂಡೀಶನ್ನು ಹೀಗಿದ್ವು.

''ನೋಡು, ನಂಗಂತೂ ಕಾಗಕ್ಕ ಗುಬ್ಬಕ್ಕನ ಕತೀ ಬ್ಯಾಡ...

ದೆವ್ವ ಭೂತದ್ದೂ ಬ್ಯಾಡ...

ಅಜ್ಜಿ-ಮೊಮ್ಮಗನ ಕತೀನೂ ಬ್ಯಾಡ...

ಬಂಗಾರದ ಕೂದಲು.. ಬೆಳ್ಳೀ ಅರಮನಿ ಕತೀನೂ ಬ್ಯಾಡ...

ಮಂತ್ರದ ಬಡಿಗಿ, ದನಾ ಕಾಯೋ ಹುಡುಗನೂ ಬ್ಯಾಡ...

ನರಿ ಮತ್ತ ದ್ರಾಕ್ಷಿದೂ ಬ್ಯಾಡ.''

ಇವೆಲ್ಲವುಗಳ ಹಂಗು ಹರಿದು, ಅಂವಾ ದಿನ್ನಾ ಪೋಗೋ ಚ್ಯಾನೆಲ್‌ದಲ್ಲಿ ನೋಡೋ 'ಮಿ ಬೀನ್ ಕಥಿ ಬೇಕು' ಅನ್ನೋ ಕಂಡೀಶನ್ನು. ಹಿಂಗ ಕರಾರ್ ಮಾಡಿ, ತಕರಾರು ತಗದು ಕಥಿ ಕೇಳೋ ಜಮಾನಾದಾಗಿರೋ ನನ್ನ ಮಗಾ, ನನ್ನನ್ನ ಇದ್ದಕ್ಕಿದ್ದಂಗ ತನ್ನ ವಯಸ್ಸಿಗಿ ಕರಕೊಂಡುಹೋಗಿದ್ದ...

✶ ✶ ✶

ನಾ ಅವಾಗಿನ್ನೂ ನಾಕನೆತ್ತೆ ಇದ್ದಿರಬೇಕು. ಎಡವಿ ಬಿದ್ರ ಮನಿ ಬಾಜೂನೇ ಸಾಲಿ. ಸಾಲೀಗಿ ಹೋಗೂದಂದ್ರ ನನಗ ಬಾಳ ಬಿರಿ ಬರತಿತ್ತು, ಸಾಲಿ ಅಂದ ಕೂಡಲೇ ಅಂಗಾಲಿಗೆಲ್ಲಾ ಮುಳ್ಳ ನಟ್ಟಂಗ ಆಗತಿತ್ತು. ಗಣಿತ ಕಲಸೋ ಕುಲ್ಕರ್ಣಿ ಮಾಸ್ತರ ನೋಡಿದರ ಹಸಿಹಾಗಲಕಾಯಿ ತಿಂದಂಗ ಆಗ್ತಿತ್ತು. ಅಪ್ಪ ಪೆಪ್ಪರಮಿಂಟ್ ತಿನ್ನಲಿಕ್ಕ ಹತ್ತು ಪೈಸೆ ಕೊಟ್ಟು, ಪುಸಲಾಯಿಸಿ ಕಳಸತಿದ್ದ. ಅಟ್ಟಾಗಿನೂ ನಾ ಮತ್ತ ರಿಪಿ ರಿಪಿ ಮಾಡದರ, ನನ್ನ ರಟ್ಟಿ ಹಿಡಕೊಂಡು, ದರದರ ಎಳಕೊಂಡು ಹೋಗಿ ಬಿಟ್ಟುಬರತಿದ್ದ. ಅಟ್ಟೇ ಅಲ್ಲ, ಹೊಳ್ಳಿ ಬರೂಮುಂದ ಮಾಸ್ತರಗ ಒಂದು ಮಾತ ಹೇಳಿ ಬರತಿದ್ದ. ''ಸರ್, ಅಂವಾ ಏನಾರೆ ಕಂಯಕ್... ಅಂದ್ರ ಝಾಡಿಸಿ ಮುಕುಳಿ ಮ್ಯಾಲ ಒದೀರಿ, ಜರ್ ಕರತ್ ಕೇಳಲಿಲ್ಲ ಅಂದ್ರ ನನಗ ಹೇಳ್ರಿ ಕಾಲೇ ಮುರಿತೀನಿ'' ಅಂತ ಖಡಕ್ ಆಗಿ ತಾಕೀತ್ ಮಾಡಿ ಬರತಿದ್ದ. ನನಗ ಕಲಸೋ ಸರ್‌ಗಳು ನನಗ ಇಕಾಡಿದಿಕಾಡಿ ಮುಟ್ಟಲಿಕ್ಕೇ ಹೆದರತಿದ್ದರು. ಅದ್ಯಾಕ ಹಂಗ ಅನ್ನೂದು ನನಗೂ ಗೊತ್ತಿರಲಿಲ್ಲ. ''ಯವ್ವಾ ಅದ್ಯಾಕ ಹಂಗ ? ನೀ ಹೇಳದರೆ ಅಟ್ಟೇ ನಾ ಸಾಲೀಗಿ ಹೋಗಂವ'' ಅಂತ ಅವ್ವಗ ಕಿರಿಕಿರಿ ಮಾಡದ ಮ್ಯಾಲ ಅಕಿ ನಕ್ಕೋಂತ, ''ನೀ ಒಂದನೆತ್ತೆ ಇದ್ದಾಗ ಒಂದಿನ ನಾಯ್ಕ್ ಮಾಸ್ತರು ಬೆನ್ನೀಗಿ ರಿಮಕ್..! ಅಂತ ಗುದ್ದದರು. ನಿನ್ನ ಚೆಡ್ಡೆಲ್ಲ ಹೊಲಸಾಗಿತ್ತು. ನಿನಗ ನೆನಪಿಲ್ಲ, ನಾ ಹೋಗಿ ಬಳದು ಬಂದೀನಿ'' ಅಂದದ್ದೇ ನನ್ನ ತಲಿಯೊಳಗ ಪಕ್ ಅಂತ ಲೈಟ್ ಹತ್ತಿದಂಗ ಆಯ್ತು. ಅದ್ಕೇ ಸರ್, ಈಗ ಹೊಡದರ ಮತ್ತೆಲ್ಲಿ ಇಂವಾ ಚಡ್ಯಾಗೇ ...ಅನ್ನೋ ಕಾರಣಕ್ಕ ನನಗ ಹೊಡಿತಿರಲಿಕ್ಕಿಲ್ಲ ಅಂತ ತಿಳಕೊಂಡೆ. ಅವತ್ತೊಂದಿನ ನನ್ನದೇ ಜೋಡಿ ಓದೋ ಬಡಿಗೇರ ಈರಣ್ಣನ ಸೀಸ್ ಪೆನ್ಸಿಲ್ ಕದ್ದರೂ ನಮ್ಮ ಸರ್ ಗುದ್ದದೇನೇ. ''ಇನ್ನೊಂದ್ಸಾರಿ ಹಿಂಗ ಮಾಡದರ ನಿಮ್ಮ ಅಪ್ಪನ ಮುಂದೆ ಹೇಳತೀನಿ ನೋಡು'' ಅಂದಾಗಂತೂ ನನಗ ಹೊಡೀದೇ ಇರಲಿಕ್ಕ ಖರೆ ಖರೆ ಕಾರಣ ಸಿಕ್ಕಿತ್ತು.

✶ ✶ ✶

ನನಗೂ ಮೊದಲಿಂದಲೂ ಕತಿ ಕೇಳೂದು ಅಂದ್ರ ಬಾಳ ಮಜಾ ಅನಸತಿತ್ತು. 'ಹುಂ' ಅನ್ನಲಿಕ್ಕ ನಾ ಎಂದೂ ಹೈರಾಣಾದಂವಲ್ಲ. ಸಾಲಿ ಸೂಟಿ ಬಿಟ್ಟಿದ್ದೇ ಹೊಲದ ಕಡಿ ಹೋಗೂದು ಮಾಮೂಲು. ನಮ್ಮ ಹೊಲದಾಗ ಈ ತಿಪ್ಪಣ್ಣ ಅನ್ನವನು ಕೆಲಸಕ್ಕ ಇದ್ದ. ಅವನ ಬುತ್ತಿ ತಗೊಂಡು ನಾನು ಮತ್ತ ನಮ್ಮ ದೊಡ್ಡಪ್ಪನ ಮಗಾ ಹೊಲದ ಕಡಿ ಹೋಗತಿದ್ದಿವಿ. ಈ ತಿಪ್ಪಣ್ಣ ಅಂದ್ರ ನಮ್ಮ ಪಾಲಿಗಿ ನಡದಾಡೊ ಪಂಚತಂತ್ರದ ಕತಿ ಪುಸ್ತಕ ಇದ್ದಂಗ. ಅಂವಾ ಊಟಾ ಮಾಡೂ ಮಟಾ ಅಷ್ಟೇ ನಾವು ಸುಮ್ಮನಿರತಿದ್ವಿ. ಅವನ ಊಟ ಮುಗದಿದ್ದೇ, ''ತಿಪ್ಪಣ್ಣ, ಒಂದು ಕತಿ ಹೇಳೊ'' ಅಂತ ಬೆನ್ನ ಬೀಳತಿದ್ವಿ. ''ಮಾಲಕರ, ಈಗ ಬ್ಯಾಡ್ರಿ ದೊಡ್ಡ ಸಾವುಕಾರು ಬೈತಾರ, ಕೆಲಸಾ ಬಿಟ್ಟು ಕತೀ ಹೇಳಾಕತ್ತೀಯೇನೋ ಬೋಳಿಮಗನ ಅಂತಾ ಅವತ್ತು ಬೈದಿದ್ದು ನಿಮಗ ನೆನಪೈತೋ... ಇಲ್ಲೋ ? ಬೇಕಾದ್ರ ಆಮ್ಯಾಲ ಹೇಳತೀನಿ. ಈಗ ಹ್ಯಾಂಗೂ ಬಾರಾ, ಸಾಡೇ ಬಾರಾ ಆಗಾಕ ಬಂದೈತಿ. ಸಾವುಕಾರ ಈಗ ಗೆಳೆ ಬಿಟ್ಟು ಊಟಾ ಮಾಡಿ ಮಲಗತಾರ, ಅವಾಗ ಗ್ಯಾರಂಟೀ ಹೇಳ್ತೀನಿ'' ಅಂತಿದ್ದ. ಅಂವಾ ಓದ್ದಂವ ಅಲ್ಲ, ಬರದಂವ ಅಲ್ಲ ಆದ್ರ ಬಾಳ ಚುಲೋ ಚುಲೋ ಕತಿ ಅವನ ನಾಲಗಿ ತುದಿ ಮ್ಯಾಲ ಒಂದು ಸವನ ಹರದಾಡತಿದ್ವು. ಹಂಗಾಗೇ ಅಂವಗ 'ಕತೀ ತಿಪ್ಪಣ್ಣ' ಅಂತ ಹೆಸರ ಬಿದ್ದಿತ್ತು. ಅಪ್ಪ ಸಿಟ್ಟೀಲೇ ಅವನ್ನ ತಿಪಲದ ತಿಪ್ಯಾ ಅಂತ ಕರೀತಿದ್ದ.

ಮಲತಾಯಿ ಮಲಮಕ್ಕಳಿಗೆ ತ್ರಾಸು ಕೊಡೋ ಕತಿ...

ಜಾದೂ ಕೋಲು ತೊಗೊಂಡು ಎಮ್ಮೀ ಕೋಡಿಗಿ ಮುಟ್ಟಿದ್ದೇ ಬೇಕಂದಿದ್ದು ಪಟ್ಟಂತ ಸಿಗೋ ಕತಿ...

ಮೂರು ಕೋಡಿನ ಆಕಳ ಕತಿ...

ಹಾವು ಮತ್ತು ಮುಂಗಸಿ ಕತಿ...

ದೇವರು ಮತ್ತು ಕುಡ್ಡ ಭಕ್ತನ ಕತಿ...

ಬಂಗಾರದ ಕೊಡ್ಲಿ ಕತಿ...

...ಹಿಂಗ ಒಂದೋ... ಎರಡೊ... ನೂರಾರು ಕತಿ ಅವನ ನೆನಪಿನ ಗಂಟಿನೊಳಗ ಕಾಲ ಮುರಕೊಂಡು ಅಂಗಾತ ಬಿದ್ದಿದ್ವು. ನನ್ನ ವಯಸ್ಸಿನ ಚುಕ್ಕೋಳಿಗೆಲ್ಲಾ ತಿಪ್ಪಣ್ಣ ಅಂದ್ರ ಬಾಳ ಜೀವ. ಅಂವಾ ಒಂದೇ ಒಂದು ದಿನ ಕತಿ ಹೇಳಾಕ ಬೇಜಾರ ಮಾಡಕೊಂಡಂವ ಅಲ್ಲ. ಆದರ ಅಂವಗ ತೂಕಡಕಿಯೊಳಗೂ ಭೇಷನ್ಯಾಗೆ 'ಹುಂ' ಅನ್ನವರು ಬೇಕು, ಇಲ್ಲಾಂದ್ರ ಕತಿ ಅರ್ಧಕ್ಕೇ ತುಂಡು ಮಾಡಿಬಿಡತಿದ್ದ. ಒಂದು ಕತಿ ಮುಗದ ಮ್ಯಾಲ ಪ್ರತಿ ಸಾರೀನೂ ''ನಾ ಹಾಲು ಕುಡದು ಹಾಸಗ್ಯಾಗ ಮಲಗದ್ಯಾ, ನೀವು ತುಪ್ಪ ಕುಡದು ತಿಪ್ಪ್ಯಾಗ ಮಲಗಿದರಿ'' ಅನ್ನಂವ. ನಮಗಂತೂ ಒಂಚೂರೂ ಬ್ಯಾಸರ ಅನಸತಿರಲಿಲ್ಲ. ಅವನ ಥರಾ ಕತಿ ಹೇಳವರಿದ್ದರ ತಿಪ್ಪ್ಯಾಗ ಮಲಗಲಿಕ್ಕೂ ನಾವು ಸಜ್ಜಾಗಿದ್ವಿ. ಹಂಗಾಗೇ ಹಂತಿ ಮಾಡೋ ಮುಂದ ನಾವು ತಪ್ಪಿನೂ ಬೆಚ್ಚಗ ಗುಡಸಲದಾಗ ಮಲಗತಿರಲಿಲ್ಲ. ಜೋಳದ ಕಣಕಿಯೊಳಗ, ತಿಪ್ಪಣ್ಣನ ಜೋಡಿನೇ ಮಲಗತಿದ್ದವಿ. ತಿಪ್ಪಣ್ಣನ್ನ ಅಪ್ಪ ಸುಮ್ಮ ಹಿಂಗೇ ಹೊಲದ ಕಡಿ ಇರಲಿ. ಸೈರೇ ದನ ಬರ್ಕಾವ ನೋಡಕೊಂಡು ಕೂಡಲಿ ಅಂತ ಕೆಲಸಕ್ಕ ಇಟಗೊಂಡಿದ್ದ. ತಿಪ್ಪಣ್ಣ ಬರೀ ಕತಿ ಹೇಳಂವ, ಮೈ ಬಗ್ಗಿಸಿ ಕೆಲಸಾ ಮಾಡಂವಲ್ಲ. ಅಪ್ಪ-ಅವ್ವ ಇಬ್ಬರೂ ಅಂವಾ ಅಂದ್ರ ಬಾಳ ಚುಲೋ ನೋಡತಿದ್ದರು. ಒಂದೇ ದಿನ ಅಂವಗ ತಂಗಳು ರೊಟ್ಟಿ ಕಟ್ಟತಿರಲಿಲ್ಲ. ಅಂವಾ ಆಳು ಮನುಷ್ಯಾ ಅಂತ ಹೇಳಿ ಅಂವಗೊಂದು, ನಮಗೊಂದು ಮಾಡತಿರಲಿಲ್ಲ. ಹಿಂಗಾಗಿ ತಿಪ್ಪಣ್ಣ ನಮ್ಮ ಮನಿ ಮನಷ್ಯಾನೇ ಆಗಿದ್ದ. ನಾವು ಕತಿ ಹೇಳು ಅಂದಾಗೆಲ್ಲಾ ಅಂವಾ ಹೇಳಂವಲ್ಲ. ಅಂವಗ ಮೂಡ್ ಬರಬೇಕು. ಇಲ್ಲಾಂದ್ರ ನಾವು ಹೊರಳಾಡಿ, ಕಾಲು ಹೊಸತು ಅತ್ತರೂ ಕತಿ ಹೇಳಂವಲ್ಲ. ಅಂವಾ ಸಿಂದಗಿ ತಾಲೂಕಿನ ಚಾಂದಕವಟೆಯವನು. ಹಬ್ಬ ಹರಿದಿನ, ಜಾತ್ರಿಗಿ ಸೈತಾ ಊರಿಗೆ ಹೋಗೋ ಮನುಷ್ಯಾ ಅಲ್ಲ. ''ನನ್ನ ಹೆಂಡತಿ ಬಾಳ ಸುಮಾರ ಅದಾಳ್ರಿ. ಎರಡು ರೊಟ್ಟೀ ಹಾಕಲಾಕ ಒಂದು ಸವನ ಹೊಯ್ಕೊಂತಾಳ'' ಅನ್ನಂವ. ಈಗ ಅಂವಾ ಫುಲ್ ಹಣ್ಣಾಗ್ಯಾನ. ಮೊದಲ ಹೊಲದಿಂದ ಮನಿಗಿ ಬರೋ ಮುಂದ ನನಗ ತನ್ನ ಹೆಗಲ ಮ್ಯಾಲ ಎರಡೂ ಕಡಿ ಕಾಲ ಇಳಿ ಬಿಟಗೊಂಡು, ಕೂಡಿಸಿಕೊಂಡು ಓಡಕೊಂತ ಬರವನು. ಮನಿ ಸನ್ಯಾಕ ಬಂದಿಂದ ಅಪ್ಪ-ಅವ್ವ ನೋಡದರ ಬೈತಾರ ಅಂತ ಹೇಳಿ ಅಲ್ಲೇ ಬಾವಿ ಬಾಜೂ ಇಳಿಸಿ, ''ಸಾವುಕಾರ ಮುಂದ ಹೇಳಬ್ಯಾಡ್ರಿ'' ಅನ್ನಂವ. ಇಂಥಾ ಗಟ್ಟೂಳ ತಿಪ್ಪಣ್ಣ ಅದ್ಯಾಂಗ ಮೈಗಳ್ಳ ಆದ ಅನ್ನೂದೇ ತಿಳೀದಂಗ ಆಗಿತ್ತು. ಅಂವಾ ಸಾಲೀಕಟ್ಟೀ ಸೈತಾ ಹತ್ತದಂವ ಅಲ್ಲ, ದೊಡ್ಡಾಟದಾಗ ನಿಶುಂಬನ ಪಾರ್ಟ್ ಮಾಡಿ, ವಾರದೊಳಗ ಎಲ್ಲಾ ಮಾತ ಬಾಯ್ಪಾಠ ಮಾಡಿ ನಮ್ಮ ಕೈಯಾಗ ಪುಸ್ತಕ ಕೊಟ್ಟು. ''ಅಲೆಲೆ ಶಹಬ್ಬ... ಇಂದ್ರಸಖಿಯರಾದ ರಂಬೆ ಮೇನಕೆಯರೇ ಪರಿಪರಿಯಿಂದ ಕೇಳಿದರೂ ನನಗೆಂದೂ ಕನಿಕರ ಬರದು'' ಎಂದು ಡೈಲಾಗ್ ಹೇಳಾಕ ಸುರು ಮಾಡಿದರ ಅಟ್ಟೂ ಮುಗಿಯೂ ಮಟ ಬಿಡಂವಲ್ಲ. ಬಯಲಾಟ ದಿವಸ ಅಪ್ಪ ಅವನಿಗೆ ಮೈತುಂಬಾ ಬಟ್ಟೆ ಆಯೇರಿ ಮಾಡತಿದ್ದ. ''ಕಾಕಾ, ನೀವೇನ್ರಿ ದರಾಸಾರಿ ನನಗ ಬಾಳ ವಜ್ಜಿ ಮಾಡ್ತೀರಿ, ವರ್ಷಾ ದೀಪಾವಳಿಗೆ ಎರಡು ಜೋಡು ಇಸಗೊಟುದು ಅಲ್ದೇ, ಮತ್ಯಾಕ ಸುಮ್ಮನೇ ಈ ಒಜ್ಜಿ..'' ಅಂತ ಬಾಳ ಬಿಡೆ ಮಾಡಕೊಳ್ಳಂವ. ''ಏ ತಿಪ್ಪಣ್ಣ, ಅದಕ್ಯಾಕ ಅಷ್ಟು ಬಿಡೆ ಮಾಡಕೊಂತಿಯೋ... ಬ್ಯಾರೇ ಯಾರರೇ ಕೊಟ್ಟಾರನೂ...? ಕೊಟ್ಟವರು ನಿಮ್ಮ ಕಾಕಾನೇ

ಹೌದಿಲ್ಲೋ.' ಅಂತ ಅವ್ವ ಅಂದಾಗ ನಕ್ಕೊಂತ ಸುಮ್ಮ ಆಗತಿದ್ದ.

✶ ✶ ✶

ತಿಪ್ಪಣ್ಣ ಲಗ್ನ ಆಗಿಂದ ಬಿಟ್ಟು ಹೋಗತಾನ ಅಂದಾಗ ನನಗ ಆದಷ್ಟು ಬ್ಯಾಸರ ಬ್ಯಾರೇ ಯಾರಿಗೂ ಆಗಿರಲಿಲ್ಲ. ಅಂವಾ ಹೋದ ಮ್ಯಾಲೂ ಆಳುಗಳು ಕೆಲಸಕ್ಕ ಬಂದೇ ಬರ್ತಾರ ಆದರ ಅವನಂಗ ಕತಿ ಹೇಳವರು ಬರಬೇಕಲ್ಲ...? ಹಂಗಂತ ಅಪ್ಪನ ಮುಂದೂ ಹೇಳುವಂಗಿಲ್ಲ. ಆದರ ಅವ್ವಗ ಅದು ಗೊತ್ತಿತ್ತು. ಹಿಂಗಾಗಿ ತಿಪ್ಪಣ್ಣ ಹೋಗೋ ಮುಂದ, ''ನೀ ಅವಾಗಾವಾಗ ಬಂದು ನಮ್ಮ ರಾಜುಗೆ ಕತಿ ಹೇಳಬೇಕು'' ಅಂದಾಗ, ''ಏ ಅದಕ್ಕೇನ್ರಿ ಅವ್ವಾರ, ಇಲ್ಲೇ ಎಡವಿ ಬಿದ್ದರ ಚಾಂದಕವಟೆ, ಸಂತಿಗಿ ಬಂದಾಗೊಮ್ಮ ನಮ್ಮ ಸಾವುಕಾರಗ ಮನಿ ಮಟ ಬಂದು ಕತಿ ಹೇಳೇ ಹೋಗತೀನ್ರಿ'' ಅಂದಾಗ ನಾ ಮುಖಾ ಸಣ್ಣ ಮಾಡಕೊಂಡು ನಿಂತಿದ್ದು ನೋಡಿ, ನನ್ನ ಸನ್ನಾಕ ಬಂದು ಬಾಗಿ, ''ಸುಮ್ನೇ ಅಲ್ಲರೀ ಸಾವುಕಾರ, ನೀವು ನೋಡುವಂತ್ರಿ, ಐತಾರ ದಿನ ಬಂದು ನಿಮಗ ಕತಿ ಹೇಳಿ ಹೋಗಲಿಲ್ಲ ಅಂದ್ರ ಆಮ್ಯಾಲ ಮಾತಾಡ್ರಿ''ಅಂತ ಹೇಳಿ ಎರಡು ವರ್ಷ ಕಳಿಲಿಕ್ಕ ಬಂದರೂ ಪತ್ತೆನೇ ಇರಲಿಲ್ಲ. ಅಂವಾ ಹೋದ ವಾರದೊಳಗ ಅಪ್ಪ ಸಿದ್ದಣ್ಣ ಅನ್ನೋ ಬ್ಯಾರೇ ಒಬ್ಬನನ್ನು ಕೆಲಸಕ್ಕ ಅಂತ ಕರಕೊಂಡು ಬಂದ. ಅಂವಾ ಬೋರಗಿ ಊರವನು. ಅಪ್ಪ ಎಮ್ಮಿ ಖರೀದಿಗಿ ಅಂತ ಹೋದಾಗ ಕುರುಬರ ಲಕ್ಕಪ್ಪನ ಮುಂದ ''ನಮಗೊಂದು ಚುಲೋ ಆಳು ಇದ್ದರ ನೋಡು'' ಅನ್ನೋದರೊಳಗ ಲಕ್ಕಪ್ಪ ಅವನ್ನ ಕರಕೊಂಡು ಬಂದು, ಅಪ್ಪನ ಜೊತೆ ಮಾಡಿ ಎಮ್ಮೀ ಜೋಡಿನೇ ಕಳಸಿಕೊಟ್ಟಿದ್ದ. ಕೆಲಸದ ವಿಷಯದಾಗ ಸಿದ್ದಪ್ಪ ದೆವ್ವ ಇದ್ದಂಗ ಅಂತ ಅಪ್ಪ ಅವ್ವನ ಮುಂದ ಹೇಳೂದನ್ನ ನಾನು ಕೇಳಿದ್ದಿತ್ತು. ''ಕತಿ ವಿಷ್ಯದಾಗ ಹ್ಯಾಗಂತ...?'' ಅಂಥ ಕೇಳಬೇಕು ಅಂದಕೊಂಡಿದ್ದೆ. ಅಪ್ಪನ ಭಯಕ್ಕ ಸುಮ್ಮ ಆಗಿದ್ದೆ. ಅಂವಾ ಬಂದು ಇನ್ನೂ ಒಂದು ವಾರನೂ ಕಳದಿರಲಿಲ್ಲ, ಹಗೂರಕ ಬುತ್ತಿ ಕೊಡೊ ನೆಪದಾಗ ಅವನ ದೋಸ್ತಿ ಮಾಡಕೊಂಡೆ. ನೋಡೆರೆ ನೋಡಮ್ಮ ಅಂವಾ ಹ್ಯಾಂಗ ಕತಿ ಹೇಳ್ತಾನ ಅಂತ ಕೇಳಬೇಕು ಅಂದ್ಕೊಂಡು,

''ಸಿದ್ದಣ್ಣ ಒಂದು ಕತಿ ಹೇಳೋ''

''ಯಾವ ಕತೀರಿ...?'' ಅಂದ.

''ಯಾವದರೇ, ನಿನಗ ಯಾವದು ಬರತೈತಿ ಅದು.''

''ನನಗ ಬರಲ್ಲರೀ ಸಾವುಕಾರ.''

''ಎಷ್ಟು ಬರತೈತಿ ಅಷ್ಟು.''

''ಎತಗೊಳಿಗಿ ನೀರ ಕುಡಿಸಿ ಕಟ್ಟಿ ಬರ್ತೀನಿ ನಿಲ್ಲರಿ.''

''ನಾ ಇಲ್ಲೇ ಗುಂಡ ಮಾವಿನ ಗಿಡದ ಕೆಳಗ ಕುತಗೊಳ್ಳಾ...?''

''ಈ ಸದ್ಯೇ ಬಂದ್ಯಾ'' ಎಂದವನೇ ಬಾವಿ ಕಡಿ ನಡದ. ಅಪ್ಪ ಗುಡಸಲದಾಗ ಮಲಗಿದ್ದ. ಮಟಮಟ ಮಧ್ಯಾಹ್ನ. ನಾನು ನಮ್ಮ ದೊಡ್ಡಪ್ಪನ ಮಗ ಇಬ್ಬರೂ ಸಿದ್ದಪ್ಪಣ್ಣ ಬಂದು ಕತಿ ಹೇಳ್ತಾನ ಅಂತ ಕಾಯ್ಕೊಂಡು ಕುಂತಿದ್ವಿ. ಅಷ್ಟರೊಳಗ ಖಾಲಿ ಬಕೀಟ ಕೈಯಾಗ ಹಿಡಕೊಂಡು ಗಿಡದ ಕಡಿ ಬಂದ. ಟವಲ್ಲಿಂದ ಮುಖಾ ಒರಸಗೊಂತ,

''ಅನಗಾಡ ಬಿಸಲ ಬಿಡ್ರಿ ಸಾಹುಕಾರ... ಈ ಬಿಸಲ ಹೊತ್ತಿನ್ಯಾಗ ಅದೆಂಥಾ ಕತೀರಿ, ಹೋಗಿ ಕಾಕಾ ಅವರ ಜೋಡಿ ಗುಡಸಲದಾಗ ಮಲಗಬಾರದೇನ್ರಿ..?''

''ಅದೆಲ್ಲಾ ಬ್ಯಾಡ, ಈಗ ಮೊದಲ ನಮಗೊಂದು ಕತಿ ಹೇಳು''

''ಖರೆ ಹೇಳಬೇಕಂದ್ರ ಇನ್ನೂ ನಂದು ಊಟ ಆಗಿಲ್ಲರೀ...''

''ಮಾಡು ಯಾರು ಬ್ಯಾಡ ಅಂದ್ರು ?''

''ಹಂಗಂದರ ನೀವಿಬ್ಬರೂ ಇಲ್ಲೇ ತುಸು ಹೊತ್ತು ಏನರೇ ಆಡ್ರಿ... ಪಟ್ಟಂತ ಒಂದು ರೊಟ್ಟಿ ತಿಂತೀನಿ'' ಅಂದ. ಕಿಸೆಯೊಳಗ ಕೈ ಹಾಕಿದೆ. ಮನಿಯಿಂದ ತಗೊಂಡು ಬಂದಿದ್ದ ಗೋಟಿ ಆಡಾಕ ಶುರು ಮಾಡಿದ್ವಿ. ಒಂದು ಆಟಾ ಆಡೋದರೊಳಗ ಇಬ್ಬರಿಗೂ ಬ್ಯಾಸರ ಬಂದು, ಗೋಲಿಗುಂಡ ಕುರಿ ಹಿಕ್ಕಿ ಕಂಡಂಗ ಆಗಾಕತ್ತು. ಅಷ್ಟರೊಳಗ ಸಿದ್ದಪ್ಪಣ್ಣ, ''ಸಾಹುಕಾರ ಬರ್ರಿ'' ಅಂತ ಕರದ. ಚಂಗ್ ಅಂತ ಓಡಿ ಬಂದು ಅವನ ಬಾಜೂ ಕುಂತವಿ. ತನ್ನ ತಲಿಗಿ ಸುತಗೊಂಡಿದ್ದ ಟವಲ್ ತಗದು, ಝಾಡಿಸಿ ''ಇದರ ಮ್ಯಾಲ ಕುಂದರ್ರಿ'' ಅಂದ. ನಾವು ಅಂವಾ ಹೇಳದಂಗೇ ಮಾಡದವಿ.

''ಈಗ ಕತಿ ಸುರು ಮಾಡಲೇನ್ರಿ...?...'' ಅಂದ.

''ಲಗೂ, ಲಗು ಹೇಳು''

''ನನಗೇನು ಅಂಥಾ ಕತಿ ಬರಲ್ಲರೀ'' ಅನ್ಕೋಂತ ಶುರು ಮಾಡದ. ''ಅವತ್ತು ಬಾದಮಿ ಅಮಾಶಿ ಇತ್ತರಿ. ಹಿಂಗೇ ಮಟಮಟ ಮಧ್ಯಾಹ್ನದಾಗ ನಮ್ಮೂರ ಹೊರಗಿರೋ ಹುಂಚೀ ಗಿಡದ ಕಡಿಗೆ ಹೊಂಟಿದ್ಯಾರಿ. ದಿನ್ನಾ ಅಲ್ಲಿ ಒಬ್ಬರಿಲ್ಲಾ ಒಬ್ಬರು ಇರವರು. ಆದರ ಅವತ್ತು ನಿಮಗ ಹೇಳಬೇಕಂದರ ಒಂದೇ ಒಂದು ನರಪಿಳ್ಳೆನೂ ಕಣ್ಣಿಗೆ ಬೀಳಲಿಲ್ಲರಿ. ಗಿಡದ ಸನ್ಯಾಕ ಬಂದಿದ್ದೇ ಅದು ಗವ್... ಅಂದಂಗ ಆಯ್ತು. ಮ್ಯಾಲ ಮುಖಾ ಎತ್ತಿ ನೋಡದರ ತೆಕ್ಕಿಗಟ್ಟಲೆ ತೊಗಲು ಬಾವಲಿ, ಹಕ್ಕಿ ಮುಖಾ ಕೆಳಗ ಮಾಡಿ ಜೋತಾಡತಿದ್ವು. ಅಮವಾಶಿ ಕತ್ತಲ ಪೂರಾ ಗಿಡದ ಹೊಟ್ಯಾಗೇ ದಟ್ಟಾಗಿ ಹೊಕ್ಕಂಗ ಕಾಣತಿತ್ತು. ಮೈಲಗಟ್ಟಲೆ ದೂರ ಕಣ್ಣ ಹರಸಿದರೂ ಒಂದೇ ಒಂದು ಕಾಗಿ ಕಾಣ್ಲೆಲ್ಲ. ನನಗೂ ತುಸು ಅಂಜಿಕಿ ಬಂದಂಗ ಆಯ್ತು. ಗಿಡದ ಕೆಳಗ ಕೂಡಲಿಕ್ಕೂ ಮನಸು ಬರಲಿಲ್ಲರಿ. ತಿರುಗಿ ಮನಿಗಿ ನಡದರ ಆಯ್ತು ಅಂತ ಹೊಂಟೆ. ಎದುರಗಿ ಒಂದು ಕುರಿ ಕಂಡಂಗ ಆಯ್ತು. ನೋಡಲಿಕ್ಕ ಬಾಳ ಮಜಬೂತಾಗಿತ್ತು. ಆದರ ಹಿಂದ ಮುಂದ, ಆಜೂ ಬಾಜೂ ಯಾರೂ ಇರಲಿಲ್ಲ. ಅದು ತಿರುಗಾಡೊ ಜಾಗಾ ನೋಡದರ ಸುಡಗಾಡು. ನನ್ನ ಸನ್ಯಾಕ ಬಂದದ್ದೇ ಅದು ಮಂಗಮಾಯ...! ನನಗಂತೂ ಬಾಳ ಅಂಜಿಕಿ ಬಂದಂಗ ಆಯ್ತು. ಅಕಾಡಿ ಇಕಾಡಿ ನಾಕೂ ನಿಟ್ಟ ನೋಡದ ಮ್ಯಾಲೂ ಅದು ಕಾಣಲಿಲ್ಲ...'' ಅಂತ ಕಣ್ಣಗಲ ಮಾಡಿ, ಗಾಬರಿಯಾಗಿ ಹೇಳತಿದ್ದ.

ನಾವಿಬ್ಬರೂ ಬಿಟ್ಟ ಕಣ್ಣ... ಬಾಯಿ ಬಿಟಗೊಂಡೇ ಕೇಳತಿದ್ದಿವಿ. ನಮ್ಮ ದೊಡ್ಡಪ್ಪನ ಮಗ, ''ಮುಂದ ಏನಾಯಿತು.?'' ಅಂದ. ''ಹೇಳತೀನಿ ಆದರ ಹೆದರಬ್ಯಾಡ್ರಿ'' ಅಂದ. ನನಗ ಅದಾಗಲೇ ಒಳಗ ಟುಕುಟುಕು ಶುರು ಆಗಿತ್ತು. ಉಗುಳು ನುಂಕೋಂತೇ, ''ಹೆದರೂದಿಲ್ಲ ಹೇಳು'' ಅಂದೆ.

''ಆ ಕುರಿ ಎಲ್ಲಿ ಹೋಯ್ತು ಅಂತ ಸುಡಗಾಡ ತುಂಬಾ ಹುಡುಕದ್ಯಾರಿ ಕಾಣಲಿಲ್ಲ. ಹಂಗೇ ತುಸು ಮುಂದು ಹೋದ್ಯಾ.. ಅಲ್ಲಿ ಒಂದು ಗೋರಿ ಮ್ಯಾಲ ಒಬ್ಬಳು ಅಗಲ ಹೆಂಗಸು ಚಪಗಾಲು ಹಾಕಿ ಕುತಗೊಂಡಿದ್ದಳು. ಇಂಥಾ ಮಟಮಟ ಮಧ್ಯಾಹ್ನದಾಗ ಅದ್ಯಾಕ ಇಲ್ಲಿ ಕುಂತಾಳ ಅಂತ ಸನ್ಯಾಕ ಹೋಗಿ ನೋಡುದರೊಳಗ ಆಕಿನೂ ಮಂಗಮಾಯ...!'' ಅಂತ ಹೇಳಿ ನಮ್ಮಿಬ್ಬರ ಮುಖಾ ನೋಡದ. ಒಳಗೊಳಗ ಒಂಥರಾ ನಡುಕ ಹುಟ್ಟೈತಿ ಅನ್ನೂದನ್ನು ಸಿದ್ದಣ್ಣ ಲೆಕ್ಕಾ ಹಾಕಿ, ''ಮುಂದಿಂದು ಹೇಳಳೋ ಬ್ಯಾಡ್ರಿ..?'' ಅಂತ ಕೇಳದ. ಖರೇನೇ ನಾವು ಹೆದರಿದ್ದರೂ ''ಹೇಳು'' ಅಂದಿವಿ.

''ಆಮ್ಯಾಲ ನನಗ ಗೊತ್ತಾಯಿತು. ಆ ಕುರಿ... ಮತ್ತ ಆ ಹೆಂಗಸು ಸುಡಗಾಡದಾಗೇ ಮಂಗಮಾಯ ಆದರು. ಅಂದ ಮ್ಯಾಲ ಅವೆರಡೂ ಗ್ಯಾರಂಟೀ ದೆವ್ವೇ ಅದಾವ ಅಂತ ಹೇಳಿ ಅಲ್ಲಿಂದ ಏಳಕೊಂತ ಬೀಳಕೊಂತ ಓಡಲಿಕ್ಕ ಸುರು ಮಾಡದವನು, ಮನಿ ಮುಟ್ಟೂ ಮಟ ಎಲ್ಲೂ ನಿಲ್ಲಲಿಲ್ಲರೀ,'' ಅಂತ ಹೇಳಿ ಕತಿ ಮುಗಸದ. ನಮಗ ಸಿದ್ದಣ್ಣ ಬಾಳ ಧೈರ್ಯವಾನ್ ಅದಾನ ಅನಿಸಿತ್ತು. ನಾವು ಹೊಲದಿಂದ ಮನಿಗೆ ಹೋಗೋವಾಗ ಸುಡುಗಾಡ ದಾಟಕೊಂಡೇ ಹೋಗಬೇಕು ಹಂಗ ಹೋಗೋ ಮುಂದ ನಮಗ ಎದುರಿಗಿ ಒಂದೇ ಒಂದು ಕುರಿ ಬಂದರೆ, ಇಲ್ಲಾಂದ್ರ ಅಡ್ಡಾಲಕ ಕುಂಕುಮ ಹಚಕೊಂಡು ಯಾವದರೇ ಹೆಂಗಸು ಬಂದರ, ನಮ್ಮ ಬಾಯಿ ಬರಬರ... ಬಿರಿಬಿರಿ ಒಣಗತಿತ್ತು.

ಈ ಸಿದ್ದಪ್ಪಣ್ಣನ ಕತಿಗಳಂದ್ರ ಎಲ್ಲಾ ಇಂಥಾವೇ... ''ನಾನು ದೆವ್ವನ್ನ ಒಂದೇ ಮಾರು ದೂರದಿಂದ ನೋಡೀನಿ ಆದರ ಕಾಲು ಉಲ್ಟಾ ಇರ್ತಾವ... ಬಿಳಿ ಸೀರಿ ಉಟ್ಗೊಂಡಿರ್ತಾವ ... ಹಣಿ ತುಂಬ ಅರಿಶಿಣ ಕುಂಕುಮ ಬಡ್ಕೋಂಡಿರ್ತಾವ'' ಅಂತ ಹೇಳಿದ್ದ. ಒಂದು ದಿನ ಮನಿಗಿ ಥೇಟ್ ಇದೇ ಥರಾ ರೂಪ ಇರೋ ಗೊಲ್ಲರ ಹೆಂಗಸು ಒಬ್ಬಳು ಭಿಕ್ಷೆ ಬೇಡಲಿಕ್ಕ ಬಂದಿದ್ದಳು. ಮನ್ಯಾಗ ಇದ್ದದ್ದು ನಾನು ಮತ್ತ ನನ್ನ ತಂಗಿ. ಹೋಗಿ ನೀಡೂ ಮುಂದ ಸಿದ್ದಪ್ಪಣ್ಣ ಹೇಳಿದ್ದ ದೆವ್ವಿನ ರೂಪ ತಟ್ಟ್ ಅಂತ ನೆನಪಾಗಿ, ಹೆದರ್ಕೊಂತ ಆಕಿ ಪಾದ ನೋಡಿದ್ದೆ. ಅವು ಸೀದಾನೇ ಇದ್ದು ಹಿಂಗಾಗಿ ಸನ್ಯಾಕ ಹೋಗಿ ಭಿಕ್ಷೆ ಹಾಕಲಿಕ್ಕ ಧೈರ್ಯ ಬಂದಿತ್ತು. ಸಿದ್ದಪ್ಪಣ್ಣಂದು ಒಂದೆರಡಲ್ಲ. ಅಮವಾಶ್ಯೆ ದಿನ, ಅದರಲ್ಲೂ ನಡುರಾತ್ರಿಯೊಳಗ ಸುಡಗಾದರೊಳಗ ಹೋಗಿ, ಗೋರಿ ಮ್ಯಾಲ ಇಟ್ಟ ಹೋಳಿಗಿ ಉಂಡು, ನೂರು ರೂಪಾಯಿ ಬಹುಮಾನ ಗೆದ್ದ ಕತೀನೂ ಒಂದು ಹೇಳಿದ್ದ. ಅಂವಾ ಇನ್ನೂ ಒಂದು ಹೇಳಿದ್ದ. ಸುಡಗಾಡು ದಾಟಿ ಬರೋ ಮುಂದ ಗೋರಿ ಕಡೆ ಕೈ ಮಾಡಬಾರದು ಅಂತ. ಹಂಗೇನಾರೆ ಮಾಡದರ ಕಾಲ ಒಳಗಿಂದ ಕೈ ಹಾಕಿ ಐದೂ ಬೆರಳನ್ನ ಹಗೂರಾಗಿ ಬಾಯಾಗ ಹಿಡದು, ಕಡಕೋಬೇಕು ಅಂತ. ನಾ ಮೆಟ್ರಿಕ್ ಮುಗಿಯೋ ಮಟ ಹಂಗ ಮಾಡಿದ್ದೈತಿ. ಬರ್ತಾ ಬರ್ತಾ ಸಿದ್ದಣ್ಣ ಮತ್ತವನ ಕತಿ ನಮ್ಮಂತಾ ಹುಡುಗರ ಪಾಲಿಗೆ ಬೆನ್ನಿಗಿ ಬಿದ್ದ ಬೇತಾಳ ಆಗಿದ್ವು. ಅದರ ಪರಿಣಾಮ ನಾವು ರಾತ್ರಿ ಉಚ್ಚೆ ಬಂದರೂ ಒಬ್ಬನೇ ಎದ್ದು ಒಯ್ಯುವಂಗಿರಲಿಲ್ಲ. ಅಮವಾಶ್ಯೆ ಹಿಂದಾಮುಂದ ಸಿದ್ದಣ್ಣ ಹೇಳಿದ್ದ ಕತಿಗಳೇ ಸುತ್ತ-ಮುತ್ತಲೂ ಬಿಚ್ಚಕೊತಿದ್ವು. ನಡುರಾತ್ರಿಯೊಳಗ ಎಚ್ಚರಾಗಿ ಹಿಂಗ ಕಣ್ಣ ಬಿಟ್ಟರೂ ಮನಿ ಗ್ವಾಡಿ ಮ್ಯಾಲ ಥೈ ಥೈ ಅಂತ ಕುಣದಂಗ ಕಾಣಸತಿತ್ತು. ಉಸರ ಬಿಗಿ ಹಿಡದು, ಮುಸಕ ಹಾಕಿ ಮಲಗಿದ್ದೂ ಐತಿ. ಮಟಮಟ ಮಧ್ಯಾಹ್ನ ಸಂಡಾಸ್ ಬಂದರೂ ಎದಿ ಧಸಕ್ ಅಂತಿತ್ತು. ದೆವ್ವ ಯಾವ ರೂಪದಾಗ ಬರ್ತಾವ ಅಂತ ಹೇಳೂವಂಗಿಲ್ಲ ಅದಕ್ಕೇ ಕಿಸೆಯೊಳಗ ಒಂದು ದೇವರ ಫೋಟೊ ಇಟ್ಗೋಬೇಕು ಅಂತ ತನ್ನ ಕಿಸೆಯೊಳಗಿದ್ದ ಎಲ್ಲಮ್ಮನ ಫೋಟೋ ತಗದು ತೋರಿಸಿದ್ದ. ದೆವ್ವ ಬಡದರ ತಮಗ ಬರಲಾರದ ಬಾಷೆ ಸೈತಾ ಮಾತಡತಾರ ಅಂದಿದ್ದ. ಅಂವಾ ಹೇಳದಂಗೇ ಅದು ಖರೆ ಆಗಿತ್ತು. ನಮ್ಮ ಬಾಜೂ ಮನಿಯೊಳಗ ಶರಣವ್ವ ಅನ್ನೋ ಹೆಂಗಸಿಗಿ ಗಾಳಿ ಆಗ್ಯಾದ ಅನ್ನೋ ಸುದ್ದಿ ಇಡೀ ಓಣಿಗೆ ಓಣಿನೇ ಅವಾಜ್ ಮಾಡಿತ್ತು. ಅವ್ವ ಅಕಾಡಿ ಹೋಗಬ್ಯಾಡ್ರಿ ಅಂತ ತಾಕೀತು ಮಾಡಿದ ಮ್ಯಾಲೂ ನಾವು ಮೂರ್ನಾಕು ಹುಡುಗರು ಶರಣವ್ವಳ ಮನಿ ಸನ್ಯಾಕ ಹೋಗಿದ್ದೇ ಆಕಿ ಜೋರಾಗಿ ವದರೂದು ಕೇಳತಿತ್ತು. ಆಕಿ ಕನ್ನಡಾನೇ ತೊಡರ್ ಬಡರ್ ಮಾತಾಡುವಕ್ಕಿ, ಅಂತದರೊಳಗ ಉರ್ದುದಾಗ ವಟಾ ವಟಾ ಅನ್ನೂದು ಕೇಳಿ ಸಿದ್ದಪ್ಪಣ್ಣ ಖರೆ ಹೇಳಿದ್ದ ಅನಿಸಿತ್ತು. ಹಂಗೆನೇ ಆ ಶರಣವ್ವನ ಅತ್ತಿ ಮುಂದ ವರ್ಷ ಒಪ್ಪತ್ತಿನ್ಯಾಗ ನೆಗದು ಬಿದ್ದಿದ್ದೇ ದೆವ್ವ ಶರಣವ್ವನ ಮೈಯಾಂದು ಖರೆ ಖರೆನೆ ಓಡಿ ಹೋದಂಗಿತ್ತು.

ಸುಗ್ಗಿ ದಿಂದಾಗ ಒಂದೆರಡು ದಿನ ರಾಶಿ ಮಾಡೂ ಮುಂದ ನಾನೂ ಹೊಲದಾಗ ಮಲಗತಿದ್ದೆ. ಅಪ್ಪ, ''ಹುಚ್ಚ, ಖೋಡಿಯಂಗ ಮಾಡಬ್ಯಾಡ, ನಸುಕಿನ್ಯಾಗ ಬಾಳ ಥಂಡಿ ಇರತೈತಿ. ಸುಮ್ಮ ಮನ್ಯಾಗ ಇರು'' ಅಂದರೂ ಕೇಳತಿರಲಿಲ್ಲ. ಅವತ್ತೊಂದಿನ ಹಂತಿ ಮಾಡೂ ಮುಂದ ಸಿದ್ದಣ್ಣ ನನಗ ದೂರದಲ್ಲಿ ಲಮಾಣಿಗೇರ ತಾಂಡಾ ಹೊರಗ ಬ್ಯಾಟರಿ ಹಿಡಕೊಂಡು ತಿರುಗಾಡೊದನ್ನು ತೋರಿಸಿ, ಅದು ಕೊಳ್ಳಿದೆವ್ವ. ಮೊನ್ನೆ ನಾ ಹಿಂಗೇ ಮಲಗದಾಗ ನಾ ಹೊದುಕೊಂಡು ಮಲಗಿದ್ದ ಕಂಬಳಿ ಜೋಡಿನೇ ನನಗ ಎತ್ತಿ ವಗೀತು... ಎದ್ದು ನೋಡದರ ಮಂಗಮಾಯ...! ಬೆಳ್ಳಿ ಬೆಳತನಕ ಆ ಕೊಳ್ಳಿ ದೆವ್ವ ತಿರಗತಿರತೈತಿ. ನಸುಕಿನ ವ್ಯಾಳೆದಾಗ ಕೋಳಿ ಕೂಗೋ ಮೊದಲೇ ಮಂಗಮಾಯ ಆಗಿ, ಮುಗಲಾಗ ಹೋಗಿ ಒಂದು ಚುಕ್ಕಿ ಆಗಿ ಮುಗಲಿಗಿ ಮೆತ್ತಕೊಂಡು ಬಿಡತೈತಿ, ಮತ್ತ ಮರುದಿನ ರಾತ್ರಿ ಹಿಂಗ ಕೊಳ್ಳಿ ದೆವ್ವ ಆಗಿ ತಿರಗತೈತಿ ಅಂತ ಹೇಳಿದ್ದ. ಹುಣಸೀಗಿಡ ಅಂದ್ರ ಆ ದೆವ್ವಗೋಳು ಬಾಳ ಹುರುಪ ಆಗ್ತಾವ. ಹಗಲ ಹೊತ್ತಿನ್ಯಾಗೂ ತಂಪಂತ ಹೇಳಿ, ಅವು ಅಲ್ಲೇ ಮಲಗೂದು, ತಾ ನೋಡೀನಿ ಅಂತ ಹೇಳಿದ್ದ ಆ ದಿನದಿಂದ ಅಂವಗ ನಾವು ಹುಣಸಿಕಾಯಿ ಹರದುಕೊಡು ಅನ್ನೂದೇ ಬಿಟ್ಟಿದ್ದಿವಿ. ಇಂಥಾ ಸಿದ್ದಣ್ಣ ಬರತಾ ಬರತಾ ನಮ್ಮನ್ನ ಬೀಡಿ ತರಲಿಕ್ಕ, ತಂಬಾಕ ತರಲಿಕ್ಕ ಬಳಸಿಕೊಳ್ಳಾಕ ಶುರು ಮಾಡದ. ಎಲ್ಲೀವರಿಗೆಂದ್ರ ನಾವು ರಾತ್ರಿ ಕತಿ ಕೇಳತಾ ಕೇಳತಾ ಅಂಜಕೊಂಡು ಅವನ ಹಾಸಿಗಿಯೊಳಗೇ ಮುದಡಿ ಆಗಿ ಮಲಗತಿದ್ದಿವಿ. ನಾವು ಅಂವಗ ಇನ್ನೂ ಗಟ್ಟಿ ಆಗಿ ಹಿಡೀಲಿ ಅಂತ ಹೇಳಿ ಮತ್ತೂ ಹೆದರಿಕಿ ಆಗೂವಂಥಾ ಕತಿ ಹೇಳಂವ. ನಾವು ಸಾಕು ಅಂದರೂ ಬಿಡ್ತಿರಲಿಲ್ಲ. ಎಲ್ಲೀವರೆಗಂದರ, ನಾವು ನಮ್ಮವ್ವ ಹಾಗೂ ಅಪ್ಪ ಹೇಳೊ ಕೆಲಸ ಒಲ್ಲೆ ಅಂತಿದ್ದೀವಿ. ಸಿದ್ದಪ್ಪಣ್ಣ ಹೇಳಿದರ ಮರು ಮಾತಾಡದೆ ಮಾಡತಿದ್ದಿವಿ. ಸಿದ್ದಪ್ಪಣ್ಣ ನೋಡಲಿಕ್ಕೂ ಒಂಥರಾ ರಾವ್ ಇದ್ದ. ಅವನ ಕಾಲಿನ ಮೀನಗಂಡದ ಮ್ಯಾಲ ಉಬ್ಬಿದ ನರಗೋಳೇ ಭಯ ಹುಟ್ಟಿಸುವಂಗ ಇದ್ವು. ಕೋರೆ ಮೀಸೆ, ಗುಂಗರಗೂದಲು, ದಢೂತಿ ದೇಹ, ಗಡಸು ಧ್ವನಿ, ಒಟ್ಟಿನ್ಯಾಗ ಅಂವಾ ದೆವ್ವಿನ ಕಥಿ ಹೇಳಲಾಕ ಹೇಳಿ ಮಾಡಸದಂಗ ಇದ್ದ.

* * *

ಗೌರೀ ಹುಣ್ಣವಿ ಜಾತ್ರಿ ಮುಂದ ಹೊಲದಾಗ ಕಡ್ಲಿ ರಾಶಿ ಇತ್ತು. ಜಾತ್ರಿ ಸಲಾಗಿ ಎರಡು ದಿನ ಸಾಲಿ ಸೂಟಿ ಕೊಟ್ಟಿತ್ತು. ಅಪ್ಪ ಬ್ಯಾಡ ಅಂದರೂ ನಾನೂ ರಾತ್ರಿ ಹೊಲದಾಗೇ ಇರತೀನಿ ಅಂತ ಪಂಟ ಹಚ್ಚದೆ. ಥಂಡಿ ಬಾಳ ಇರತೈತಿ, ಬರೂದಿದ್ದರ ಒಂದು ಕೌದಿ ತಗೊಂಡು ಬಾ ಅಂದ. ಬಾಳಂದ್ರ ಬಾಳ ಖುಷಿ ಆಯ್ತು. ಸಿದ್ದಣ್ಣ ರಾಶಿ ದಿನ ಕತಿ ಹೇಳ್ತೀನಿ ಅಂತ ಮಾತು ಕೊಟ್ಟಿದ್ದ. ಕೊಟ್ಟ ಮಾತು ತಪ್ಪದರ ನಾ ಬಿಡೂವಂಗಿಲ್ಲ ಅಂತ ಅಂವಗೂ ಗೊತ್ತಿತ್ತು. ರಾತ್ರಿ ಉರಿ ಹಚ್ಚಿ ಕಡ್ಲಿ ಗಿಡ ಸುಟ್ಟು 'ಕಟರುಂ ಕುಟರುಂ' ಅಂತ ಭೇಷ ರಾತ್ರಿ ಬಾರಾ, ಸಾಡೇ ಬಾರಾತನ ಅಪ್ಪ, ಸಿದ್ದಣ್ಣ, ಬಾಜೂ ಹೊಲದ ಚೆನ್ನಪ್ಪ ಕಟದೇ ಕಟದರು. ಹುಣ್ಣವಿ ಬೆಳದಿಂಗಳ ಹೊಲದ ತುಂಬಾ ಸುರವಿದಂಗ ಕಾಣ್ತಿತ್ತು. ಅಪ್ಪ ''ನಿನಗ ನಿದ್ದಿ ತಡಿಯೂದಿಲ್ಲ ಹೋಗಿ ಗುಡಸಲದಾಗ ಮಲಕೊ'' ಅಂದ. ನಾ ಸುಮ್ಮ ಕುಂತೆ. ''ಪುಕ್ಕಲ ಕುರಸಾಲ್ಯಾ ಹೆದರಿ ಸಾಯ್ತಾನ. ಸಿದ್ಯಾ, ಅವಂಗ ಕರಕೊಂಡು ಹೋಗು ನೀನೂ ಅಲ್ಲೇ ಮಲಕೊ'' ಅಂದಾಗ ಅಂವಾ, ''ನೀವು ಕತಿ ಹೇಳು ಅನಬಾರದು ನೋಡ್ರಿ'' ಅಂದ. ನಾನು ''ಒಂದೇ ಒಂದು'' ಅನ್ಕೊಂತ ಅವನ ಜೋಡಿ ನಡದೆ. ಬೆಳದಿಂಗಳು ಗುಡಿಸಲ ಬಾಗಿಲಕ ಪರದೆ ಹಾಕದಂಗ ಮೂಡಿತ್ತು. ಬಾಳಂದ್ರ ಬಾಳ ಥಂಡಿ. ಸಿದ್ದಣ್ಣ ಹಾಸಗಿ ಹಾಸೂ ಪುರಸತ್ತಿಲ್ಲದೇ, ''ಕತಿ ಹೇಳು ಕತಿ ಹೇಳು'' ಅಂತ ಬೆನ್ನಿಗಿ ಬಿದ್ದೆ. ಅಂವಾ ಮತ್ತ

ಹುಣಸೀ ಗಿಡ... ಹಾಳುಬಿದ್ದ ಬಾವಿ... ಸುಡಗಾಡು ಅಂತ ಸುರು ಮಾಡದ. ನಾ ಅಲ್ಲೇ ಉಗುಳು ನುಂಗ್ತಾ ಮೆತ್ತಗ ಹುಂ.. ಹುಂ...ಅನ್ನಾಕತ್ತಿದ್ದೆ. ಹಂಗ ಅನ್ನೊಂತ ಕಣ್ಣ ಮುಚ್ಚದಂಗ ಮಾಡದೆ. 'ನಿದ್ದಿ ಬಂತು ಕತಿ ಸಾಕು' ಅಂದೆ. ಅಂವಾ ಎದ್ದು ಕಂದೀಲು ಆರಿಸಿದ. ನನಗ ಹಗೂರಕ ಕೌದಿ ಹೊಚ್ಚಿ ತಾನೂ ಅದರಾಗೇ ಹೊಕ್ಕೊಂಡ. ನನ್ನ ಮ್ಯಾಲ ಕಾಲು ಹಾಕದ, ನನಗ ಜೋರಾಗಿ ಹಿಡ್ಕೊಂಡ. ಹಿಂದ ಹಂಗ ಎಂದೂ ಅಂವಾ ನನಗ ಹಿಡದಿರಲಿಲ್ಲ. ಎಲ್ಲಿ ಬೇಕು ಅಲ್ಲಿ ಕೈ ಆಡ್ಸಾಕತ್ತದ. ನಾ ಕಣ್ಣ ತಿಕ್ಕೊಂತ ಎದ್ದು ಕುಂತೆ. ತನಗ ಬಾಳ ಜೋರ್ ನಿದ್ದಿ ಹತ್ತಿತ್ತು ಅನ್ನೂವಂಗ ನಾಟಕ ಮಾಡ್ಕೊಂತ ಎದ್ದ.

''ಯಾಕ್ರಿ ಏನಾಯ್ತು...?'' ಅಂದ.

''ನಾ ನಮ್ಮಪ್ಪನ ಹತ್ಯಾಕ ಹೋಗ್ತೀನಿ'' ಅಂದೆ.

''ಏನಾಯ್ತು ಹೇಳ್ರಿ...'' ಅಂದ.

''ನನ್ನ ಚಡ್ಯಾಗ ಎಲ್ಲಾ ಕೈ ಹಾಕ್ತಿಯಲ್ಲೋ...?''

''ಓ ಅದಾ...? ಈ ದೆವ್ವಿನ ಕತೀನೇ ಹಂಗರಿ. ಕನಸಿನ್ಯಾಗ ಬಂದು ಹಂಗೆಲ್ಲಾ ಮಾಡಸ್ತಾವ. ಅದು ನಾ ಮಾಡಿದ್ದಲ್ಲ... ಅವು ಮಾಡಸಿದ್ದು. ಏನು ಮಾಡಾಕತ್ತೀನಿ ಅಂತ ನನಗೇ ನೆನಪಿರೂದಿಲ್ಲ. ಯಾರ ಮುಂದೂ ಹೇಳಬ್ಯಾಡ್ರಿ. ಹೇಳದರ ನಿಮ್ಮ ಕನಸ್ನ್ಯಾಗೂ ಹಂಗೇ ಸುರು ಆಗತೈತಿ'' ಅಂದ. ನಾ ಹೇಳೂದಿಲ್ಲ ಅಂದ್ಕೊಂಡು ಸುಮ್ಮ ಮಲಗದೆ. ಅಪ್ಪ ಅಲ್ಲೇ ಕಡ್ಲಿಗಿಡ ಒಟ್ಟದಲ್ಲೇ ಮಲಗಿದ್ದ. ಮುಂಜಾನೆ ಎದ್ದು ನೋಡದರ ಸಿದ್ದಪ್ಪನ ಕಾಲ... ಕೈ ಎರಡೂ ನನ್ನ ಮ್ಯಾಲೇ ಇದ್ವು. ಹಗೂರಕ ಸರಿಸಿ, ಎದ್ದು ಹೊರಗ ಬಂದೆ. ಅಪ್ಪ ಅಲ್ಲೇ ಉರಿ ಕಾಯ್ಸ್ಕೊಂತ ಬೀಡಿ ಸೇದತಿದ್ದ. ''ಸಿದ್ಯಾಗ ಎಬ್ಬಸು. ಅಪ್ಪ ಕರಿಯಾಕತ್ತಾನ ಅಂತ ಹೇಳು.'' ಅಂದ. ಜೋರಾಗಿ ಅಲ್ಲಿಂದಲೇ ಸಿದ್ದಪ್ಪಣ್ಣ... ಸಿದ್ದಪ್ಪಣ್ಣ ಅಂತ ಒದರದೆ. ಹುಂ ಇಲ್ಲ ಉಹುಂ... ಇಲ್ಲ. ಅಪ್ಪ ಜೋರಾಗಿ, ''ಸಿದ್ಯಾ ಹೊತ್ತ ನೋಡೊಲೇ ಎಷ್ಟಾಗೈತಿ. ಏಳು... ಏಳು...'' ಅಂದ. ಅವಾಗೂ ಅಂವಾ ಏಳಲಿಲ್ಲ. ''ಅದ್ಯಾವ ನಮುನಿ ನಿದ್ದಿ ಅಂವಂದು...! ನೀರ ಉಗ್ಗು ಮುಖಕ್ಕ'' ಅಂದಾಗ ಗುಡಸಲ ಕಡಿ ಹೊಂಟೆ. ಬಾಗಿಲದೊಳಗ ಕಾಲ ಹಾಕೂದರೊಳಗ ಎದುರಿನ ಬುತ್ತೀ ಸಿಗಸೋ ಕಟಿಗಿ ರಿಕ್ಕಿಗಿ ದೊಡ್ಡ ನಾಗರಹಾಂವ ಬುಶ್...! ಅಂತ ಜೋತ್ಯಾಡತಿತ್ತು! ಎದಿ ಝಲ್ ಅಂತು. ಅದು ಚಮಕೀಲೇ ಸರಸರ ಮ್ಯಾಲ ನಿರಕಿಯೊಳಗ ಹೊಯ್ತು. ನನ್ನ ಬಾಯಾಗ ಮಾತೇ ಬರಲಿಲ್ಲ. ನಾ ಹಂಗೇ ಹೌಹಾರಿ ಓಡಿ ಬರೂದು ನೋಡಿ, ''ಯಾಕ ಏನಾಯ್ತು...?'' ಅಂತ ಅಪ್ಪನೇ ಎದ್ದು ಬಂದ. ನನ್ನ ಮೈ ಒಂದು ಸವನ ನಡಗತಿತ್ತು. ಅಷ್ಟು ದೊಡ್ಡ ಹಾವು ನೋಡಿ, ಮಾತ ಸತ್ತಂಗ ಆಗಿದ್ದೆ. ತುಸು ಹೊತ್ತಿನ ಮ್ಯಾಲ ನಾ ಗುಡಸಲದೊಳಗ ನೋಡಿದ್ದು ಹೇಳದೆ. ಅಪ್ಪ ಬಂದು ಅವನ ಮೈ ಕೈ ಹಿಡದು ಅಲ್ಲಾಡಿಸಿದ ಮ್ಯಾಲೂ ಅಂವಾ ಏಳಲಿಲ್ಲ. ಹೊತ್ತ ಏರದಂಗ ಅವನ ಮೈ ಬಣ್ಣಾನೂ ಫ್ಲರ್ಕ್ ಆಗಿ, ಹಚ್ಚಗ ಆಗಾಕತ್ತಿತ್ತು. ಮತ್ಯಾರೂ ಅವನಿಗಿ ಏಳಸೋ ಉಸಾಬರಿನೇ ಮಾಡಿರಲಿಲ್ಲ.

* * *

ನನ್ನ ಮಗ, ''ನೀ ಕತಿ ಹೇಳಂದ್ರೆ ಏನು ಯೋಚನೆ ಮಾಡಾಕತ್ತಿ...?'' ಅಂತ ನನ್ನ ಹಿಡಿದು ಅಲ್ಲಾಡಿಸಿ, ನನ್ನನ್ನ ಮೂವತ್ತು ವರ್ಷ ಮುಂದ ಕರಕೊಂಡು ಬಂದ. ನಾ ''ಹೀಂಗ್ ಒಂದು ಊರಲ್ಲಿ...'' ಅಂತ ಕತೀ ಸುರು ಮಾಡೂ ಮೊದಲೇ, ''ಇದು ಬ್ಯಾಡ ನನಗೆ. ಪೋಗೋ ಚಾನೆಲ್‌ನಲ್ಲಿ ಬರ್ತಾನಲ್ಲ, ಮಿ. ಬೀನ್, ಅವನ ಕತಿ ಹೇಳು'' ಅಂದ. ನನಗ ನೋಡದರೆ ಆ ಮಿ. ಬೀನ್ ಆಗಲೀ... ಅವನ ಕತೆಯಾಗಲೀ ಯಾವದೂ ಗೊತ್ತಿಲ್ಲ. ಇವನಿಗಿ ಹ್ಯಾಂಗ ಹೇಳೂದು ಅನ್ನೂದರೊಳಗ, ''ಪೋಗೊ ಚಾನೆಲ್‌ನಲ್ಲಿ ಮಿ. ಬೀನ್ ಕಾರ್ಟೂನ್ ಎನಿಮೇಶನ್ ಬಂತ್ನೋಡು ಬಾ'' ಅಂತ ಅವಳು ಕರದಿದ್ದೇ, ನಾನೊಂದು ದೊಡ್ಡ ನಿಟ್ಟುಸಿರನ್ನು ಬಿಟ್ಟು ಬಚಾವಾಗಿದ್ದೆ.

**ಡಾ॥ ಎಸ್. ಬಿ. ಜೋಗುರ**
೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಶ್ರೀನಗರ
ಧಾರವಾಡ - ೫೮೦ ೦೦೩.







# ಸಣ್ಣ ಕೈಗಾರಿಕೆಗಳಿಗೆ ವಿಶ್ವಮಟ್ಟದ ಮರ್ಯಾದೆ ತಂದ 'ಪದ್ಮಶ್ರೀ' ಕೆ. ಎಲ್. ನಂಜಪ್ಪ

ಇಂಗ್ಲಿಷ್ ಮೂಲದ ಪರಿಷ್ಕೃತ ಕನ್ನಡ ರೂಪ
**ಡಾ|| ಎಸ್. ವಿದ್ಯಾಶಂಕರ**

ಪ್ರಕಾಶಕರು
**ಕೆ. ಎಲ್. ನಂಜಪ್ಪ ಪ್ರತಿಷ್ಠಾನ ಮತ್ತು**
**ಕಾಸಿಯಾ (KASSIA)**, ನಂ. ೧೯೮, ಮಾಗಡಿ ಕಾರ್ಡ್ ರಸ್ತೆ, ವಿಜಯನಗರ, ಬೆಂಗಳೂರು - ೪೦

ಪುಟಗಳು : ೪೧೬ ಬೆಲೆ : ರೂ. ೨೦೦-೦೦

'ಪದ್ಮಶ್ರೀ' ಕೆ. ಎಲ್. ನಂಜಪ್ಪನವರು ಸಣ್ಣ ಪ್ರಮಾಣದ ಕೈಗಾರಿಕೆಗಳು ಶೈಶವಾವಸ್ಥೆಯಲ್ಲಿದ್ದಾಗ ಅದಕ್ಕೆ ಪ್ರಾಣಪ್ರತಿಷ್ಠೆ ಮಾಡಿದ ಕನ್ನಡನಾಡಿನ ಹೆಮ್ಮೆಯ ಪುತ್ರರು. ಅವರು ಕರ್ನಾಟಕ ರಾಜ್ಯದಿಂದ ಕೇಂದ್ರ ಸರಕಾರಕ್ಕೆ ಅಲ್ಲಿಂದ ಸಂಯುಕ್ತ ಸಂಸ್ಥಾನದ ಸೇವೆಗೆ ನಿಯೋಜಿತರಾಗಿ ಸಣ್ಣ ಪ್ರಮಾಣದ ಕೈಗಾರಿಕೆಗಳ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವಹಿಸಿದರು. ಅದರ ಸರ್ವಾಂಗೀಣ ಪ್ರಗತಿಗೆ ಯೋಜನೆಗಳ ಮೇಲೆ ಯೋಜನೆ ಸಿದ್ಧಪಡಿಸಿ ಅವುಗಳನ್ನು ಅನುಷ್ಠಾನಕ್ಕೆ ತರಲು ತ್ರಿಕರಣಪೂರ್ವಕವಾಗಿ ದುಡಿದರು. ಅವರು ಸಣ್ಣ ಕೈಗಾರಿಕೆಗಳ ಅಭಿವೃದ್ಧಿಯ ಜೊತೆ ಜೊತೆಗೆ ಗುಡಿ ಕೈಗಾರಿಕೆ, ಕರಕುಶಲ ವಸ್ತುಗಳ ನಿರ್ಮಾಣದಲ್ಲೂ ವಿಶೇಷ ಆಸಕ್ತಿ ವಹಿಸಿದರು. ಅವರದು ಅಲೆಮಾರಿ ಬದುಕು. ಜಪಾನ್‌ನಲ್ಲಿ ಉನ್ನತ ಶಿಕ್ಷಣ ಪಡೆಯಲು ೫ ವರ್ಷ, ಕರ್ನಾಟಕ ಸರಕಾರದ ಸೇವೆ ೧೦ ವರ್ಷ, ಭಾರತ ಸರಕಾರದ ಸೇವೆ ೨೪ ವರ್ಷ, ವಿಯನ್ನಾದ ಯುಎನ್‌ಡಿಪಿಯ ಸೇವೆ ೧೨ ವರ್ಷ – ಹೀಗೆ ಅವರು ಕರ್ನಾಟಕದಲ್ಲಿದ್ದುದಕ್ಕಿಂತ ಹೊರನಾಡಿನಲ್ಲಿ ಸೇವೆ ಸಲ್ಲಿಸಿದುದೇ ಹೆಚ್ಚು. ಅವರು ಸಂಯುಕ್ತ ಸಂಸ್ಥಾನದ ಸಣ್ಣ ಪ್ರಮಾಣದ ಕೈಗಾರಿಕೆಗಳ ಹಿರಿಯ ಸಲಹೆಗಾರರಾಗಿ ಫಿಲಿಪ್ಪೈನ್ಸ್, ತಾನ್ಜಾನಿಯಾ, ಇರಾನ್, ವಿಯನ್ನಾ, ಟರ್ಕಿ, ಝಾಂಬಿಯಾ, ಮಾರಿಷಸ್, ಮಿಝೋರಾಂಗಳಿಗೆ ಭೇಟಿ ನೀಡಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಕುರಿತ ಯೋಜನೆಗಳನ್ನು ಸಿದ್ಧಪಡಿಸಿಕೊಟ್ಟರು. ಅವರ ಹೆಸರು ಸಣ್ಣ ಕೈಗಾರಿಕಾ ಕ್ಷೇತ್ರದಲ್ಲಿ ಎಷ್ಟು ಜನಪ್ರಿಯವಾಗಿದ್ದಿತ್ತೆಂದರೆ, ರಾಜಸ್ಥಾನ, ಒರಿಸ್ಸಾ, ಬಿಹಾರ್ ಮೊದಲಾದ ಸಣ್ಣ ಕೈಗಾರಿಕೆಗಳಲ್ಲಿ ಹಿಂದುಳಿದ ರಾಜ್ಯಗಳು ತಮ್ಮಲ್ಲೂ ಸಣ್ಣ ಕೈಗಾರಿಕಾಭಿವೃದ್ಧಿಗೆ ಯೋಜನೆಗಳನ್ನು ಸಿದ್ಧಪಡಿಸಿಕೊಡಬೇಕೆಂದು ವಿನಂತಿಸಿದ್ದವು. ಅಷ್ಟರ ಮಟ್ಟಿಗೆ ಅವರು ಆ ಕ್ಷೇತ್ರದ ಭೀಷ್ಮಾಚಾರ್ಯರಾಗಿ ಎಲ್ಲರ ಗೌರವಕ್ಕೆ ಪಾತ್ರರಾಗಿದ್ದರು.

ಶ್ರೀ ಕೆ. ಎಲ್. ನಂಜಪ್ಪನವರ ಆತ್ಮಕಥೆ ಪಾರದರ್ಶಕವಾಗಿದೆ. ಅವರು ತಮ್ಮ ಜೀವಿತಾವಧಿಯಲ್ಲಿ ಇಂಗ್ಲಿಷ್‌ನಲ್ಲಿ ಬರೆದಿಟ್ಟದ್ದ ಆತ್ಮಕಥೆ ಅವರ ನಿಧನಾನಂತರ (೬.೧೦.೧೯೯೦) ೨೨ ವರ್ಷ ಕಳೆದ ಮೇಲೆ ಕನ್ನಡದಲ್ಲಿ ಪ್ರಕಟವಾಗುತ್ತಿದೆ. ಎಲ್ಲಿಯೋ ಅಡಗಿದ್ದ ಅದನ್ನು ಪತ್ತೆಹಚ್ಚಿ ಕೆ. ಎಲ್.ಎನ್. ಪ್ರತಿಷ್ಠಾನ ಹಾಗೂ ಕಾಸಿಯಾ ಸಂಸ್ಥೆಗಳ ಮೂಲಕ ಅವರ ಮಗ ಶ್ರೀ ಕೆ. ಎನ್. ಜಯಲಿಂಗಪ್ಪನವರು ಹೊರತಂದಿರುವರು. ಹಸ್ತಪ್ರತಿ ರೂಪದಲ್ಲಿದ್ದ ಇಂಗ್ಲಿಷ್‌ನ ಈ ಆತ್ಮಕಥೆ ಪರಿಷ್ಕರಣೆಗೊಳ್ಳಬೇಕಾದ ಅಗತ್ಯವಿದ್ದುದರಿಂದ ಕನ್ನಡದ ವಿದ್ವಾಂಸರಾದ ಡಾ|| ಎಸ್. ವಿದ್ಯಾಶಂಕರ ಅವರು ತಮಗೆ ಸರಿಗಾಣಿಸಿದ ರೀತಿಯಲ್ಲಿ ಅದನ್ನು ಪರಿಷ್ಕರಿಸಿರುವರು. ಈ ಇಂಗ್ಲಿಷ್ ಮೂಲದ ಆತ್ಮಕಥೆಗೆ 'ನೆನಪಿನ ಸಾಲು ದೀಪಗಳು' ಎನ್ನುವ ಅರ್ಥಪೂರ್ಣ ಹೆಸರಿಟ್ಟವರು ಅವರೇ.

ಈ ಆತ್ಮಕಥೆ ಐದು ಭಾಗಗಳಾಗಿ ವಿಂಗಡಣೆಗೊಂಡಿದೆ. ಮೊದಲನೆಯದು ಬಾಲ್ಯದ ವಿವರಗಳು, ಎರಡನೆಯದು, ಉನ್ನತ ಶಿಕ್ಷಣ ಪಡೆಯಲು ಜಪಾನಿಗೆ ಹೋಗಿ ಅಲ್ಲಿ ಐದು ವರ್ಷವಿದ್ದು ಎಂ.ಕಾಂ. ಪದವಿ ಪಡೆದು ಜಪಾನಿನ ಮಿಟ್ಸುಬಿಷಿಯಲ್ಲಿ ತರಬೇತಿ ಪಡೆದ ವಿವರಗಳು, ಮೂರನೆಯದು, ಕರ್ನಾಟಕ ರಾಜ್ಯ ಸರಕಾರದಲ್ಲಿನ ಸೇವಾ ವಿವರಗಳು, ನಾಲ್ಕನೆಯದು, ಕೇಂದ್ರ ಸರಕಾರದಲ್ಲಿನ ಸೇವಾ ವಿವರಗಳು, ಐದನೆಯದು, ವಿಯನ್ನಾದ ಯುಎನ್‌ಡಿಪಿಯಲ್ಲಿನ ಸೇವಾ ವಿವರಗಳು ಆತ್ಮಕಥೆಯಲ್ಲಿ ದಾಖಲಾಗಿವೆ. ಕೆ. ಎಲ್. ನಂಜಪ್ಪನವರ ಪೂರ್ವಿಕರು ಗುಲಬರ್ಗಾ ಜಿಲ್ಲೆಯ ನಾರಾಯಣಪುರದಿಂದ ಬೆಂಗಳೂರಿನ ಅರಳೆಪೇಟೆಗೆ ಹತ್ತಿ ವ್ಯಾಪಾರಕ್ಕಾಗಿ ವಲಸೆ ಬಂದವರು ಇಲ್ಲಿಯೇ ನೆಲೆಸಿದರು. ಗಂಡನನ್ನು ಕಳೆದುಕೊಂಡ ಅವರ ತಾಯಿ ತಿಪ್ಪಮ್ಮ ಗಟ್ಟಿ ಹೆಂಗಸು. ಸಿಹಿ, ಕಾರದ ತಿಂಡಿ ಮಾಡಿ ಅವನ್ನು ಮಾರಿ ಮಕ್ಕಳನ್ನು ಕಷ್ಟದಿಂದ ಬೆಳೆಸಿದರು. ಅವರು ಮಕ್ಕಳಿಗೆ ಮೇಲಿಂದ ಮೇಲೆ ಹೇಳುತ್ತಿದ್ದುದೆಂದರೆ, ಯಾವುದೇ ಸಂದರ್ಭದಲ್ಲೂ ನಿಮ್ಮ ಸ್ವಾಭಿಮಾನ ಕಳೆದುಕೊಳ್ಳಬೇಡಿ ಎಂದು. ಚೆನ್ನಾಗಿ ಓದಿ ಒಳ್ಳೆಯ ಕೆಲಸ ಪಡೆಯಿರಿ. ಅಲ್ಲಿಯವರೆಗೆ ಯಾವ ಬಂಧು-ಬಳಗದವರ ಮನೆಗೂ ಹೋಗಬೇಡಿ ಎಂದು ಎಚ್ಚರಿಸುತ್ತಿದ್ದರು. ತಮ್ಮ ವ್ಯಕ್ತಿತ್ವವನ್ನು ರೂಪಿಸಿದವರು, ತಮ್ಮ ಅಭಿವೃದ್ಧಿಗೆ ಕಾರಣರಾದವರು ತಮ್ಮ ತಾಯಿ ಎನ್ನುವ ಮಾತನ್ನು ಕೆ. ಎಲ್. ನಂಜಪ್ಪನವರು ಅಭಿಮಾನದಿಂದ ಹೇಳಿಕೊಂಡಿರುವರು. ಕೆ. ಎಲ್. ನಂಜಪ್ಪನವರ ವ್ಯಕ್ತಿತ್ವದಲ್ಲಿನ ಪ್ರಧಾನಗುಣ ಸಂಘಟನಾ ಶಕ್ತಿ. ತಾವು ಓದಿದ ಶಾಲೆಯಲ್ಲಿ ಗಣಪತಿ ಮೂರ್ತಿಯನ್ನು ಸ್ಥಳಾಂತರಿಸಿದ ಕಾರಣಕ್ಕಾಗಿ ಅವರು ವಿದ್ಯಾರ್ಥಿಗಳನ್ನು ಹಾಗೂ ಜನತೆಯನ್ನು ಸಂಘಟಿಸಿ ಹೋರಾಟ ನಡೆಸಿ, ಸತ್ಯಾಗ್ರಹ ಮಾಡಿ ಜೈಲಿಗೆ ಹೋದ ಘಟನೆಯಾಗಲೀ, ಜಪಾನ್‌ನಲ್ಲಿ ವಿದ್ಯಾರ್ಥಿದೆಸೆಯಲ್ಲಿ ಅವರು ಭಾರತೀಯ ಸಂಘವನ್ನು ಸ್ಥಾಪಿಸಿದ ಘಟನೆಯಾಗಲೀ ಅವರ ಕರ್ತೃತ್ವಶಕ್ತಿಗೆ ಒಳ್ಳೆಯ ಉದಾಹರಣೆಗಳಾಗುತ್ತವೆ. ಜಪಾನ್‌ನಲ್ಲಿ ನಡೆಸಿದ ಸಾಂಸ್ಕೃತಿಕ ಚಟುವಟಿಕೆಗಳು, ಕ್ರಾಂತಿವೀರ ರಾಶ್ ಬಿಹಾರಿ ಬೋಸರ ಜೊತೆಗೂಡಿ ಭಾರತದ ಸ್ವಾತಂತ್ರ್ಯಕ್ಕಾಗಿ ನಡೆಸಿದ ಗುಪ್ತ ಚಟುವಟಿಕೆಗಳಾಗಲೀ, ಭಾರತೀಯ ಸಂಸ್ಕೃತಿಗೆ ಮಸಿ ಬಳಿಯುವಂತಿದ್ದ 'ಗಂಗಾದಿನ್' ಸಿನಿಮಾ ಬಹಿಷ್ಕಾರ ಮಾಡುವ ಸಾಂಘಿಕ ಹೋರಾಟವಾಗಲೀ, ಶಿವಶರಣರ ವಚನಗಳನ್ನು ಜಪಾನ್ ಭಾಷೆಗೆ ಅನುವಾದಿಸಿ ಅವರ ಅನುಭವ ಕುರಿತು ಮಾಡಿದ ಉಪನ್ಯಾಸಗಳಾಗಲೀ ವಿದ್ಯಾರ್ಥಿದೆಸೆಯಲ್ಲಿನ ಅವರ ಕಾರ್ಯಚಟುವಟಿಕೆಗಳಲ್ಲಿ ವ್ಯಕ್ತವಾಗುವ ಅದಮ್ಯ ಉತ್ಸಾಹವನ್ನು ಸೊಗಸಾಗಿ ಪರಿಚಯಿಸುತ್ತವೆ.

**ಪ್ರೊ|| ಆರ್. ರಾಚಪ್ಪ**

ಜಪಾನ್‌ನಿಂದ ಕರ್ನಾಟಕಕ್ಕೆ ಹಿಂತಿರುಗಿದ ಮೇಲೆ ಕೈಗಾರಿಕಾ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಅವರು ಕಂಡ ಕನಸು ಅತ್ಯದ್ಭುತವಾದುದು. ಎಂ. ವಿಶ್ವೇಶ್ವರಯ್ಯನವರು 'ಕೈಗಾರಿಕೀರಣ ಅಥವಾ ನಾಶ' ಎಂದು ಘೋಷಿಸಿದುದು, ಮಹಾತ್ಮಾ ಗಾಂಧೀಜಿಯವರು ಭಾರತದ ಭವಿಷ್ಯ ಹಳ್ಳಿಗಳಲ್ಲಿದೆ, ಅಲ್ಲಿ ಸಣ್ಣ ಕೈಗಾರಿಕೆಗಳು ಸ್ಥಾಪನೆಗೊಂಡು ಯುವಕರಿಗೆ ಉದ್ಯೋಗ ಕಲ್ಪಿಸಬೇಕು ಎನ್ನುವ ಅವರ ಆಶಾವಾದ ಕೆ. ಎಲ್. ನಂಜಪ್ಪನವರಿಗೆ ಸ್ಫೂರ್ತಿ ನೀಡಿದವು. ಅವರು ಸಣ್ಣ ಕೈಗಾರಿಕೆಗಳ ಉದ್ಯಮಿಗಳನ್ನು ಆಕರ್ಷಿಸಲು ಜಿಲ್ಲೆಗಳಲ್ಲಿ ತೀವ್ರ ಪ್ರವಾಸ ಕೈಗೊಂಡು ಪ್ರಚಾರ ಮಾಡಿದರು. ಕೈಗಾರಿಕೆಗಳಲ್ಲಿ ಬಂಡವಾಳ ತೊಡಗಿಸಲು ಸಮರ್ಥರಾದವರಿಗೆ ಮಾರ್ಗದರ್ಶನ ಮಾಡಿದರು. ಹಣದ ಬೆಂಬಲವಿಲ್ಲದ ಯುವಕರನ್ನು ಸಂಘಟಿಸಿ ಅವರು ಸ್ಥಾಪಿಸಬಹುದಾದ ಕೈಗಾರಿಕೆ, ಅದಕ್ಕೆ ಬೇಕಾದ ಬ್ಯಾಂಕಿನ ಸಾಲ ಸೌಲಭ್ಯ, ಯಂತ್ರೋಪಕರಣಗಳ ಖರೀದಿಗೆ ನೆರವು – ಹೀಗೆ ಬೇಕಾದ ಎಲ್ಲ ನೆರವನ್ನು ಒದಗಿಸಿಕೊಟ್ಟರು. ಏಳು ದಶಕಗಳ ಹಿಂದೆ ಸಣ್ಣ ಕೈಗಾರಿಕೆಗಳು ಅದಾಗತಾನೇ ಕಣ್ಣು ಬಿಡುತ್ತಿದ್ದ ಕಾಲಘಟ್ಟದಲ್ಲಿ ಹಣವಂತರ ಹಾಗೂ ಕನಸುಗಣ್ಣಿನ ಯುವಕರ ಬಳಿಗೆ ತಮ್ಮ ಸಣ್ಣ ಕೈಗಾರಿಕಾ ಇಲಾಖೆಯನ್ನು ಕರೆದೊಯ್ದವರು ಕೆ. ಎಲ್. ನಂಜಪ್ಪನವರು. ಒಮ್ಮೆ ಎಂ. ವಿಶ್ವೇಶ್ವರಯ್ಯನವರು ಇವರನ್ನು ಕರೆಯಿಸಿಕೊಂಡು ಸಣ್ಣ ಕೈಗಾರಿಕೆಗಳ ಅಭಿವೃದ್ಧಿಯ ಬಗೆಗೆ ಚರ್ಚಿಸಿ, ತಾವು ಬರೆಯಲಿರುವ ಪುಸ್ತಕಕ್ಕೆ ಸಹಾಯಮಾಡಬೇಕೆಂದು ಕೇಳಿಕೊಂಡರು. ಎಂ. ವಿಶ್ವೇಶ್ವರಯ್ಯನವರು ಗ್ರಾಮೀಣ ಕೈಗಾರಿಕೀಕರಣ ಯೋಜನೆ ಕುರಿತಂತೆ ಒಂದು ಪುಸ್ತಕ ಬರೆದು ಅದರ ಮುದ್ರಣ ಜವಾಬ್ದಾರಿಯನ್ನು ಕೆ. ಎಲ್. ನಂಜಪ್ಪನವರಿಗೆ ವಹಿಸಿಕೊಟ್ಟರು. ಆದರೆ ಮುದ್ರಣಾಲಯದ ಅಧಿಕಾರಗಳ ಮೇಲೆ ಪೂರ್ಣ ಭರವಸೆ ಹೊಂದಿದ್ದ ಅವರು ವೈಯಕ್ತಿಕವಾಗಿ ಕರಡುಪ್ರತಿ ಓದಲಿಲ್ಲ. ಅದರ ಫಲವಾಗಿ ಮುದ್ರಣಗೊಂಡ ಪುಸ್ತಕದಲ್ಲಿ ೧೫ ತಪ್ಪುಗಳು ಉಳಿದುಬಿಟ್ಟವು. ಕೆ. ಎಲ್. ನಂಜಪ್ಪನವರು ಆ ತಪ್ಪುಗಳನ್ನು ಸರಿಪಡಿಸಿದ ನಂತರ ಪುಸ್ತಕವನ್ನು ಮರು ಮುದ್ರಿಸಬೇಕಾಯಿತು. ಆಗ ವಿಶ್ವೇಶ್ವರಯ್ಯನವರು ನಂಜಪ್ಪನವರನ್ನು, ''ಇನ್ನು ಮುಂದೆ ಒಂದು ಕೆಲಸ ವಹಿಸಿಕೊಟ್ಟ ಮೇಲೆ ಬೇರೆಯವರನ್ನು ಆಶ್ರಯಿಸಬಾರದು; ನಾವೇ ಖುದ್ದಾಗಿ ಎಲ್ಲವೂ ಸರಿಯಾಗಿ ನಡೆದಿದೆಯೇ ಎಂದು ಪರೀಕ್ಷಿಸಬೇಕು'' ಎಂದು ಎಚ್ಚರಿಸಿದರು. ಸರ್. ಎಂ. ವಿ. ಅವರ ಶಿಸ್ತು, ಕೆಲಸದ ಮೇಲಿನ ಶ್ರದ್ಧೆಯ ಬಗೆಗೆ ಈ ಘಟನೆ ಒಂದು ಒಳ್ಳೆಯ ನಿದರ್ಶನ. ಅವರ ಸಮಯಪಾಲನೆ, ಶಿಸ್ತಿಗೆ ಇನ್ನೊಂದು ಘಟನೆಯ ಉಲ್ಲೇಖವೂ ಆತ್ಮಕಥೆಯಲ್ಲಿ ಬಂದಿದೆ. ಮುಖ್ಯ ಮಂತ್ರಿಗಳು ಸರ್. ಎಂ. ವಿ. ಅವರ ಭೇಟಿಗೆ ಬಂದರು. ಭೇಟಿಗೆ ಬರುವವರ ಸಂಖ್ಯೆ, ಅವರಿಗೆ ಕೂಡಲು ಕುರ್ಚಿ, ಕಾಫಿ ಪೂರೈಕೆ ಎಲ್ಲವೂ ಶಿಸ್ತುಬದ್ಧವಾಗಿಯೇ ನಡೆಯಬೇಕು. ಕೆ. ಎಲ್. ನಂಜಪ್ಪನವರಿಗೆ ಮುಖ್ಯಮಂತ್ರಿಗಳನ್ನು ಕರೆದುತರುವ ಜವಾಬ್ದಾರಿ ವಹಿಸಿಕೊಡಲಾಯಿತು. ಎಂಟು ಮಂದಿಗೆ ಸರ್ ಎಂ. ವಿ. ಅವರ ನಿವಾಸದಲ್ಲಿ ವ್ಯವಸ್ಥೆಯಾಗಿದ್ದಿತು. ಮುಖ್ಯ ಮಂತ್ರಿಗಳ ಜೊತೆ ಹಣಕಾಸು ಮಂತ್ರಿಗಳಾದ ಟಿ. ಮರಿಯಪ್ಪನವರೂ ಬಂದರು. ನಿಗದಿತ ಸಂಖ್ಯೆಗೆ ಒಬ್ಬರು ಹೊಸದಾಗಿ ಸೇರ್ಪಡೆಯಾದದ್ದು, ಅದನ್ನು ಕೆ. ಎಲ್. ನಂಜಪ್ಪನವರು ಅವರಿಗೆ ತಿಳಿಸದಿದ್ದುದು ವ್ಯವಸ್ಥೆಯಲ್ಲಿ ಏರುಪೇರಾಗಲು ಕಾರಣವಾಯಿತು. ಸರ್. ಎಂ. ವಿ. ಇದರಿಂದ ಅಪ್ರಸನ್ನರಾದರು. ಅವರು ಮೃದುವಾಗಿ ಕೆ. ಎಲ್. ನಂಜಪ್ಪನವರನ್ನು, ''ನನ್ನ ಮನೆಗೆ ಎಷ್ಟು ಮಂದಿ ಬರುವರೆಂಬುದನ್ನು ಮುಖ್ಯ ಮಂತ್ರಿಗಳಿಂದ ತಿಳಿದು ಬರಲು ನಾನು ನಿಮಗೆ ಹೇಳಿರಲಿಲ್ಲವೆ ? ಮತ್ತೆ ಹೆಚ್ಚುವರಿ ಮಂದಿಯನ್ನು ಕರೆದು ತಂದು ನೀವು ನನ್ನನ್ನು ಹೆಚ್ಚಿನ ತೊಂದರೆಗೆ ಸಿಕ್ಕಿಹಾಕಿಸಿದಿರಿ. ನನಗೆ ಖಚಿತವಾಗಿ ಎಷ್ಟು ಮಂದಿ ಬರುವರೆಂಬುದು ತಿಳಿದಿರಲಿಲ್ಲ, ನಾನು ಎಂಟು ಮಂದಿಗೆ ಕಪ್ ಕಾಫಿ ಸರಬರಾಜು ಮಾಡಲು ಹೇಳಿದ್ದೆ. ನಾನು ಹೆಚ್ಚುವರಿ ಹಾಲಿಗೆ ಏರ್ಪಾಟುಮಾಡಿರಲಿಲ್ಲ, ಹೀಗಾಗಿ ಪೂರ್ಣ ಕಪ್ ಕಾಫಿ ಕೊಡಲಾಗದೆ ದೊರೆತ ಹಾಲಿನಿಂದಷ್ಟೆ ನಾವು ಅತಿಥಿಗಳನ್ನು ಸಂಭಾಳಿಸಬೇಕಾಯಿತು. ಹೀಗೆ ನೀವು ನನ್ನನ್ನು ತೊಂದರೆಗೆ ಒಳಗಾಗಿಸಿಬಿಟ್ಟಿರಿ'' ಎಂದು ಆಕ್ಷೇಪಿಸಿದರು. ಇದೊಂದು ಸಣ್ಣ ಘಟನೆ. ಆದರೆ ಅದು ಕೆ. ಎಲ್. ನಂಜಪ್ಪನವರಿಗೆ ಕಲಿಸಿದ ಪಾಠ ದೊಡ್ಡದು.

ಕೆ. ಎಲ್. ನಂಜಪ್ಪನವರ ಕುಶಾಗ್ರಮತಿ ಹಾಗೂ ದೂರದರ್ಶಿತ್ವಕ್ಕೆ ಎರಡು ನಿದರ್ಶನಗಳು ಆತ್ಮಕಥೆಯಲ್ಲಿ ಬರುತ್ತವೆ. ದೊಡ್ಡಬಳ್ಳಾಪುರ ಕೈಮಗ್ಗದ ರೇಶ್ಮೆಗೆ ಪ್ರಸಿದ್ಧಿ. ಈ ಕೈಗಾರಿಕೆಯಲ್ಲಿ ತೊಡಗಿಕೊಂಡವರನ್ನೆಲ್ಲಾ ಒಂದುಗೂಡಿಸಿ ಕೈಮಗ್ಗದ ಬದಲಿಗೆ ವಿದ್ಯುಚ್ಛಾಲಿತ ಮಗ್ಗದ ಬಳಕೆ ಮಾಡಲು ಸಲಹೆ ಮಾಡಿದರು ಹಾಗೂ ಪ್ರಾತ್ಯಕ್ಷಿಕೆ ಮೂಲಕ ಮನದಟ್ಟುಮಾಡಿದರು. ಪ್ರಾರಂಭದಲ್ಲಿ ನಿರುತ್ಸಾಹದ ಪ್ರತಿಕ್ರಿಯೆ ವ್ಯಕ್ತವಾದರೂ ಸಮಯ ಹಾಗೂ ಶ್ರಮದ ಉಳಿತಾಯದ ದೃಷ್ಟಿಯಿಂದ ವಿದ್ಯುಚ್ಛಾಲಿತ ಮಗ್ಗದ ಕಡೆಗೆ ಜನ ಆಕರ್ಷಿತರಾದರು. ಕರ್ನಾಟಕ, ಕೇರಳ ತೆಂಗಿನನಾರಿನ ಉತ್ಪನ್ನಗಳಲ್ಲಿ ಹೆಸರು ಮಾಡಿದ್ದುವು. ಕೆ. ಎಲ್. ನಂಜಪ್ಪನವರು ತೆಂಗಿನ ಒಣಚಿಪ್ಪಿನ ಹೊಂಬಣ್ಣವನ್ನು ಉಳಿಸಿಕೊಳ್ಳಲು ವಿಜ್ಞಾನಿಗಳ ನೆರವು ಪಡೆದರು. ಇದರಿಂದಾಗಿ ತೆಂಗಿನನಾರಿನ ಉತ್ಪನ್ನಗಳಲ್ಲಿ ಹೊಂಬಣ್ಣ ಉಳಿಯಲು ಸಾಧ್ಯವಾಯಿತು.

೨೪ ವರ್ಷಗಳ ದೀರ್ಘಕಾಲದ ಕೇಂದ್ರ ಸರಕಾರದ ಸೇವೆಯಲ್ಲಿ ಸಣ್ಣ ಕೈಗಾರಿಕೆಗಳು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದವು. ಕರಕುಶಲವಸ್ತುಗಳ ನಿರ್ಮಾಣ ರಾಷ್ಟ್ರದಾದ್ಯಂತ ಹರಡಿತು. ಗುಡಿ ಕೈಗಾರಿಕೆಗಳು ಒಂದು ವ್ಯವಸ್ಥಿತ ರೂಪ ಪಡೆದವು. ಅವುಗಳಿಗೆ ವಿಶೇಷ ಉತ್ತೇಜನ ನೀಡಲಾಯಿತು. ಕೇಂದ್ರ ಸರಕಾರದ ಕೈಗಾರಿಕಾ ವಿಭಾಗ ನಡೆಸಿದ ವಿಚಾರಸಂಕಿರಣಗಳು, ಚರ್ಚೆಗಳು ವಸ್ತುಪ್ರದರ್ಶನಗಳು ಇಡೀ ದೇಶದಲ್ಲಿ ಹಾಗೂ ಅಭಿವೃದ್ಧಿಪರ ರಾಷ್ಟ್ರಗಳಲ್ಲಿ ವ್ಯಾಪಕ ಪ್ರಚಾರ ಪಡೆದವು. ಯುಪಿಎಸ್‌ಸಿಯಿಂದ ಆಯ್ಕೆಯಾದ ಡೆಪ್ಯೂಟಿ ಡೈರೆಕ್ಟರ್ ಹುದ್ದೆಯಿಂದ ಕಮಿಷನರ್ ಹುದ್ದೆಗೆ ಭಡ್ತಿ ಪಡೆದ ಕೆ. ಎಲ್. ನಂಜಪ್ಪನವರ ಸೇವಾ ಮನೋಭಾವ, ಕರ್ತವ್ಯಪ್ರಜ್ಞೆ, ಕೈ ಶುದ್ಧಿ, ಬಾಯಿ ಶುದ್ಧಿಗಳ ಮೂಲಕ ಅಧಿಕಾರಿವರ್ಗದಲ್ಲಿ ಬಹಳ ಬೇಗ ಪ್ರಸಿದ್ಧಿಗೆ ಬಂದರು. ಐ.ಸಿ.ಎಸ್. ಹಾಗೂ ಐ.ಎ.ಎಸ್. ಅಧಿಕಾರಿಗಳ ಕೈಕೆಳಗೆ ಸೇವೆಸಲ್ಲಿಸುವಾಗ ಅವರನ್ನು ಕಾಡಿದ ಕಿರುಕುಳಗಳು, ಕರ್ತವ್ಯನಿಷ್ಠೆಯನ್ನು ಮೆಚ್ಚಿ ಸಹಕರಿಸಿದ ಮೇಲಧಿಕಾರಿಗಳು – ಇವುಗಳ ನೈಜಚಿತ್ರಣ ಆತ್ಮಕಥೆಯಲ್ಲಿ ಬಂದಿದೆ. ಎಷ್ಟೋ ವೇಳೆ ಸಭೆಗಳಲ್ಲಿ ಸದಸ್ಯರು ತೋರುತ್ತಿದ್ದ ಅವಹೇಳನ, ಸೃಷ್ಟಿಸುತ್ತಿದ್ದ ಬಿಕ್ಕಟ್ಟುಗಳನ್ನು ತಮ್ಮ ತಾಳ್ಮೆ ಹಾಗೂ ಮಾತುಗಾರಿಕೆಯಿಂದ ತಿಳಿಗೊಳಿಸುತ್ತಿದ್ದ ಕೆ. ಎಲ್. ನಂಜಪ್ಪನವರ ಆಡಳಿತ ವಿಚಕ್ಷಣತೆ ಒಮ್ಮೊಮ್ಮೆ ಇಂದಿರಾಗಾಂಧಿಯವರ ಮೆಚ್ಚುಗೆಗೂ ಪಾತ್ರವಾಗುತ್ತಿತ್ತು.

೧೨ ವರ್ಷಗಳಷ್ಟು ದೀರ್ಘಕಾಲ ಸಂಯುಕ್ತ ಸಂಸ್ಥಾನದ ಸಣ್ಣ ಕೈಗಾರಿಕಾ ಉನ್ನತ ಸಲಹೆಗಾರರಾಗಿ ಕೆ. ಎಲ್. ನಂಜಪ್ಪನವರು ಸಲ್ಲಿಸಿದ ಸೇವೆ ಉಲ್ಲೇಖನಾರ್ಹ. ಅವರು ತಮ್ಮ ಪ್ರತಿಷ್ಠಿತ ಹುದ್ದೆಯಿಂದ ಕರ್ನಾಟಕಕ್ಕೆ ಘನತೆ ತಂದರು. ಅವರು ಭೇಟಿಮಾಡಿದ ದೇಶಗಳೆಲ್ಲವೂ ಅಭಿವೃದ್ಧಿಪರ ರಾಷ್ಟ್ರಗಳು. ಅಲ್ಲಿ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಯೋಜನೆಗಳನ್ನು ರೂಪಿಸಿದ ತಮ್ಮ ಮುಂದಾಳತ್ವದಲ್ಲಿ ಅದನ್ನು ಜಾರಿಗೆ ತಂದ ಕೀರ್ತಿ ಕೆ. ಎಲ್. ನಂಜಪ್ಪನವರದು. ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ವಿಮಾನದಲ್ಲಿ ಹಾರುತ್ತ ಸಣ್ಣ ಕೈಗಾರಿಕಾಭಿವೃದ್ಧಿಯ ಮಂತ್ರ ಜಪಿಸುತ್ತಾ ಸಾಗಿದ ಅವರ ಅಲೆಮಾರಿ ಬದುಕು ಹಾಗೂ ವ್ಯಕ್ತಿಚಿತ್ರ ಆತ್ಮಕಥೆಯಲ್ಲಿ ಮರೆಯಲಾಗದ ಭಾಗ.

ಕೆ. ಎಲ್. ನಂಜಪ್ಪನವರ ೪೬ ವರ್ಷಗಳ ಸ್ಮರಣೀಯ ಸೇವೆಯನ್ನು ಮೆಚ್ಚಿಕೊಂಡಿದ್ದ ರಾಷ್ಟ್ರಪತಿ ವಿ. ವಿ. ಗಿರಿ ಅವರು ನಂಜಪ್ಪನವರಿಗೆ 'ಪದ್ಮಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿದರು. ಎಂಥ ಗಂಭೀರ ಸನ್ನಿವೇಶವನ್ನೂ ತಮ್ಮ ಮಾತಿನ ಚಾಲಾಕಿತನದಿಂದ ನಿಭಾಯಿಸುತ್ತಿದ್ದ ಅವರ ತಾಳ್ಮೆಯನ್ನು ಎಲ್ಲರೂ ಮೆಚ್ಚಿಕೊಂಡಿದ್ದರು. ಅವರ ಆತ್ಮಕಥೆ ನೆನಪಿನ ಒಂದು ಅದ್ಭುತ ಚಿತ್ರಶಾಲೆ. ಒಂದು ತತ್ವಕ್ಕಾಗಿ, ಆದರ್ಶಕ್ಕಾಗಿ ಸಣ್ಣ ಕೈಗಾರಿಕೆಯಂತಹ ಕನ್ನೆ ನೆಲದಲ್ಲಿ ತಮ್ಮ ಬದುಕಿನ ಮಹತ್ವದ ವರ್ಷಗಳನ್ನು ಮೀಸಲಿಟ್ಟರು. ಅವರು ನಿಜವಾದ ಅರ್ಥದಲ್ಲಿ ಕಾಯಕಯೋಗಿಗಳು.

'ಪದ್ಮಶ್ರೀ' ಕೆ. ಎಲ್. ನಂಜಪ್ಪನವರ ಹೆಸರು ಕರ್ನಾಟಕದ ಜನತೆಗೆ ಎಲ್ಲ ಹೆಸರುಗಳಂತೆ ಒಂದು ಹೆಸರು. ಅವರು ತಮ್ಮ ಆತ್ಮಕಥೆ ಬರೆಯದೆ ಹೋಗಿದ್ದರೆ, ಪ್ರಕಟವಾಗದೆ ಹೋಗಿದ್ದರೆ ಕರ್ನಾಟಕ ಹೆಮ್ಮೆಪಡಬಹುದಾದಂತಹ ವ್ಯಕ್ತಿಯೊಬ್ಬರು ನೆನಪಿನಿಂದ ಮಾಸಿಹೋಗುತ್ತಿದ್ದರು, ಕಾಲದೊಂದಿಗೆ ಕಳೆದುಹೋಗುತ್ತಿದ್ದರು. ಈ ಆತ್ಮಕಥೆಯಿಂದಾಗಿ ಕೆ. ಎಲ್. ನಂಜಪ್ಪನವರು ಅಕ್ಷರಗಳಲ್ಲಿ ಜೀವಂತವಾಗಿ ಉಳಿದಿರುವರು.

ಅನುವಾದ ಒಂದು ಮರುಸೃಷ್ಟಿ ಎಂಬ ಮಾತಿದೆ. ಈ ಆತ್ಮಕಥೆಗೆ ಈ ಮಾತು ಅನ್ವರ್ಥಕವಾಗಿದೆ. ಡಾ॥ ಎಸ್. ವಿದ್ಯಾಶಂಕರ ಅವರು ಇಂಗ್ಲಿಷ್ ಮೂಲದ ಆತ್ಮಕಥೆಯನ್ನು ಸೊಗಸಾಗಿ ಪರಿಷ್ಕರಿಸಿ ಅನುವಾದಿಸಿರುವರು. ಹಲವು ವರ್ಷ ಅಧ್ಯಯನ-ಅಧ್ಯಾಪನ-ಸಂಶೋಧನಗಳಲ್ಲಿ ತೊಡಗಿಕೊಂಡ ಅವರು ಈ ಆತ್ಮಕಥೆಗೆ ಸಾಹಿತ್ಯದ ಸ್ಪರ್ಶ ಕೊಟ್ಟಿರುವರು. ಎಲ್ಲೂ ನೀರಸವೆನ್ನಿಸಿಕೊಳ್ಳದೆ ಓದಿಸಿಕೊಂಡು ಹೋಗುವ ಕಾಂತಗುಣವನ್ನು ಈ ಆತ್ಮಕಥೆಯ ಅನುವಾದ ಪಡೆದಿದೆ. ಸೊಗಸಾದ ಮುದ್ರಣ ವಿನ್ಯಾಸ, ವ್ಯಕ್ತಿತ್ವದ ಘನತೆಯನ್ನು ಎತ್ತಿಹೇಳುವ ಕಪ್ಪು / ಬಿಳುಪು ಚಿತ್ರ ಸಂಯೋಜನೆ, ಆಕರ್ಷಕ ನಿರೂಪಣೆ. ಈ ಆತ್ಮಕಥೆ ಸಹೃದಯರ ಓದಿನಲ್ಲಿ ಚಿರಕಾಲ ಉಳಿಯುತ್ತವೆ.

**ಪ್ರೊ॥ ಆರ್. ರಾಚಪ್ಪ**
ವಿಶ್ರಾಂತ ಪ್ರಾಂಶುಪಾಲರು, 'ರಜತಗಿರಿ', ೨ನೇ 'ಬಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪

# ಸಾಮಾಜಿಕ ಪರಿವರ್ತನೆಯಲ್ಲಿ ಪತ್ರಿಕೆಗಳು ಮತ್ತು ಡಾ॥ ಅಂಬೇಡ್ಕರ್

ಜ. ಹೊ. ನಾರಾಯಣಸ್ವಾಮಿ

**ಭಾರತ ಸ್ವಾತಂತ್ರ್ಯಗಳಿಸಿ ೬೫ ಸಂವತ್ಸರಗಳು ಸಂದರೂ ಇಂದಿಗೂ ಅರ್ಧದಷ್ಟು ಜನ ಅನಕ್ಷರಸ್ಥರಾಗಿಯೆ ಉಳಿದಿದ್ದಾರೆ. ಸರಿಯಾಗಿ ಹೇಳುವುದಾದರೆ ಎಲ್ಲ ಆಳುವ ಪಕ್ಷಗಳೂ, ಅದರೊಟ್ಟಿಗೆ ಕಾರ್ಯಾಂಗವೂ ಕೈಜೋಡಿಸಿ ಆ ಜನವಿಭಾಗವನ್ನು ಅನಕ್ಷರರನ್ನಾಗಿಯೇ ಉಳಿಸಿಕೊಂಡು ಬರುತ್ತಿವೆ. ನೀಡುತ್ತಿರುವ ಶಿಕ್ಷಣವೂ ಹೃದಯವನ್ನು ಅರಳಿಸುವ ನೈತಿಕ ಮೌಲ್ಯಗಳನ್ನು ಗೌಣವಾಗಿಸಿ ಮಿದುಳಿಗೆ ಮಾಹಿತಿಯನ್ನು ತುಂಬುವುದಕ್ಕಷ್ಟೆ ಸೀಮಿತವಾಗಿವೆ. ಇದರಿಂದ ವೃತ್ತಪತ್ರಿಕೆಗಳೂ ಹೊರತಾಗಿಲ್ಲ. ಹೀಗಾಗಿ ಒಂದು ಕಡೆ ಅನಕ್ಷರಸ್ಥ ಸಮೂಹ ಬೆವರು ಬಸಿದು ಭಾರತವನ್ನು ಕಟ್ಟುತ್ತಿದ್ದರೆ ಮತ್ತೊಂದು ಕಡೆ ಅಕ್ಷರಸ್ಥರು ಭ್ರಷ್ಟಾಚಾರದಲ್ಲಿ ನಿರತರಾಗಿ ಭಾರತವನ್ನು ಪರೋಕ್ಷವಾಗಿ ಅಸ್ವತಂತ್ರಗೊಳಿಸುತ್ತಿದ್ದಾರೆ. ಹಣವನ್ನೆ ಆತ್ಮವಾಗಿಸಿಕೊಂಡಿರುವ ಪತ್ರಿಕಾರಂಗ ಹಾಗೂ ಮಾಧ್ಯಮಗಳು ಜಾಹೀರಾತಿನ ಹುಚ್ಚು ಹೊಳೆಯಲ್ಲಿ ಕೊಚ್ಚಿಹೋಗುತ್ತಿವೆ. ಬಂಡವಾಳಶಾಹಿಗಳ ಬಲೆಗೆ ಬಿದ್ದು ಜನಸಾಮಾನ್ಯರು ದಿನನಿತ್ಯ ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳಿಗೆ ಬೆನ್ನು ಮಾಡಿವೆ.**

ಭಾರತದ ಸಂವಿಧಾನದಲ್ಲಿ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳು ಅಧಿಕೃತವಾಗಿ ಘೋಷಿಸಲ್ಪಟ್ಟಿವೆ. ಅಘೋಷಿತವಾಗಿದ್ದರೂ ಪತ್ರಿಕಾರಂಗ ನಾಲ್ಕನೆಯ ಪ್ರಮುಖ ಸ್ಥಾನವನ್ನಲಂಕರಿಸಿದೆ. ಹಾಗಾಗಿ ಘೋಷಿಸಲ್ಪಟ್ಟಿರುವ ಮೂರು ಅಂಗಗಳಿಗಿಂತಲೂ ಸಾಮಾಜಿಕ ಪರಿವರ್ತನೆಯಲ್ಲಿ ಅಘೋಷಿತ ಪತ್ರಿಕಾರಂಗಕ್ಕೆ ಹೆಚ್ಚಿನ ಹೊಣೆಗಾರಿಕೆ ಇದೆ.

ಪತ್ರಿಕಾರಂಗ ಖಾಸಗಿ ಉದ್ಯಮ. ಆದ್ದರಿಂದ ಅದಕ್ಕೆ ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ಮುಕ್ತ ಅವಕಾಶವಿದೆ. ಹಾಗಾಗಿ ಶತಶತಮಾನಗಳಿಂದ ಅನಕ್ಷರತೆ, ಅಜ್ಞಾನ, ಅಸ್ಪೃಶ್ಯತೆ ಮೂಢನಂಬಿಕೆಗಳಿಂದ ನರಳುತ್ತಿರುವ ಬಹು ಸಂಖ್ಯಾತ ಭಾರತೀಯರಿಗೆ ಬೆಳಕಾಗುವ ಅತ್ಯುನ್ನತ ಅವಕಾಶ ಪತ್ರಿಕಾರಂಗಕ್ಕಿದೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಇತರ ಅಂಗಗಳಂತೆ ಪತ್ರಿಕಾರಂಗವೂ ತನ್ನ ಬದ್ಧತೆಯಿಂದ ದೂರಸರಿಯುತ್ತಿರುವುದು ವಿಷಾದನೀಯ.

ಪತ್ರಿಕಾರಂಗದ ಮೊದಲ ಆದ್ಯತೆಯಿರುವುದು ಅದು ಹೂಡಿರುವ ಬಂಡವಾಳದ ಭದ್ರತೆಗಾಗಿ ಹಾಗೂ ಅದನ್ನು ವೃದ್ಧಿಸುವ ಕಡೆಗೆ. ಅದು ತಪ್ಪಲ್ಲ. ಆದರೆ ಆರ್ಥಿಕವಾಗಿ ಭದ್ರನೆಲೆಯಲ್ಲಿ ನಿಂತಮೇಲೂ ಸಾಮಾಜಿಕ ಬದ್ಧತೆಯನ್ನು ಗೌಣವಾಗಿಸಿಕೊಂಡು ಹಣಕ್ಕೆ ಓತು ಜೋತುಬೀಳುವ ದೌರ್ಬಲ್ಯಕ್ಕೆ ಪತ್ರಿಕಾರಂಗ ಬಲಿಯಾಗಿದೆ. ಅವು ಎಂಥಾ ಪಾತಾಳಕ್ಕಿಳಿದಿವೆ ಎಂದರೆ ಇಡೀ ಮುಖಪುಟವನ್ನು ಜಾಹೀರಾತಿಗೆ ಮಾರಿಕೊಂಡು ಮುಖಹೀನರಾಗುವಷ್ಟರ ಮಟ್ಟಿಗೆ! ಹಣದ ಅಜೀರ್ಣತೆಯಿಂದ ನರಳುತ್ತಾ ನಿಧಾನವಾಗಿ ಸಮಾಜವನ್ನು ಸಾವಿನ ದವಡೆಗೆ ಸಾಗಿಸುವಲ್ಲಿ ತಲ್ಲೀನವಾಗಿವೆ. ಇದನ್ನು ನೋಡಿದಾಗ :

*ಸ್ವಾತಂತ್ರ್ಯಾನಂತರ ಕಾಣಿಸಿಕೊಂಡ ಭಾರತ ಒಂದು ವಿಚಿತ್ರ ಭಾರತ.*

*ಗುಲಾಮಗಿರಿಯಲ್ಲಿದ್ದಾಗ ಹೊರಗೆ ಕತ್ತಲು ಕವಿದಿತ್ತು. ಆದರೆ ಒಳಗೆ ಬೆಳಕಿತ್ತು. ಈಗ ಹೊರಗೆ ಸ್ವಾತಂತ್ರ್ಯದ ಬೆಳಕಿದೆ.*

*ಆದರೆ ಒಳಗೆ ಕತ್ತಲೆ ಕವಿದಿದೆ.*

– ಎಂದ ಡಾ॥ ಲೋಹಿಯಾ ಅವರ ಮಾತು ಸತ್ಯಸ್ಯಸತ್ಯವಾಗಿ ಕಣ್ಣ ಮುಂದೆ ಗೋಚರಿಸುತ್ತಿದೆ. ಅವರು ಅವರ ಜೀವಿತಾವಧಿಯಲ್ಲಿ ನಡೆಸಿದ 'ಮ್ಯಾನ್‌ಕೈಂಡ್' ಎಂಬ ನಿಯತಕಾಲಿಕ ಸತ್ವವೆ ಮೈವೆತ್ತು ಬರುತ್ತಿತ್ತು. ಅಂತಹ ಪತ್ರಿಕೆಯನ್ನು ಇಂದಿಗೂ ಕಂಡಿಲ್ಲ. ಅದು ತನಗೆ ತಾನೇ ಸಾಟಿ. ಸದ್ಯದ ಪರಿಸ್ಥಿತಿಯಲ್ಲಿ ಬರುತ್ತಿರುವ ಪತ್ರಿಕೆಗಳು ಬದಲಾಗದೆ ಈಗ ಇರುವಂತೆ ಮುಂದುವರಿದಿದ್ದೇ ಆದಲ್ಲಿ ಮುಂಬರುವ ದಶಕಗಳಲ್ಲಿ ಸಾಮಾಜಿಕ 'ಧೀಶಕ್ತಿ'ಯೆ ಉಡುಗಿಹೋಗುವ ಅಪಾಯವನ್ನು ಎದುರಿಸಬೇಕಾಗುತ್ತದೆ.

ಜೋಸೆಫ್ ವಾರ್ಡ್, ''ಪತ್ರಿಕಾರಂಗ ಅತ್ಯಂತ ಗಂಭೀರವಾದ ಪವಿತ್ರ ವೃತ್ತಿ. ಇಲ್ಲಿ ಕಿಂಚಿತ್ ಭಯವಾಗಲಿ, ಭ್ರಷ್ಟಾಚಾರವಾಗಲಿ ಅಥವಾ ಪಕ್ಷಪಾತವಾಗಲಿ ಇಣುಕದಂತೆ ಇರಬೇಕು. ಅದು ಸೀಜರನ ಹೆಂಡತಿಯಂತೆ ಸಂಶಯಾತೀತವಾಗಿರಬೇಕು. ಯಾವ ಒಂದು ತಪ್ಪು ಆಪ್ಪದಂತೆ ಒಪ್ಪದಿಂದಿರಬೇಕು,'' ಎಂಬ ಮಹತ್ವದ ಮಾತನ್ನು ಹೇಳಿದ್ದಾನೆ. ಆದರೆ ಇಂದು ಆಗುತ್ತಿರುವುದೇನು? ವೃತ್ತ ಪತ್ರಿಕೆಗಳಲ್ಲಿ ಬರುವ ಬಹಳಷ್ಟು ವಿಷಯಗಳು ನಂಬಿಕೆಗೆ ದೂರವಾಗಿರುತ್ತವೆ. ಪುಟ ಪುಟಗಳಲ್ಲಿ ಸುಳ್ಳು ಜೊಳ್ಳುಗಳೆ ಬೊಬ್ಬೆ ಹಾಕುತ್ತವೆ.



ಪತ್ರಿಕೆಯನ್ನು ಹೊಕ್ಕ ತಕ್ಷಣ ಸತ್ಯವೂ ಸತ್ವಹೀನವಾಗಿಬಿಡುವಷ್ಟು ಶಿಥಿಲವಾಗಿಬಿಟ್ಟಿವೆ.

ಪತ್ರಿಕಾರಂಗಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಅದು ಜನರಿಂದ ಜನರಿಗಾಗಿ ಎನ್ನುವ ನೆಲೆಯದ್ದು. ಜೋಸೆಫ್ ವಾರ್ಡ್, ''ವೃತ್ತಪತ್ರಿಕೆ ಎಂಬುದು ನಡೆಸುವವನದಾಗಲಿ, ಮೂಲ ಮಾಲೀಕನದಾಗಲಿ ಅಲ್ಲ, ಅದು ಸಾರ್ವಜನಿಕರಿಗೆ, ಜನತೆಗೆ ಸಂಬಂಧಪಟ್ಟದ್ದು. ಅವರ ಧ್ವನಿ, ಅವರ ರಕ್ಷಣೆ, ಅವರ ನಾಯಕ ಈ ಪತ್ರಿಕೆ'' ಎಂದಿದ್ದಾನೆ. ನಿಜ, ಏಕೆಂದರೆ, ''ಅಮೆರಿಕದ ಯಾವ ಪತ್ರಿಕೆಯೂ ತನ್ನ ಹಿತಾಸಕ್ತಿಗೆ ಹೊರತಾದುದನ್ನು ಪ್ರಕಟಿಸುವುದಿಲ್ಲ'' ಎಂದು ಅಂದೆ ಜಾರ್ಜ್ ಬರ್ನಾರ್ಡ್ ಷಾ ಉದ್ಗರಿಸಿಬಿಟ್ಟಿದ್ದಾನೆ. ಅವನ ಈ ಮಹತ್ವದ ಮಾತು ಕೇವಲ ಅಮೆರಿಕ ಪತ್ರಿಕೆಗಳಿಗಷ್ಟೆ ಸೀಮಿತವಲ್ಲ ಎನ್ನುವ ಸತ್ಯವನ್ನು ಬಚ್ಚಿಡಲಾದೀತೆ ?

ತೊಂಬತ್ತರ ದಶಕದಲ್ಲಿ ಹಾಸನ ಜಿಲ್ಲಾ ಭಾರತ ಜ್ಞಾನ-ವಿಜ್ಞಾನ ಸಮಿತಿ 'ಅಕ್ಷರ-ಆರೋಗ್ಯ'ಕ್ಕಾಗಿ ೩೬೫ ಗ್ರಾಮೀಣ ಪ್ರದೇಶಗಳಲ್ಲಿ ಬೀದಿನಾಟಕ ಆಡಿಸಿತು. ನಾನು ಅದರ ಅಧ್ಯಕ್ಷನಾಗಿದ್ದೆ. ಆಗ ನಡೆಯುತ್ತಿದ್ದ ಸಂವಾದ ಕಾರ್ಯಕ್ರಮದಲ್ಲಿ ಒಬ್ಬ ಅನಕ್ಷರಸ್ಥ ಕೇಳಿದ ಪ್ರಶ್ನೆ ಇಡೀ ರಾಷ್ಟ್ರದ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿತ್ತು. ನಿಸ್ಸಂಕೋಚವಾಗಿ ಆತ ಕೇಳಿದ ಪ್ರಶ್ನೆ ಎಂದರೆ, ''ಸ್ವಾಮಿ, ಅಕ್ಷರ ಕಲೀರಿ ಅಂತಿದೀರಿ. ಒಳ್ಳೇದು. ಹಂಗಾದ್ರೆ ನಿಮ್ಮ ಎದೆ ಮುಟ್ಕಂಡೇಳಿ, ಈಗ ಅನ್ಯಾಯ ಆಗ್ತಿರೋದು ಅಕ್ಷರ ಕಲಿತವರಿಂದಲೋ ಕಲೀದೆ ಇರೋವ್ರಿಂದಲೋ ?'' ಉಸಿರುಗಟ್ಟಿಸುವ ಪ್ರಶ್ನೆ! ಗಂಭೀರವಾಗಿ ಪರಿಗಣಿಸಬೇಕು. ''ಯಾವ ಮನುಷ್ಯ ವೃತ್ತಪತ್ರಿಕೆಗಳನ್ನು ನೋಡುವುದಿಲ್ಲವೋ ಆತ ಪತ್ರಿಕೆ ಓದಿದವನಿಗಿಂತ ಹೆಚ್ಚು ತಿಳಿದಿರುತ್ತಾನೆ. ತಪ್ಪು ಹಾಗೂ ಸುಳ್ಳು ಮಾಹಿತಿಗಳಿಂದ ಮನಸ್ಸನ್ನು ತುಂಬಿಕೊಂಡಿರುವವನಿಗಿಂತ ಏನನ್ನೂ ತಿಳಿದುಕೊಳ್ಳದಿರುವವನು ಸತ್ಯಕ್ಕೆ ಹತ್ತಿರವಾಗಿರುತ್ತಾನೆ'' ಎಂದು ಜಾಫರ್‌ಸನ್ ಹೇಳಿರುವುದು ಈ ಹಿನ್ನೆಲೆಯಿಂದಲೇ ಎಂದು ಕಾಣುತ್ತದೆ. ಇಂದಿನ ಶಿಕ್ಷಣ ಹಾಗೂ ಅಕ್ಷರ ಕಲಿಕೆಯ ರೈಲು ಅಸತ್ಯದ ಹಳಿಗಳ ಮೇಲೆ ಹರಿದಾಡುತ್ತಾ ಇಡೀ ವಾತಾವರಣವನ್ನು ಮಲಿನಗೊಳಿಸುತ್ತಿವೆ. ಪತ್ರಿಕಾರಂಗ ಅದರ ಅಶಕ್ತ ಕೂಸು, ಅಷ್ಟೆ.

'ಸಾಮಾಜಿಕ ಪರಿವರ್ತನೆಯಲ್ಲಿ ಪತ್ರಿಕೆಗಳು ಮತ್ತು ಡಾ|| ಅಂಬೇಡ್ಕರ್' ಎಂಬ ನನ್ನ ಪ್ರಬಂಧದ ವಿಷಯ ಗಂಭೀರವಾದದ್ದು. ಸೃಷ್ಟಿ ಸೃಷ್ಟಿಸಿರುವ ಜೀವಜಾಲ ದೊಡ್ಡದು. ಪ್ರತಿಯೊಂದು ಪ್ರಾಣಿವರ್ಗವೂ ಒಂದು ಗುಂಪಾಗಿ ಹೊಂದಾಣಿಕೆಯಿಂದ ಅರಿತು ನಿಸರ್ಗದೊಂದಿಗೆ ಬೆರೆತು ಬದುಕುತ್ತಿದೆ. ಅವುಗಳಲ್ಲಿ ಭಿನ್ನಭಾವಕ್ಕೆ, ತರತಮ ಭಾವಕ್ಕೆ ಎಳ್ಳಷ್ಟೂ ಎಡೆಯಿಲ್ಲ. ಆದರೆ ಮನುಷ್ಯ ಪ್ರಾಣಿ ? ಜಾತಿ, ಮತ, ಕುಲ, ಗೋತ್ರ, ವರ್ಗ, ವರ್ಣಗಳಾಗಿ ಪ್ರಪಂಚದಾದ್ಯಂತ ಹರಿದು ಹಂಚಿಹೋಗಿದ್ದಾನೆ. ಭಾರತದಲ್ಲಿ ಇವುಗಳ ಬೇರುಗಳು ಬಲಿಷ್ಠವಾಗಿವೆ. ವಿಚ್ಛಿದ್ರಗೊಂಡಿರುವ ಇಲ್ಲಿನ ಮನಸ್ಸು ತನ್ನ ಸ್ವ-ಹಿತಾಸಕ್ತಿಗಾಗಿ ರಾಷ್ಟ್ರವನ್ನು ಬೇಕಾದರೂ ಬಲಿಗೊಡುವಷ್ಟು ಹೀನವಾದದ್ದು.

ಈ ರೋಗದ ಬೇರನ್ನು ಕಿತ್ತು ಸಾರ್ಥಕ ಬದುಕಿಗೆ ಬೆಳಕಿನ ದಾರಿ ತೋರಿದ ಮಹನೀಯರು ಆಗಿಹೋಗಿದ್ದಾರೆ. ಭಾರತದ ಹುಸಿ ಸಂಸ್ಕೃತಿಯ ಕೋಟೆಯನ್ನು ಭೇದಿಸಿ ಸತ್ಯದ ಹೆಬ್ಬಾಗಿಲನ್ನು ನಿರ್ಭೀತಿಯಿಂದ ತೆರೆದ ಸತ್ಯದರ್ಶಿಗಳವರು. ಇಷ್ಟಾದರೂ ಭಾರತೀಯ ಮನಸ್ಸು ಇಂದಿಗೂ ಪುರೋಹಿತಶಾಹಿಯ ಕೆಸರುಸುಬಿನಲ್ಲಿ ಸಿಲುಕಿ ಭ್ರಷ್ಟಾಚಾರದ ಬಲೆಯಲ್ಲಿ ಬಿದ್ದು, ಗುಲಾಮೀಯವಾಗಿ ನರಳುತ್ತಿದೆ. ಶೋಷಣೆ ಮಾಡುತ್ತಲೆ ಶೋಷಣೆಗೆ ಒಳಗಾಗಿ ಒಳಗೊಳಗೇ ವಿಲಿವಿಲಿ ಒದ್ದಾಡುತ್ತಿದೆ. ಮೇಲೆ ಮೇಲೆ ನಾಗರಿಕವಾಗಿ ಕಾಣಿಸಿಕೊಂಡು ಅಂತರಂಗದಲ್ಲಿ ಅನಾಗರಿಕವಾಗಿಯೆ ಉಳಿದು ಆತ್ಮವಂಚನೆಯ ಆಗರವಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಪತ್ರಿಕೆಗಳು ಪ್ರಾತಃಸ್ಮರಣೀಯ ಕಾರ್ಯವನ್ನು ಮಾಡಿವೆ. ಕಣ್ಣಿದ್ದೂ ಕುರುಡರಾಗಿದ್ದ, ಕಿವಿಯಿದ್ದೂ ಕಿವುಡರಾಗಿದ್ದ, ಮಾತಿದ್ದೂ ಮೂಕರಾಗಿದ್ದ ಭಾರತೀಯರನ್ನು ಬಡಿದೆಚ್ಚರಿಸಿದ ಕೀರ್ತಿ ಪತ್ರಿಕೆಗಳಿಗೆ ಸಲ್ಲುತ್ತದೆ. ವಿವೇಕಾನಂದರ 'ಪ್ರಭುದ್ಧ ಭಾರತ'ವಾಗಲಿ, ಗಾಂಧೀಜಿಯವರ 'ಹರಿಜನ' ಪತ್ರಿಕೆಯಾಗಲೀ, ಡಾ|| ಅಂಬೇಡ್ಕರ್ ಅವರ 'ಬಹಿಷ್ಕೃತ ಹಿತಕಾರಿಣಿ ಸಭಾ'ದ ಮೂಲಕವಾಗಲಿ ಹಾಗೂ 'ಮೂಕ ನಾಯಕ', 'ಬಹಿಷ್ಕೃತ ಭಾರತ', 'ಸರಸ್ವತಿ ವಿಲಾಸ' ಮುಂತಾದ ಪತ್ರಿಕೆಗಳ ಮೂಲಕವಾಗಲಿ ಉಂಟುಮಾಡಿದ ಜನಜಾಗೃತಿ ತನ್ಮೂಲಕ ಯತ್ನಿಸಿದ ಸಮಾಜ ಪರಿವರ್ತನೆ ಗಣನೀಯವಾದದ್ದು. ಈ ನಿಟ್ಟಿನಲ್ಲಿ ವಿಶೇಷ ಹಾಗೂ ವಿಶಿಷ್ಟವಾದದ್ದು ಡಾ|| ಅಂಬೇಡ್ಕರ್ ಅವರ ಹೋರಾಟ. ಏಕೆಂದರೆ ಅವರು ಎಚ್ಚರಿಸಿ ಜಾಗೃತಗೊಳಿಸಬೇಕಾಗಿದ್ದ ಸಮಾಜ ನಾಲ್ಕು ವರ್ಣಗಳಿಂದಲೂ ಹೊರಗಿಟ್ಟಿದ್ದ, ಪ್ರಾಣಿಗಳಿಗಿಂತಲೂ ಕೀಳಾಗಿ ಕಾಣುತ್ತಿದ್ದ ಪಂಚಮರನ್ನೂ ಕುರಿತದ್ದಾಗಿತ್ತು.

---

# ಕರ್ನಾಟಕ ನಾಟಕ

**ದೃಶ್ಯ ೧**

ಕೆಸರಿನಲ್ಲಿ ಕಮಲ ಹುಟ್ಟುತ್ತೆ,
ಇದು ಸಹಜ ನೈಸರ್ಗಿಕ ಕ್ರಿಯೆ
ಆದರಿಲ್ಲಿ ಕಮಲದ ಮುಖವೆಲ್ಲಾ ಕೆಸರು
ಕಮಲ ಎಂಬುದಿಲ್ಲಿ ಕೇವಲ ಹೆಸರು

ಇರುವುದೊಂದೇ ಕುರ್ಚಿ
ಈರ್ವರ ಕೈಯಲ್ಲಿ ಭರ್ಚಿ
ಯಾರು ಇರಿವರೋ ಕೇಶವನೇ ಬಲ್ಲ
ಸಂತೆಯಲ್ಲಿ ಇಳಿದು ಬಂದೀತು ದಿಲ್ಲಿ

ಕೇಶವನ ಕೃಪೆ ಬೇಕಿಲ್ಲಿ
ಜೊತೆಗೆ ಹರಸಬೇಕು ದಿಲ್ಲಿ
ಅನಂತನ ಮಹಿಮೆ ಅಪರಂಪಾರ
ಇಬ್ಬರಿಗೂ ಇದು ಮುಳ್ಳಿನ ದಾರಿ

**ದೃಶ್ಯ ೨**

ಹಸ್ತವೋ, ಐದು ಬೆರಳು
ಒಂದು ಗೂಡೇ ಇಲ್ಲ
ಮುಷ್ಟಿಯಾಗುವದೇ ಇಲ್ಲ,
ಯುದ್ಧ ಮಾಡೀತೆ ? ಅಮ್ಮನೇ ಬಲ್ಲ

ಪ್ರತಿ ಪಂಚಾಧೀಶರಿಗೊಂದೇ ಗುರಿ
ತನಗಾಗಿಯೇ ಸಿಗಬೇಕು ನವಿಲಗರಿ
ಪಲಕ್ಕಿ ಹೊರುವವರೇ ಇಲ್ಲ, ದೇವರುಗಳೇ ಎಲ್ಲ
ಈಗರ್ದಿಗಮ್ಮತ್ತು ಗೊತ್ತು ಸೌಧದ ಕಂಬಗಳಿಗೆಲ್ಲಾ

**ದೃಶ್ಯ ೩**

ಹುಲ್ಲಿನ ಹೊರೆ ಹೊತ್ತ ನಾರಿ
ಅಪ್ಪ ಮಕ್ಕಳ ಮಾತ್ರ ವರಿಸಿದ ನಾರಿ
ಪದುಮನಗರನೆಲ್ಲಾ ನುಂಗಿದ ಮಾರಿ
ಕುಮಾರ ಬಂದ ಬಿಡಿ ದಾರಿ

ಕಮಲದ ಜೊತೆ ಸಾಧ್ಯವಿಲ್ಲ ಸಂಸಾರ
ನಾ ಮಾಡಿಕೊಂಬೆ ಹರಾಕಿರಿ ಎಂದರು ದೇವರು
ಕುಮಾರ ಪಟ್ಟವೇರಿದಾಗ ಅದೊಂದು ಸುಂದರ ತೇರು
ಕೊನೆಗೊಂದು ದಿನ ವಿಚ್ಛೇದನಗೊಂಡ ಸಂಸಾರ



**ದೃಶ್ಯ ೪**

ಗೆಳೆಯ ಕಾಳ ತುಂಬಿದೀ ಕರುನಾಡಿನಲ್ಲಿ
ಹಗಲುದೊಂದಿಯ ಹಿಡಿದು ಹುಡುಕು,
ಇನ್ನೊಬ್ಬ ಎಸ್ಸೆನ್ ಮತ್ತೊಬ್ಬ ಮಂಜಪ್ಪ
ನಡಯಲೀ ನಿರಂತರ ಕರ್ನಾಟಕ ನಾಟಕ.

**ಡಾ|| ಹೆಚ್. ಚಂದ್ರಶೇಖರ**
'ಸಂಗಮ', ಎಮ್.ಐ.ಜಿ.-೭೭, ೬ನೇ ಕ್ರಾಸ್, ೬ನೇ ಮೇನ್, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

ಹಾಗಾಗಿ ಅವರು ಈ ದೇಶದ ಇತಿಹಾಸವನ್ನ, ಇಲ್ಲಿಯ ಸಂಸ್ಕೃತಿಯ ತಾಯಿಬೇರನ್ನ ಶೋಧಿಸಿ ಸತ್ಯವನ್ನ ಅಭಿವ್ಯಕ್ತಿಸುವ ಗುರುತರ ಹೊಣೆಯನ್ನ ತಮ್ಮ ಮೇಲೆ ತಾವೇ ಹೇರಿಕೊಂಡು ಹಗಲು ರಾತ್ರಿಗಳೆನ್ನದೆ ಕಣ್ಣಿಗೆ ಎಣ್ಣೆ ಹಾಕಿಕೊಂಡು ಅದನ್ನು ಸಾಧಿಸಿ ಯಶಸ್ವಿಯಾದವರು. ಅಂತಿಮವಾಗಿ ಇಡೀ ಮನುಕುಲ ಒಂದು ಎನ್ನುವ ಪವಿತ್ರ ನೆಲೆಯಲ್ಲಿ ನಿಂತು ಬುದ್ಧನ ಬೆಳಕಾದವರು.

ಅಂಬೇಡ್ಕರ್ ಅವರ ಹಾದಿಯಲ್ಲಿ ಕರ್ನಾಟಕದ ಕೆಲವು ಪತ್ರಿಕೆಗಳು ಕಾರ್ಯನಿರತವಾಗಿ ಸಾಮಾಜಿಕ ಪರಿವರ್ತನೆಗಾಗಿ ತುಡಿದು ದುಡಿಯುತ್ತಿವೆ. ಈ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗದೊಂದಿಗೆ ಕೈಜೋಡಿಸಿರುವ ವ್ಯವಸ್ಥಾಪಕ ಸಂಪಾದಕರಾಗಿರುವ ಅನಿಲ ಸಿ. ಹೊಸಮನಿಯವರ 'ಬಹುಜನ ನಾಯಕ' ದಿನಪತ್ರಿಕೆಯೂ ಒಂದು ಎಂದು ಹೇಳಲು ಹೆಮ್ಮೆಯಾಗುತ್ತದೆ. ಅದು ತನ್ನ ಎರಡನೆ ಪುಟವನ್ನು ಸಾಮಾಜಿಕ ಪರಿವರ್ತನೆಗೆ ಪೂರಕವಾದ ವೈಚಾರಿಕ ಬರಹಗಳಿಗೆ ಮೀಸಲಿಟ್ಟಿದೆ. ಇಂಥ ಮೌಲಿಕ ಪತ್ರಿಕೆಗಳು ಇಂದು ಎಂದರೆ ಬೆಳಕಿಗೆ ಬೆನ್ನುಮಾಡಿ ಕತ್ತಲೆಯಲ್ಲೇ ಕರಗುತ್ತಿರುವ ಸಮಾಜಕ್ಕೆ ಅಗಣಿತವಾಗಿಬೇಕಾಗಿವೆ. ''ಮಹಾತ್ಮರು ಹುಟ್ಟುತ್ತಾರೆ. ಆದರೆ ದಲಿತರು ದಲಿತರಾಗಿಯೆ ಉಳಿದುಹೋಗುತ್ತಿದ್ದಾರೆ. ದಲಿತರ ವಿಮೋಚನೆ ಅವರು ಎಚ್ಚರಗೊಳ್ಳುವುದರಲ್ಲಿಯೇ ಇದೆ. ನಮ್ಮ ಆಚಾರ, ಮಾತು ಶುದ್ಧವಾಗಿರಬೇಕು. ನಮ್ಮ ಹಳೆಯ ಪದ್ಧತಿಗಳನ್ನು ಬಿಡಬೇಕು. ಇತರರು ಕೃಪೆಯಿಟ್ಟು ಕೊಟ್ಟುದನ್ನು ತಿನ್ನುವುದು ಬಿಟ್ಟು ನಮ್ಮನ್ನು ನಾವು ರಕ್ಷಿಸಿಕೊಳ್ಳುವುದನ್ನು ಕಲಿಯಬೇಕು. ತನ್ಮೂಲಕ ನಮ್ಮನ್ನು ನಾವು ಗೌರವಿಸಿಕೊಳ್ಳಬೇಕು. ನಮ್ಮ ಬುದ್ಧಿಯನ್ನು ನಾವು ಬೆಳೆಸಿಕೊಳ್ಳಬೇಕು'' ಎನ್ನುವ ಡಾ|| ಅಂಬೇಡ್ಕರ್ ಅವರ ಎಚ್ಚರಿಕೆಯ ಮಾತುಗಳು ಸಾರ್ವಕಾಲಿಕ ಸತ್ಯ. ವಿವೇಕಾನಂದರೂ ಕೂಡ, ''ನಿಮ್ಮ ಮುಕ್ತಿಯನ್ನು ನೀವೇ ಸಂಪಾದಿಸಿಕೊಳ್ಳಿ. ನಾನು ನಿಮಗೆ ಸಹಾಯ ಮಾಡಲಾರೆ. ಮತ್ತಾರೂ ನಿಮಗೆ ಸಹಾಯ ಮಾಡಲಾರರು. ನಿಮಗೆ ನೀವೇ ಸಹಾಯ ಮಾಡಿಕೊಳ್ಳಬೇಕು'' ಎಂದು ಆತ್ಮಗೌರವ ಹಾಗೂ ಆತ್ಮಶಕ್ತಿಯೆ ಅಂತಿಮ ಎಂಬ ಸತ್ಯ ಸಂದೇಶವನ್ನು ಸಾರಿದ್ದಾರೆ.

ಡಾ|| ಅಂಬೇಡ್ಕರ್ ಅವರ ಹೃದಯ ವೈಶಾಲ್ಯತೆಯನ್ನು ಸಂಕುಚಿತ ಭಾರತೀಯ ಮನಸ್ಸು ಅರಿತುಕೊಳ್ಳಲಿಲ್ಲ. ಇಲ್ಲಿ ಜನಿಸಿದ ದೀನದಲಿತರ ಪರವಾಗಿ ಹೋರಾಡಿದ ಎಲ್ಲ ಮಹಾತ್ಮರೂ ಅವಗಣನೆಗೆ ಒಳಗಾಗಿದ್ದಾರೆ. ಡಾ|| ಅಂಬೇಡ್ಕರ್ ಹೇಳುತ್ತಾರೆ :

*ಹಿಂದೂಗಳು ನನ್ನನ್ನು ಶತ್ರುವಾಗಿ ಕಾಣುವುದು ಅವಿವೇಕ. ಅವರನ್ನು ನಾನು ಸದಾ ಪ್ರೀತಿಸುತ್ತಲೇ ಇರುವೆ. ಭಾರತೀಯ ತತ್ವಶಾಸ್ತ್ರವನ್ನು ಜೀರ್ಣಿಸಿಕೊಂಡಿರುವ ನಾನು ಅವರಲ್ಲಿರುವ ಕೊಳಕನ್ನು ಶುದ್ಧಮಾಡಿ ಪರಿಶುದ್ಧ ಜನಾಂಗವನ್ನಾಗಿ ತಯಾರುಮಾಡಲು, ಅವರ ದುರಾಚಾರಗಳ ವಿರುದ್ಧ ಹೋರಾಟ ನಡೆಸಿರುವೆ. ನನ್ನನ್ನು ಅವರು ತಪ್ಪಾಗಿ ಅರ್ಥಮಾಡಿಕೊಂಡಿರುವರು. ಎಂದಿಗಾದರೂ ನನ್ನ ಮಾರ್ಗವೆ ಸರಿಯಾದುದು ಎಂದು ತಪ್ಪದೆ ತಿಳಿಯುವ ಕಾಲ ಬರುತ್ತದೆ.*

ಅವರ ಈ ನಿರ್ಮಲ ಅಂತಃಕರಣವನ್ನು ಅಪ್ಪಿ ಆಲಂಗಿಸುವ ಅರಿವು ಭಾರತೀಯರಿಗೆ, ಎಷ್ಟು ಬೇಗ ಬರುತ್ತದೋ ಅಷ್ಟೇ ವೇಗದಲ್ಲಿ ಅವರ ಬದುಕಿಗೆ ಬೆಳಕೂ ಹರಿಯುತ್ತದೆ. ಎಲ್ಲ ದೇಶಗಳ ದೊಡ್ಡ ಕಳಂಕವೆಂದರೆ ಅಲ್ಲಿನ ಪುರೋಹಿತಶಾಹಿ. ಭಾರತದಲ್ಲಿ ಆ ಸ್ಥಾನದಲ್ಲಿ 'ಬ್ರಾಹ್ಮಣ್ಯ' ವಿರಾಜಮಾನವಾಗಿದೆ. ಅದನ್ನು ಕುರಿತು ಪೂರ್ಣಚಂದ್ರ ತೇಜಸ್ವಿ, ''ವೈದಿಕ ಸಂಸ್ಕೃತಿ, ಭಾರತಕ್ಕೆ ಹತ್ತಿಕೊಂಡ, ಸದಾ ಅವನತಿಯ ಮತ್ತು ಸೃಷ್ಟಿ ವಿರೋಧಿಯಾದ ಒಂದು ಮುದಿ ಬಂದಳಿಕೆ'' ಎಂದು ಕರೆದಿದ್ದಾರೆ. ಈ ಮುದಿ ಬಂದಳಿಕೆಯ ಅನಿಷ್ಟದ ನಿರ್ಮೂಲನೆಗೆ ವಿವೇಕಾನಂದರು ಹಾಗೂ ಡಾ|| ಅಂಬೇಡ್ಕರರು ಆಮೂಲಾಗ್ರವಾಗಿ ಶ್ರಮಿಸಿದ್ದಾರೆ. ಅವರೀರ್ವರ ಅಧ್ಯಯನದ ಆಳ ಸಾಗರದಷ್ಟಾದರೆ ಅಗಲ ಆಕಾಶದಷ್ಟು. ಅವರೀರ್ವರ ಮಾನವೀಯ ಕಳಕಳಿಯನ್ನ ತುಲಿತಕ್ಕೆ ಒಳಗಾದವರು ಅರಿಯದೆ ಹೋದದ್ದು ದೊಡ್ಡ ದುರಂತ.

ವೇದಕಾಲದಲ್ಲಿ ಚಲನಶೀಲವಾಗಿದ್ದ ಸಮಾಜವನ್ನ ವರ್ಣವ್ಯವಸ್ಥೆಯ ಜಡತೆಗೆ ತಳ್ಳಿದ ಕಳಂಕ ಈ ದೇಶದ ಅನಿಷ್ಟ ಹಾರುವರಿಗೆ ಸಲ್ಲುತ್ತದೆ. ಒಂದು ಜನಾಂಗವಾಗಿ ಭಾರತೀಯರು ಬೆಸೆದುಕೊಳ್ಳಲಾಗದಂತೆ ಛಿದ್ರಗೊಳಿಸಿದ ಪಾಪ ಹೇತುಗಳವರು, ತಮ್ಮ ಸ್ವಾರ್ಥಕ್ಕಾಗಿ ತ್ರಿವರ್ಣದವರಿಗೆ ಮಾತ್ರ ಯಜ್ಞೋಪವೀತದ ಹಕ್ಕನ್ನು ನೀಡಿ ಬಹುಸಂಖ್ಯಾತ ಶೂದ್ರರನ್ನ, ಸ್ತ್ರೀಯರನ್ನು ವಂಚಿಸಿದರು. ಇದಕ್ಕೂ ಕೀಳಾಗಿ ಒಂದು ವರ್ಗದವರನ್ನು ಪಂಚಮರೆಂದು ಕರೆದು ಅವರನ್ನು ಊರಿಂದ ಹೊರಗಿಟ್ಟರು. ಹೀಗೆ ಐದು ಬೆರಳುಗಳೂ ಒಂದಾಗಲು ಆಗದ ಕಾರಣ ಭಾರತೀಯರು ಮುಷ್ಟಿಹೀನರಾಗಿ ಪುಡಿರಾಷ್ಟ್ರಗಳ ಬೇಡಿಗೆ ಬಂದಿಯಾದರು. ಈ ಅನಿಷ್ಟಕ್ಕೆ ಆತ್ಮವಾಗಿದ್ದು 'ಮನುಸ್ಮೃತಿ'. ಮನುಕುಲದ ವಿಷವಾಗಿ ಪರಿಣಮಿಸಿದ್ದ ಅದನ್ನು ಕೆಚ್ಚೆದೆಯಿಂದ ಬಹಿರಂಗವಾಗಿ ಸುಟ್ಟು ಭಾರತಕ್ಕೆ ಸರ್ವಸಮಾನತೆಯ ಸಂವಿಧಾನವನ್ನು ಕೊಟ್ಟ ಕೀರ್ತಿಗೆ ಪಾತ್ರರಾದವರು ಡಾ|| ಅಂಬೇಡ್ಕರ್. ಹಾಗೆ ಬ್ರಾಹ್ಮಣ್ಯದ ಅಂತರಂಗದಲ್ಲಿ ಅವಿತಿರುವ ರಾಕ್ಷಸನನ್ನು ಬಹಿರಂಗಗೊಳಿಸಿದ ವಿವೇಕಾನಂದರು ಹೇಳುತ್ತಾರೆ :

''ನೀಚರೂ ಕುತಂತ್ರಿಗಳೂ ಆದ ಪುರೋಹಿತರು ಎಲ್ಲಾ ವಿಧದ ಮೂಢನಂಬಿಕೆಗಳನ್ನು ವೇದ ಮತ್ತು ಹಿಂದೂ ಧರ್ಮದ ಸಾರ ಎಂದು ಬೋಧಿಸುತ್ತಾರೆ. ಈ ಠಕ್ಕುಗಾರರಾದ ಪುರೋಹಿತರಾಗಲೀ ಅಥವಾ ಅವರ ತಾತ ಮುತ್ತಾತಂದಿರಾಗಲೀ ಕಳೆದ ೪೦೦ ತಲೆಮಾರುಗಳಿಂದಲೂ ವೇದದ ಒಂದು ಭಾಗವನ್ನೂ ನೋಡಿಲ್ಲ. ಮೂಢಾಚಾರಗಳನ್ನು ಅನುಸರಿಸಿ ಹೀನಸ್ಥಿತಿಗೆ ಬರುತ್ತಾರೆ. ಕಲಿಯುಗದಲ್ಲಿ ಬ್ರಾಹ್ಮಣ ವೇಷದಲ್ಲಿರುವ ಈ ರಾಕ್ಷಸರಿಂದ ಮುಗ್ಧ ಜನರನ್ನು ಆ ದೇವರೇ ಕಾಪಾಡಬೇಕು.' (೬-೬೬)

ಹೀಗೆ ಶತಶತಮಾನಗಳಿಂದ ಛಿದ್ರಗೊಂಡಿರುವ ಭಾರತೀಯ ಸಮಾಜವನ್ನು ಎರಡು ವರ್ಗಗಳ ನೆಲೆಯೊಳಗೆ ಗುರುತಿಸಿ ಅವುಗಳ ಗುಣಾವಗುಣಗಳನ್ನ ಗುರುತಿಸಿದ ಡಾ|| ಲೋಹಿಯಾ ಹೇಳುತ್ತಾರೆ :

*ಸಂತೋಷಿಸುವ ಸಹಜ ಸಾಮರ್ಥ್ಯದೊಂದಿಗೆ ಕೆಳಜಾತಿಯವರ*
*ಒರಟುತನ ಮತ್ತು ಉದ್ದೇಶರಹಿತ ಬದುಕಿನಂತೆ, ಮೇಲ್ಜಾತಿಯವರ*
*ಒಳ್ಳೆಯ ವಿದ್ಯೆ ಹಾಗೂ ಸಂಸ್ಕೃತಿಯೊಂದಿಗೆ ನಯವಂಚನೆ, ಸ್ವಾರ್ಥ ಹಾಗೂ ನಿರ್ಜೀವ ಬದುಕು ಬೆಸೆದುಕೊಂಡಿದೆ.*
*ಹಾಗಾಗಿ ಪರಸ್ಪರ ವಂಚಿಸುವುದನ್ನೆ ಉಸಿರಾಗಿಸಿಕೊಂಡಿರುವುದರಿಂದ ಬೃಹತ್ ಭಾರತ ಕ್ಷಣಕ್ಷಣವೂ ಉಸಿರುಗಟ್ಟುತ್ತಿದೆ.*

ಭಾರತ ಸ್ವಾತಂತ್ರ್ಯಗಳಿಸಿ ೬೫ ಸಂವತ್ಸರಗಳು ಸಂದರೂ ಇಂದಿಗೂ ಅರ್ಧದಷ್ಟು ಜನ ಅನಕ್ಷರಸ್ಥರಾಗಿಯೆ ಉಳಿದಿದ್ದಾರೆ. ಸರಿಯಾಗಿ ಹೇಳುವುದಾದರೆ ಎಲ್ಲ ಆಳುವ ಪಕ್ಷಗಳೂ, ಅದರೊಟ್ಟಿಗೆ ಕಾರ್ಯಾಂಗವೂ ಕೈಜೋಡಿಸಿ ಆ ಜನವಿಭಾಗವನ್ನು ಅನಕ್ಷರರನ್ನಾಗಿಯೇ ಉಳಿಸಿಕೊಂಡು ಬರುತ್ತಿವೆ. ನೀಡುತ್ತಿರುವ ಶಿಕ್ಷಣವೂ ಹೃದಯವನ್ನು ಅರಳಿಸುವ ನೈತಿಕ ಮೌಲ್ಯಗಳನ್ನು ಗೌಣವಾಗಿಸಿ ಮಿದುಳಿಗೆ ಮಾಹಿತಿಯನ್ನು ತುಂಬುವುದಕ್ಕಷ್ಟೆ ಸೀಮಿತವಾಗಿವೆ. ಇದರಿಂದ ವೃತ್ತಪತ್ರಿಕೆಗಳೂ ಹೊರತಾಗಿಲ್ಲ. ಹೀಗಾಗಿ ಒಂದು ಕಡೆ ಅನಕ್ಷರಸ್ಥ ಸಮೂಹ ಬೆವರು ಬಸಿದು ಭಾರತವನ್ನು ಕಟ್ಟುತ್ತಿದ್ದರೆ ಮತ್ತೊಂದು ಕಡೆ ಅಕ್ಷರಸ್ಥರು ಭ್ರಷ್ಟಾಚಾರದಲ್ಲಿ ನಿರತರಾಗಿ ಭಾರತವನ್ನು ಪರೋಕ್ಷವಾಗಿ ಅಸ್ವತಂತ್ರಗೊಳಿಸುತ್ತಿದ್ದಾರೆ. ಹಣವನ್ನೆ ಆತ್ಮವಾಗಿಸಿಕೊಂಡಿರುವ ಪತ್ರಿಕಾರಂಗ ಹಾಗೂ ಮಾಧ್ಯಮಗಳು ಜಾಹೀರಾತಿನ ಹುಚ್ಚು ಹೊಳೆಯಲ್ಲಿ ಕೊಚ್ಚಿಹೋಗುತ್ತಿವೆ. ಬಂಡವಾಳಶಾಹಿಗಳ ಬಲೆಗೆ ಬಿದ್ದು ಜನಸಾಮಾನ್ಯರು ದಿನನಿತ್ಯ ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳಿಗೆ ಬೆನ್ನು ಮಾಡಿವೆ.

ಭಾಷಾವಾರು ಪ್ರಾಂತಗಳ ರಚನೆಯ ಉದ್ದೇಶವನ್ನು ಯಾರೂ ಗುರುತರವಾಗಿ ಪರಿಗಣಿಸುತ್ತಿಲ್ಲ. ಸ್ವಂತಿಕೆಯ ಕಡೆಗೆ ಮೊಗಮಾಡದೆ ಆಂಗ್ಲ ಭಾಷೆಗೆ ಜೋತು ಅದರ ಗುಲಾಮರಾಗಿಯೆ ಉಳಿದಿರುವ ದುರಂತ ಭಾರತೀಯರದ್ದು. ಮೆಕಾಲೆ ಶಿಕ್ಷಣವೇ ಅಂತಿಮ ಗಂತವ್ಯ ಎಂಬ ಭ್ರಮೆಗೆ ಒಳಗಾಗಿ ಮಾತೃಭಾಷೆಯನ್ನು ಗೌಣವಾಗಿಸಿಕೊಂಡು ಇಂಗ್ಲಿಷ್ ವ್ಯಾಮೋಹಕ್ಕೆ ಒಳಗಾಗಿ ಸಿಪ್ಪೆಯನ್ನೆ ತಿರುಳೆಂದು ತಿನ್ನುವ ಮೌಢ್ಯಕ್ಕೆ ಇಡೀ ಸಮಾಜ ಒಳಗಾಗಿದೆ. ಯಾವ ರಾಜ್ಯವೇ ಆಗಿರಲಿ ಅಲ್ಲಿ ಪ್ರಕಟವಾಗುವ ಪತ್ರಿಕೆಗಳಲ್ಲಿ ಇಂಗ್ಲಿಷ್ ಪತ್ರಿಕೆಗಳು ಪ್ರಥಮ ಸ್ಥಾನದಲ್ಲಿದ್ದರೆ ಸ್ಥಳೀಯ ಭಾಷಾ ಪತ್ರಿಕೆಗಳು ದ್ವಿತೀಯ ಸ್ಥಾನದಲ್ಲಿರುತ್ತವೆ. ಈ ಅಪಾಯವನ್ನೂ ಅಂದೇ ಮನಗಂಡಿದ್ದ ನೇತಾಜಿ ಸುಭಾಷ್ ಚಂದ್ರ ಬೋಸ್, ''ಬ್ರಿಟಿಷರೊಂದಿಗೆ ಇಂಗ್ಲಿಷ್ ಅನ್ನೂ ಹೊರಗಟ್ಟಬೇಕು'' ಎಂದು ಗುಡುಗಿದ್ದರು. ಇಂದು ಅವರ ಮಾತನ್ನು ಗಾಳಿಗೆ ತೂರಿ ಗಾಳಿಗಳಾಗಿ ಅಲೆವ ದುಸ್ಥಿತಿ ಸಮಾಜಕ್ಕೆ ಪ್ರಾಪ್ತವಾಗಿದೆ.

ಪುರೋಹಿತಶಾಹಿಯ ಸ್ವಾರ್ಥದಿಂದ ಅನ್ಯರ ಆಳ್ವಿಕೆಗೆ ಒಳಪಟ್ಟ ಭಾರತ ಸ್ವತಂತ್ರಗೊಂಡಮೇಲೂ ಅದರ ಕ್ರೂರ ಹಿಡಿತಕ್ಕೆ ಒಳಗಾಗುವ ದುರಂತವನ್ನೆದುರಿಸುತ್ತಿದೆ. ಅಸ್ಪೃಶ್ಯತೆಯ ಆಗರವಾಗಿರುವ ದೇವಸ್ಥಾನಗಳಲ್ಲಿ, ಗುರುಪೀಠಗಳಲ್ಲಿ, ಮಠ-ಮಾನ್ಯಗಳಲ್ಲಿ ಬಿಡುಗಡೆಯ ಬೆಳಕಿಗಿಂತ ಬಂಧನದ ಬೇಡಿಗಳು ಬಲಗೊಳ್ಳುತ್ತಿವೆ. ಈ ಅನಿಷ್ಟಗಳಿಂದ ಯಾವ ಮತ ಧರ್ಮಗಳೂ ಹೊರತಾಗಿಲ್ಲ. ಸಾರ್ವಜನಿಕ ಹಣವನ್ನು ಇವು ಸುಲಿದು ತಿನ್ನುತ್ತಿವೆ. ಜನ ಬದುಕಲು ಬಸವಳಿದು ನಲುಗುತ್ತಿದ್ದರೆ ಇವರು ಕೊಬ್ಬಿ ನಲಿಯುತ್ತಿದ್ದಾರೆ. ಈ ಕಾರಣಕ್ಕಾಗಿಯೆ 'ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರಬನ್ನಿ, ಬಡತನವ ಬುಡಮಟ್ಟ ಕೀಳ ಬನ್ನಿ' ಎಂದು ಕುವೆಂಪು ಕರೆಕೊಟ್ಟಿದ್ದು. ದೇವಸ್ಥಾನಗಳು, ಗುರುಮಠ ಪೀಠಗಳು ಸತ್ಯದ ತಲೆಯ ಮೇಲೆ ಹೊಡೆದಂತೆ ಸುಳ್ಳನ್ನು ಬಿತ್ತುತ್ತಿವೆ. ಇದನ್ನು ಅರಿತೇ ಡಾ|| ಅಂಬೇಡ್ಕರ್ :

*ಜನಸಾಮಾನ್ಯರು ಮಾರ್ಗದರ್ಶನಕ್ಕಾಗಿ ಯಾವ ಬುದ್ಧಿವಂತ ವರ್ಗದ ಕಡೆ*
*ಮೊಗ ಮಾಡಿದ್ದಾರೋ ಆ ಬುದ್ಧಿವಂತ ವರ್ಗ ಅವರಿಗೆ ಸರಿಯಾದ ಮಾರ್ಗದಲ್ಲಿ*
*ತಿಳಿವಳಿಕೆ ನೀಡುವಲ್ಲಿ ಅಪ್ರಾಮಾಣಿಕರಾಗಿರುತ್ತಾರೆ ಇಲ್ಲಾ ತೀರ*
*ಅಸಡ್ಡೆ ಉಳ್ಳವರಾಗಿರುತ್ತಾರೆ.*

– ಎಂದು ನೊಂದು ನುಡಿದಿದ್ದಾರೆ. ವಿವೇಕಾನಂದರೂ ಕೂಡ, ''ಭಾಷ್ಯವನ್ನು ಬರೆದ ಆಚಾರ್ಯರೆಲ್ಲ ಕೆಲವು ವೇಳೆ ತಮ್ಮ ಸಿದ್ಧಾಂತಕ್ಕೆ ಸರಿಯಾದ ಅರ್ಥವನ್ನು ಸೂತ್ರದಲ್ಲಿ ಬರುವಂತೆ ಮಾಡುವಾಗ ತಿಳಿದೇ ಸುಳ್ಳನ್ನು ಹೇಳುತ್ತಿದ್ದರು'' (೬-೩೮) ಎಂದು ಆಚಾರ್ಯರುಗಳ ಅಂತರಂಗವನ್ನ ಬಹಿರಂಗಗೊಳಿಸಿದ್ದಾರೆ. ಡಾ|| ಅಂಬೇಡ್ಕರರು, 'ಬ್ರಾಹ್ಮಣಧರ್ಮ ಹಿಂದೂ ಧರ್ಮದ ವಿಷ' ಎಂದು ತೂರ್ಯಧ್ವನಿಯಲ್ಲಿ ಸಾರಿದರು. ಸಬ್‌ರಿಜಿಸ್ಟ್ರಾರ್ ಕಛೇರಿಯಂತೆ ಶೃಂಗೇರಿ ಶಂಕರಾಚಾರ್ಯ ಮಠ ಕ್ರಯಪತ್ರಗಳ ನೋಂದಣಿ ಮಾಡುವ ಕೆಲಸ ಮಾಡಿದೆ. ಅದು ಅಂತಿಂಥ ಪತ್ರಗಳಲ್ಲ, ಮನುಷ್ಯರನ್ನು ಪಶುಗಳಂತೆ ಮಾರಾಟ ಮಾಡಿರುವ ಕ್ರಯಪತ್ರಗಳು. ನಮಗೆ ಶಾಲೆಗಳಲ್ಲಿ ಆಫ್ರಿಕಾದ ನೀಗ್ರೋಗಳನ್ನೂ ಯೂರೋಪ್, ಅಮೇರಿಕ ಮಾರುಕಟ್ಟೆಗಳಲ್ಲಿ ಹರಾಜು ಹಾಕಿದ್ದನ್ನು ಪಾಠಮಾಡಿದ ಇಲ್ಲಿನ ಶಿಕ್ಷಣ ಇಲ್ಲಿಯ ಹೊಲೆಮಾದಿಗರನ್ನು ಕ್ರಯಮಾಡಿದ್ದನ್ನು ಏಕೆ ಬೋಧಿಸಲಿಲ್ಲ? ಒಂದು ಕ್ರಯಪತ್ರವನ್ನು ಉದಾಹರಣೆಯಾಗಿ ಹೇಳುತ್ತೇನೆ.

ಶಿವಮೊಗ್ಗ ಜಿಲ್ಲೆಯ ಆ ದಿನ ಹಳ್ಳಿ ಹೋಬಳಿ ಹುಲಿಮನೆ ಗ್ರಾಮದ ಪಟೇಲ್ ಸುಬ್ಬಯ್ಯನವರ ಮನೆಯಲ್ಲಿದ್ದ ಕಡತದಲ್ಲಿ ದೊರೆತ ತಾಮ್ರ ಶಾಸನವೊಂದನ್ನು ೧೯೨೯ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿತು. ಅದು ಹೀಗಿದೆ :

''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರುಷಂಗಳು ೧೬೩೦ನೇ ಪರಿವರ್ತಮಾನಕ್ಕೆ ಸಂದುಸಲುವ ವಿಭವನಾಮ ಸಂವತ್ಸರದ ಆಶ್ವೀಜ ಶುಕ್ಲ ೧೩ ರವಿವಾರದಲ್ಲೂ ಶ್ರೀಮತು ಹುಲಿಮನೆ ಕಾಳಿ ಸುಬ್ಬಣ್ಣನವರ ಮಗ ಶೇಷಯ್ಯನವರಿಗೆ ವೇದಮೂರ್ತಿಗಳಾದ ಯಿಕ್ಕೇರಿ ಶೇಷಾಚಾರ್ಯರ ಮಗ ಭೀಮಾಚಾರ್ಯನು ಬರೆಸಿಕೊಟ್ಟ ಹೊಲೆಯಾಳು ಹೆಣ್ಣಾಳು ಕ್ರಯ ಚೀಟಿಯ ಕ್ರಮವೆಂತೆಂದರೆ, ನಾನು ನನ್ನ ಅವಸರ ನಿಮಿತ್ತವಾಗಿ ನನ್ನ ಹೊಲೆಯಾಳು ಕನ್ನನ ಹೆಂಡತಿ ಚೌಡಿಯೆಂಬ ಹುಡುಗಿಯನ್ನು ನಿಮಗೆ ಕ್ರಯಕ್ಕೆ ಕೊಟ್ಟೆನಾಗಿ ಈ ಹೆಣ್ಣು ಆಳಿಗೆ ಬುದ್ಧಿವಂತರು ಕಂಡು ಕಟ್ಟಿದ ಕ್ರಯ ಮೂರು ವರಹವನ್ನು ತೆಗೆದುಕೊಂಡು ಈ ಹೆಣ್ಣಾಳು ಹುಡುಗಿಯನ್ನು ನಿಮಗೆ ಕ್ರಯ ಮೂಲಕ್ಕೆ ಮಾರಿದೆನಾಗಿ ಈ ಹೆಣ್ಣಿಗೆ ಆದಿ ಅಡಮು ಅಡ್ಡಿ ಸಡ್ಡಿಯೇನು ಉಂಟಾದ್ದನ್ನು ನಾನೇ ನೋಡಿಕೊಂಡೇನು ಎಂದು ಬರೆಸಿಕೊಟ್ಟ ಕ್ರಯಚೀಟು ಹಣಸಂದ ನಿಶಿಧಿಯಾಗಿದೆ. ಸಾಧನೆಯಿಂತಪ್ಪುದಕ್ಕೆ ಸಾಕ್ಷಿಗಳು ಬೇದೂರು ಸುಬ್ಬಯ್ಯ, ಬಾಳೆಹಳ್ಳಿ ಪಂಡ್ರಿ ದೊಡ್ಡಯ.' (ಡಾ|| ಜಿ. ರಾಮಕೃಷ್ಣ) ('ಮುನ್ನೋಟ' - ಪುಟ - ೨೦೮). ಇಂಥ ಅನೇಕ ಕ್ರಯಪತ್ರಗಳಿವೆ.

ಇಷ್ಟಾದರೂ ಇಂಥ ಅನಿಷ್ಟ ಗುರುಪೀಠಗಳಿಗೆ ರಾಷ್ಟ್ರಪತಿಗಳಿಂದ ಹಿಡಿದು ಎಲ್ಲ ರಾಜಕಾರಣಿಗಳು, ಬಂಡವಾಳಶಾಹಿಗಳು, ಕ್ರೀಡಾಪಟುಗಳು, ಸಿನಿಮಾ ನಟರು ಆತ್ಮಗೌರವವನ್ನು ಗಾಳಿಗೆ ತೂರಿ ಅನಿಷ್ಟ ಪಾದಗಳಿಗೆ ಎರಗುತ್ತಿದ್ದಾರೆ. ಇಂಥವುಗಳನ್ನು ಮಹಾನ್ ಸುದ್ದಿಗಳು ಎಂಬಂತೆ ಪತ್ರಿಕೆಗಳು ಮುಖಪುಟಗಳಲ್ಲಿ ಮುದ್ರಿಸಿಕೊಂಡು ಪರೋಕ್ಷವಾಗಿ ಪುರೋಹಿತಶಾಹಿಗೆ ಬೆಂಬಲ ನೀಡುತ್ತಿವೆ. ಅಮೇರಿಕದ ಅಧ್ಯಕ್ಷನಾಗಿದ್ದ ಬಿಲ್ ಕ್ಲಿಂಟನ್ ಲೆವೆನ್ಸ್ಕಿಯೊಂದಿಗೆ ಲೈಂಗಿಕ ಹಗರಣದಲ್ಲಿ ಭಾಗಿಯಾದರೆ ಆ ಯಕಃಶ್ಚಿತ್ ಸುದ್ದಿಯನ್ನು ಮುಖಪುಟದಲ್ಲಿ ಮುದ್ರಿಸಿಕೊಳ್ಳುವ ಗುಲಾಮೀಯ ಮನಸ್ಸು ನಮ್ಮದು. ಟೆನ್ನಿಸ್ ಆಟಗಾರ್ತಿಯರ ನಗ್ನತೆಯನ್ನ ಸೆರೆಹಿಡಿದು ಪ್ರಕಟಿಸುವ ಭಗ್ನ ಮನಸ್ಸಿನಲ್ಲಿ ಮಗ್ನವಾಗಿವೆ. ಥಳುಕು ಬಳುಕಿನ ಸಿನಿಮಾ ನಟಿಯರು ಹೂಸಿದರೆ, ಕೆಮ್ಮಿದರೆ ದೊಡ್ಡ ಸುದ್ದಿಮಾಡುವ ಮತಿಗೇಡಿತನದಲ್ಲಿ ನಿರತವಾಗಿವೆ. ಇಂಥ ಮನಃಸ್ಥಿತಿಯಲ್ಲಿರುವ ಪತ್ರಿಕೆಗಳಿಂದ ಸಾಮಾಜಿಕ ಪರಿವರ್ತನೆಯನ್ನು ಊಹಿಸಿಕೊಳ್ಳಲು ಸಾಧ್ಯವೆ ?

''ಚಂಡಾಲನಿಗೆ ವಿದ್ಯಾಭ್ಯಾಸದ ಅವಶ್ಯಕತೆ ಇರುವಷ್ಟು ಬ್ರಾಹ್ಮಣನಿಗೆ ಇಲ್ಲ, ಬ್ರಾಹ್ಮಣ ಮಗನಿಗೆ ಒಬ್ಬ ಉಪಾಧ್ಯಾಯನು ಬೇಕಾದರೆ ಚಂಡಾಲನಿಗೆ ಹತ್ತು ಉಪಾಧ್ಯಾಯರು ಬೇಕು'' (೩-೧೯೫) ಎಂದ ವಿವೇಕಾನಂದರಂತೆ ಶೊಲ್ಲಾಪುರದ ಸಾಹುಮಹರಾಜ್, ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ್ ಮೀಸಲಾತಿಯನ್ನು ಜಾರಿಗೆ ತಂದರು. ಡಾ|| ಅಂಬೇಡ್ಕರ್ ಅವರು ಪರಿಶ್ರಮದಿಂದ ಮೀಸಲಾತಿಯನ್ನು ಭಾರತದ ಸಂವಿಧಾನದಲ್ಲಿ ಅಳವಡಿಸಿದರು. ಇದರ ಪರಿಣಾಮವಾಗಿ ದಲಿತ ಸಮಾಜದವರಿಗೆ, ಹಿಂದುಳಿದ ವರ್ಗಗಳವರಿಗೆ ಉನ್ನತ ಹುದ್ದೆಗಳನ್ನು ಅಲಂಕರಿಸುವ ಅವಕಾಶ ಸಿಕ್ಕಿತು. ವಿಷಾದದ ಸಂಗತಿ ಎಂದರೆ ಮೀಸಲಾತಿಯ ಫಲ ಪಡೆದ ಅನೇಕರು ತಾವು ಬಂದ ವರ್ಗವನ್ನು ಮರೆತು ನವಪುರೋಹಿತಶಾಹಿಗಳಾಗಿ ದೇವಸ್ಥಾನಗಳಿಗೆ ಎಡತಾಕುತ್ತಿರುವುದು ಹಾಗೂ ಸಮಾಜ ಪರಿವರ್ತನೆಯಲ್ಲಿ ನಮ್ಮ ಪಾಲೂ ಇದೆ ಎಂಬ ಅಂತರಂಗದ ಕರೆಗೆ ಜಾಣಗಿವುಡಾಗಿರುವುದು. ಈ ಮನಃಸ್ಥಿತಿ ಹೀಗೆ ಮುಂದುವರಿದಿದ್ದೇ ಆದರೆ ಅದು ಡಾ|| ಅಂಬೇಡ್ಕರ್ ಅವರಿಗೆ ಹಾಗೂ ಅಂಥ ಆಶಯ ಹೊತ್ತು ತ್ಯಾಗ ಬಲಿದಾನ ಮಾಡಿದ ಎಲ್ಲ ಮಹನೀಯರಿಗೆ ಮಾಡುವ ಮೋಸವಾಗುತ್ತದೆ.

ದೇಶಕ್ಕಾಗಿ, ಮನುಕುಲಕ್ಕಾಗಿ ನಾವು ಆಲೋಚಿಸಬೇಕಾದ ಒಂದು ಮಹತ್ವದ ಬೆಳವಣಿಗೆಯ ಮಾತನ್ನು ಡಾ|| ಲೋಹಿಯಾ ಹೇಳಿದ್ದಾರೆ : ''ಇನ್ನು ನಾವು ಇಡೀ ಮಾನವ ಜಾತಿಯ ಸಮಾನತೆಯನ್ನು ಮಾತ್ರವೇ ಯೋಚಿಸಬೇಕು. ಶೂದ್ರನೂ ದ್ವಿಜನೂ ಮೂಲಭೂತವಾಗಿ ಅರೆಜೀವವಾಗಿ ಬಿದ್ದಿದ್ದಾರೆ. ಶೂದ್ರನನ್ನು ದ್ವಿಜನೂ, ದ್ವಿಜನನ್ನು ಶೂದ್ರನೂ ಮೇಲೆತ್ತಬೇಕಾಗಿದೆ.'' ನಿಜ, ಸಾಮಾಜಿಕ ಪರಿವರ್ತನೆಗಾಗಿ ಪತ್ರಿಕೆಗಳೂ ಸೇರಿದಂತೆ ಪ್ರತಿಯೊಬ್ಬರೂ ಈ ದಿಕ್ಕಿನಲ್ಲಿ ಕ್ರಿಯಾಶೀಲರಾಗಬೇಕು. ಇಲ್ಲವಾದಲ್ಲಿ ನಾವು ಮುಂದೆ ಎದುರಿಸಬೇಕಾಗಿ ಬರಬಹುದಾದ ಗಂಡಾಂತರವನ್ನು ಅಂದೆ, ಡಾ|| ಅಂಬೇಡ್ಕರ್ ಎರಡು ಸಂದರ್ಭಗಳಲ್ಲಿ ಎಚ್ಚರಿಸಿದ್ದಾರೆ :

೧. ನಾವು ೨೬.೧.೧೯೫೦ರಂದು ವೈರುಧ್ಯ ಜೀವನಕ್ಕೆ ಕಾಲಿಡುತ್ತೇವೆ. ''ರಾಜಕೀಯದಲ್ಲಿ ಸಮಾನತೆ ಪಡೆಯುತ್ತೇವೆ. ಆದರೆ ಸಾಮಾಜಿಕ ಆರ್ಥಿಕ ಜೀವನದಲ್ಲಿ ಒಬ್ಬ ವ್ಯಕ್ತಿ, ಒಂದು ಮತ ಮತ್ತು ಒಂದು ಮೌಲ್ಯ ಎಂಬ ತತ್ವಕ್ಕೆ ಒಳಗಾಗುತ್ತೇವೆ. ಆದರೆ ಸಾಮಾಜಿಕ ಮತ್ತು ಆರ್ಥಿಕರಂಗದಲ್ಲಿ ಒಬ್ಬ ವ್ಯಕ್ತಿ ಒಂದು ಮೌಲ್ಯ ಎಂಬುದರಿಂದ ವಂಚಿತರಾಗುತ್ತೇವೆ. ನಾವು ಎಲ್ಲಿಯವರೆಗೆ ಈ ವಿರೋಧಾಭಾಸದಲ್ಲಿ ಬದುಕುವುದು ? ಆರ್ಥಿಕ ಹಾಗೂ ಸಾಮಾಜಿಕ ಅಸಮಾನತೆಯನ್ನು ಎಲ್ಲಿಯವರೆಗೆ ಸಹಿಸುವುದು ? ಇದನ್ನು ಮುಂದುವರಿಸುವುದೆಂದರೆ ರಾಜಕೀಯ ಸ್ವಾತಂತ್ರ್ಯದ ನಾಶಕ್ಕೆ ನಾಂದಿ ಹಾಡಿದಂತೆ. ಈ ವಿರೋಧಾಭಾಸವನ್ನು ಆದಷ್ಟು ಶೀಘ್ರವಾಗಿ ಅಳಿಸಿಹಾಕಬೇಕು. ಇಲ್ಲವಾದರೆ ಪರಿಶ್ರಮದಿಂದ ರಚಿಸಿರುವ ಈ ರಾಜಕೀಯ ಪ್ರಭುತ್ವ ಒಡೆದುಹೋಗುತ್ತದೆ.''

೨. ಸಂವಿಧಾನ ಸಭೆಯಲ್ಲಿ ೨೫.೧೧.೧೯೪೯ರಂದು ಹೇಳಿದ ಮಾತು :

''ಚರಿತ್ರೆ ಪುನರಾವರ್ತನೆಗೊಳ್ಳಲಿದೆಯೆ ? ಇದು ನನ್ನ ಆತಂಕದ ಪ್ರಶ್ನೆಯಾಗಿದೆ. ಜಾತಿ, ವರ್ಗ, ಪಂಥಗಳೆಂಬ ನಮ್ಮ ಹಳೆಯ ಶತ್ರು ಶಕ್ತಿಗಳ ಜೊತೆಗೆ ಭಾರತ ಗಣರಾಜ್ಯದಲ್ಲಿ ರಾಜಕೀಯ ಪಕ್ಷಗಳೆಂಬ ಹೊಸ ಶಕ್ತಿಕೇಂದ್ರಗಳು ಸೃಷ್ಟಿಯಾಗಲಿದ್ದು, ಇವುಗಳೂ ಶೋಷಕ ಶಕ್ತಿಗಳಾಗುವ ಅಪಾಯವಿದೆ. ಈ ಪಕ್ಷಗಳ ಗುರಿಯೂ ಪರಸ್ಪರ ವಿರೋಧಿ ಆಗಿರಲೂಬಹುದು. ಪ್ರತಿಯೊಂದೂ ತನ್ನ ಹಿತಾಸಕ್ತಿಗಾಗಿ ಶ್ರಮಿಸಬಹುದು. ಜಾತಿ, ವರ್ಗ, ಪಂಥಗಳ ಹಿತಾಸಕ್ತಿಗಳೇ ಮುಖ್ಯವಾಗಿ ನಾವು ಹಲವಾರು ವಿದೇಶೀ ಆಳ್ವಿಕೆಗೆ ಗುಲಾಮರಾಗಲು ಕಾರಣವಾದವು. ಒಂದು ವೇಳೆ ರಾಜಕೀಯ ಪಕ್ಷಗಳೂ ಕೂಡ ಸ್ವತಂತ್ರ ಭಾರತದಲ್ಲಿ ಸ್ವ-ಹಿತಾಸಕ್ತಿಯನ್ನೇ ಮುಖ್ಯವಾಗಿ ಪರಿಗಣಿಸಿ ರಾಷ್ಟ್ರಹಿತವನ್ನು ಕಡೆಗಣಿಸಿದ್ದೇ ಆದಲ್ಲಿ ಈ ಸಂವಿಧಾನವೂ ನಿಷ್ಪ್ರಯೋಜಕವಾಗಿಬಿಡಬಹುದು. ಆಗ ನಮ್ಮ ಸ್ವಾತಂತ್ರ್ಯವೂ ಕೂಡ ಅಪಾಯಕ್ಕೆ ಗುರಿಯಾಗಬಹುದು.''

ಸ್ನೇಹಿತರೆ, ಈಗಾಗಲೇ ಒಳಗಿನಿಂದ ಹಾಗೂ ಹೊರಗಿನಿಂದ ಬಂಡವಾಳಶಾಹಿಗಳು ತಮ್ಮ ಕಬಂಧ ಬಾಹುಗಳನ್ನು ಭಾರತದಾದ್ಯಂತ ಚಾಚುತ್ತಿದ್ದಾರೆ. ಈಗ ನಾವು ನಿದ್ರಿಸದೆ ಡಾ|| ಅಂಬೇಡ್ಕರ್ ಅವರ ಆತಂಕ ನಿಜವಾಗದಂತೆ ಎಚ್ಚರಗೊಳ್ಳುವುದು ಒಳಿತು. ಇಲ್ಲವಾದರೆ ಸ್ವತಂತ್ರರಾಗಿಯೂ ಅಸ್ವತಂತ್ರರಾಗಬೇಕಾಗುತ್ತದೆ.

ಜ. ಹೊ. ನಾರಾಯಣಸ್ವಾಮಿ
ನಂ. ೨೦೬೪/೪, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩ ೨೦೧

## ಯಥಾಸ್ಥಿತಿಯ ಊರು

ದಿನ ಕಳೆದಂತೆ ಹೆಚ್ಚಿದ ಬೆಂಕಿ
ಆರಿ ತಣ್ಣಗಾಗುವುದು
ಊರು ಗಲಭೆಯೇ
ಎದ್ದಿಲ್ಲವೆಂದು ಸುಮ್ಮಗಾಗುವುದು

ಪರಿಹಾರದ ಬೆಕ್ಕು
ಸೂತಕದ ಮನೆಯ ಕದ ತಟ್ಟುವುದು
ದಿನ ಕಳೆದಂತೆ ಆ ಹುಚ್ಚಿಯ ಕಿರಿಕಿರಿ
ಹೆಚ್ಚಿದೆಯೆಂದು ಲೋಕ ಭಾವಿಸುವುದು

ಲೋಕ; ಹುಚ್ಚಿ ಕೈಯಲ್ಲಿಯ
ಬೆಕ್ಕಿನ ಕುರಿತು ಮಾತಾಡುವುದು
ಹುಚ್ಚಿ ಕಳಕೊಂಡ
ಕೈಕೂಸನಷ್ಟೇ ಕನವರಿಸುವಳು

ದಿನ ಕಳೆದಂತೆ ಊರು ಯಥಾಸ್ಥಿತಿಗೆ
ಬಂದಿದೆಯೆಂದು ಪೊಲೀಸರು ಶರಾ
ಬರೆದವರು...

ಬಸವರಾಜ ಸೂಳಿಭಾವಿ
೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨೧೦೧

ಅಡ್ಡೂರು ಕೃಷ್ಣರಾವ್

ಬಹುರಾಷ್ಟ್ರೀಯ ಹಾಗೂ ಭಾರತೀಯ ಔಷಧಿ ಕಂಪೆನಿಗಳು ತಮ್ಮ ಹೊಸ ಔಷಧಿಗಳ ವೈದ್ಯಕೀಯ ಪ್ರಯೋಗಗಳನ್ನು ಮನುಷ್ಯರ ಮೇಲೂ ನಡೆಸುತ್ತವೆ. ಈ ಪ್ರಯೋಗಗಳಿಗೆ ಬಲಿಯಾಗಿ ಹಲವರು ಜೀವ ಕಳೆದುಕೊಂಡಿದ್ದಾರೆ ಹಾಗೂ ಶಾಶ್ವತ ಅಂಗವೈಕಲ್ಯ ಅಥವಾ ಕ್ಯಾನ್ಸರಿನಂತಹ ರೋಗಗಳಿಂದ ನರಳುತ್ತಿದ್ದಾರೆ.

ಇಂತಹ ''ಬಲಿವ್ಯಕ್ತಿ''ಗಳ ರಕ್ಷಣೆಗೆ ಸರಕಾರ ಮುಂದಾಗಬೇಕೆಂಬ ಬೇಡಿಕೆಯನ್ನು ಹಲವಾರು ಸರಕಾರೇತರ ಸಂಘಟನೆಗಳು ಈ ವರುಷ ಪ್ರಬಲವಾಗಿ ಮುಂದಿಟ್ಟಿವೆ. ಅಂತೂ ಕೇಂದ್ರ ಸರಕಾರ ಕ್ರಮ ಕೈಗೊಂಡಿದೆ. ಆರೋಗ್ಯ ಮಂತ್ರಾಲಯದ ಅಧೀನದಲ್ಲಿರುವ



# ಔಷಧಿ ಪ್ರಯೋಗಗಳ ಬಲಿವ್ಯಕ್ತಿಗಳ ಜೀವಕ್ಕೆ ಕಿಂಚಿತ್ ಬೆಲೆ!

ಕೇಂದ್ರ ಔಷಧಿ ಗುಣಮಟ್ಟ ನಿಯಂತ್ರಣ ಸಂಸ್ಥೆಯು (ಸಿಡಿಎಸ್‌ಓ) ಇಂತಹ ಬಲಿ ವ್ಯಕ್ತಿಗಳ ಸಾವು ಮತ್ತು ದೈಹಿಕ ಹಾನಿಗೆ ಪರಿಹಾರ ನೀಡಲು ಸೂತ್ರವೊಂದನ್ನು ಸಿದ್ಧಪಡಿಸಿದೆ.

ಆದರೆ, ಈ ಸೂತ್ರದ ಪ್ರಕಾರ ಉತ್ತಮ ಸಂಬಳ ಪಡೆಯುತ್ತಿರುವ ವ್ಯಕ್ತಿಯು ಔಷಧಿ ಪ್ರಯೋಗದ ಬಲಿವ್ಯಕ್ತಿಯಾದರೆ ಮಾತ್ರ, ತನಗಾದ ನಷ್ಟಕ್ಕೆ ಸೂಕ್ತ ಪರಿಹಾರ ಪಡೆಯಬಹುದು. ಯಾವನೇ ಬಡವ, ನಿರುದ್ಯೋಗಿ, ರೋಗಪೀಡಿತ ಅಥವಾ ನಿರುದ್ಯೋಗಿ ಮಹಿಳೆ ಬಲಿವ್ಯಕ್ತಿಯಾದರೆ, ಅಲ್ಪ ಪರಿಹಾರ ಸಿಕ್ಕೀತು. ''ಭಾರತದಂತಹ ಅಭಿವೃದ್ಧಿಶೀಲ ದೇಶಗಳಲ್ಲಿ ಬಡ ಹಾಗೂ ನಿರುದ್ಯೋಗಿ ವ್ಯಕ್ತಿಗಳಿಗೇ ಔಷಧಿ ಪ್ರಯೋಗಗಳಲ್ಲಿ ಭಾಗವಹಿಸಲು ಆಮಿಷ ಒಡ್ಡಲಾಗುತ್ತದೆ ಅಥವಾ ಅಂಥವರೇ ಇಲ್ಲಿ ಪುಕ್ಕಟೆ ಚಿಕಿತ್ಸೆ ಸಿಗುತ್ತದೆಂಬ ಆಶೆಯಿಂದ ಭಾಗವಹಿಸುತ್ತಾರೆ'' ಎಂದು ತಿಳಿಸುತ್ತಾರೆ, ಡೆಲ್ಲಿಯ ಸಾಮ ಸಂಸ್ಥೆಯ ನಿರ್ದೇಶಕರಾದ ಎನ್. ಬಿ. ಸರೋಜಿನಿ (ಅವರದು ಮಹಿಳೆಯರ ಆರೋಗ್ಯ ವಿಷಯಗಳ ಬಗ್ಗೆ ಕೆಲಸ ಮಾಡುತ್ತಿರುವ ಲಾಭರಹಿತ ಸಂಸ್ಥೆ). ಅಂಥವರು ಬಲಿವ್ಯಕ್ತಿಗಳಾದರೆ, ಈ ಸೂತ್ರದಿಂದ ನ್ಯಾಯ ಸಿಕ್ಕೀತೇ?

**ಅತಾರ್ಕಿತ ಸೂತ್ರ :** ಬಲಿವ್ಯಕ್ತಿಗಳಿಗೆ ನೀಡುವ ಪರಿಹಾರದ ಮೊತ್ತ ಈ ನಾಲ್ಕು ಅಂಶಗಳನ್ನು ಅವಲಂಬಿಸಿದೆ : (೧) ಮಾಸಿಕ ಆದಾಯ (೨) ವಯಸ್ಸು (೩) ಇತರ ಯಾವುದೇ ರೋಗದಿಂದ ಪೀಡಿತರಾಗಿದ್ದರೆ, ಅದರ ತೀವ್ರತೆ ಮತ್ತು (೪) ಪ್ರಯೋಗದಿಂದಾಗಿ ದೈಹಿಕ ಹಾನಿ ಆಗಿದ್ದರೆ ಅದರ ಶೇಕಡಾ ಪ್ರಮಾಣ.

ಗುಣಾಂಶ '೧'ನ್ನು ಬಲಿವ್ಯಕ್ತಿಯ ಮಾಸಿಕ ಆದಾಯದ ಶೇಕಡ ೫೦ (ಬಲಿವ್ಯಕ್ತಿ ಮೃತನಾದ ಸಂದರ್ಭದಲ್ಲಿ) ಮತ್ತು ಶೇಕಡ ೬೦ (ದೈಹಿಕ ಹಾನಿಯಾದ ಸಂದರ್ಭದಲ್ಲಿ) ಎಂದು ನಿಗದಿಪಡಿಸಲಾಗಿದೆ. ತನ್ನ ಆದಾಯದ ಇಷ್ಟು ಭಾಗವನ್ನು ವ್ಯಕ್ತಿಯು ಕುಟುಂಬಕ್ಕಾಗಿ ವೆಚ್ಚ ಮಾಡುತ್ತಾನೆ ಎಂದು ಅಂದಾಜಿಸಲಾಗಿದೆ. ಅಂದರೆ, ವ್ಯಕ್ತಿಯು ಮಾಸಿಕ ಆದಾಯದಿಂದ ತನಗಾಗಿ ಮಾಡುವ ವೆಚ್ಚವನ್ನು ಪರಿಗಣಿಸಲಾಗಿಲ್ಲ. ''ಈ ಗುಣಾಂಶವು ಬಡವರನ್ನು, ನಿರುದ್ಯೋಗಿಗಳನ್ನು ಮತ್ತು ಉದ್ಯೋಗಕ್ಕೆ ಹೋಗದಿರುವ ಮಹಿಳೆಯರನ್ನು ಕಡೆಗಣಿಸಿದೆ. ಯಾಕೆಂದರೆ, ಇಂಥವರ ಮಾಸಿಕ ಆದಾಯವು ಸರಕಾರವು ನಿಗದಿಪಡಿಸಿದ ಕನಿಷ್ಠ ವೇತನವೆಂದು ಪರಿಗಣಿಸಲಾಗಿದೆ. ಹಾಗಾಗಿ, ಅಧಿಕ ಮಾಸಿಕ ಆದಾಯದ ವ್ಯಕ್ತಿಗಳಿಗೆ ಹೋಲಿಸಿದಾಗ ಇಂಥವರಿಗೆ ಸಿಗುವ ಪರಿಹಾರ ತೀರಾ ಕಡಿಮೆ'' ಎಂದು ವಿವರಿಸುತ್ತಾರೆ ಲೋಕೊಸ್ಟ್ ಇಂಡಿಯಾದ ಮ್ಯಾನೇಜಿಂಗ್ ಟ್ರಸ್ಟಿ ಎಸ್. ಶ್ರೀನಿವಾಸನ್ (ಅದು ಬರೋಡಾದ ಜೆನೆರಿಕ್ ಔಷಧಿ ಉತ್ಪಾದನಾ ಸಂಸ್ಥೆ).

ಈ ಗುಣಾಂಶವು, ಅಸಂಘಟಿತ ಕಾರ್ಮಿಕರ ಮಾಸಿಕ ವೇತನದಲ್ಲಿ ಹಂಗಾಮಿಗೆ ಅನುಸಾರವಾಗಿ ಆಗುವ ಏರುಪೇರುಗಳನ್ನು ಪರಿಗಣಿಸುವುದಿಲ್ಲ ಎಂಬುದನ್ನು ಸರೋಜಿನಿ ಅವರು ಬೆರಳೆತ್ತಿ ತೋರಿಸುತ್ತಾರೆ. ಉದಾಹರಣೆಗೆ ದಿನಗೂಲಿ ಕಾರ್ಮಿಕರು ಕೆಲವು ತಿಂಗಳು ಕನಿಷ್ಠ ವೇತನಕ್ಕಿಂತ ಜಾಸ್ತಿ ದಿನಗೂಲಿ ಪಡೆಯಬಹುದು.

ಸೂತ್ರದಲ್ಲಿರುವ ಗುಣಾಂಶ '೨' ಯಾವುದೇ ತರ್ಕ ಹೊಂದಿರದ ಅಂಶ. ಇದರ ಪಟ್ಟಿಯಲ್ಲಿ ಬಲಿವ್ಯಕ್ತಿಯ ಪ್ರಾಯಕ್ಕೆ ಅನುಸಾರವಾಗಿ ಒಂದು ಸಂಖ್ಯೆಯನ್ನು ನಮೂದಿಸಲಾಗಿದೆ. ಉದಾಹರಣೆಗೆ, ೨೦ ವರುಷ ವಯಸ್ಸಿಗೆ ೨೨೪, ಹಾಗೆಯೇ ೬೫ ವರುಷ ವಯಸ್ಸಿಗೆ ೧೯೬.೦೬ ಎಂಬ ಸಂಖ್ಯೆಗಳಿವೆ. ವಯಸ್ಸು ಜಾಸ್ತಿಯಾದಂತೆ ಈ ಸಂಖ್ಯೆ ಕಡಿಮೆಯಾಗುತ್ತದೆ (೬೫ ವರುಷದ ನಂತರದ ವಯಸ್ಸುಗಳಿಗೆ ಈ ಸಂಖ್ಯೆಯಲ್ಲಿ ಬದಲಾವಣೆಯಿಲ್ಲ). ಇದರ ತರ್ಕರಾಹಿತ್ಯವನ್ನು ಗಮನಿಸಿ: ಬಲಿವ್ಯಕ್ತಿ ೨೦ ವರುಷ ವಯಸ್ಸಿಗೆ ಮೃತನಾದರೆ, ಅವನು ಬದುಕಬಹುದಾಗಿದ್ದ ವರುಷಗಳು ಜಾಸ್ತಿ; ಆದ್ದರಿಂದ ಗುಣಾಂಶವೂ ಜಾಸ್ತಿ ಇರುವುದು ಸರಿ. ಆದರೆ, ೩೦ ವರುಷ ವಯಸ್ಸಿನ ಬಲಿವ್ಯಕ್ತಿ ಮೃತನಾದರೆ, ಅವನಿಗೆ ಅವಲಂಬಿತರು (ಹೆಂಡತಿ, ಮಕ್ಕಳು, ಹೆತ್ತವರು) ಇರುತ್ತಾರೆ; ಹಾಗಾಗಿ, ಈತನ ಗುಣಾಂಶ ಕಡಿಮೆ ಮಾಡುವುದು ಸರಿಯಲ್ಲ.

ಗುಣಾಂಶ '೨'ಗೆ ಈ ವಯಸ್ಸು ಆಧಾರಿತ ಪಟ್ಟಿಯನ್ನು ಎಲ್ಲಿಂದ ಎತ್ತಿಕೊಳ್ಳಲಾಗಿದೆ? ಕೆಲಸಗಾರರ ಪರಿಹಾರ ಕಾಯಿದೆ, ೧೯೨೩ರ ಷೆಡ್ಯೂಲ ೪ರಿಂದ. ಇದಂತೂ ಸರಕಾರಿ ಅಧಿಕಾರಿಗಳ ಬೇಜವಾಬ್ದಾರಿತನದ ಸೂಚಕ. ಯಾಕೆಂದರೆ, ಜೀವನೋಪಾಯಕ್ಕಾಗಿ ದುಡಿಯುವವನನ್ನು ಔಷಧಿ ಪ್ರಯೋಗದಲ್ಲಿ ಭಾಗವಹಿಸುವವನಿಗೆ ಸಮೀಕರಿಸುವುದು ಅಸಂಬದ್ಧ.

ದುಡಿದು ಗಳಿಸುವುದು ವ್ಯಕ್ತಿಯೊಬ್ಬ ಜೀವನ ಮಾಡಲು ಅವಶ್ಯ. ಆದರೆ, ಔಷಧಿ ಪ್ರಯೋಗದಲ್ಲಿ ಭಾಗವಹಿಸುವವನು, ಸಂಶೋಧನೆಗೆ ತನ್ನ ದೇಹವನ್ನೇ ಒದಗಿಸಿ, ವೈದ್ಯಕೀಯ ವಿಜ್ಞಾನದ ಮುನ್ನಡೆಗೆ ಗಣನೀಯ ಕೊಡುಗೆ ಸಲ್ಲಿಸುತ್ತಾನೆ. ಈ ಕೊಡುಗೆಗಾಗಿ ಆತನಿಗೆ ಸಾಧಾರಣ ಕಾರ್ಮಿಕನಿಗೆ ಪಾವತಿಸುವುದಕ್ಕಿಂತ ಹೆಚ್ಚಿನ ಪರಿಹಾರ ಪಾವತಿಸಲೇಬೇಕು. ಔಷಧಿ ಪ್ರಯೋಗಗಳಲ್ಲಿ ಉದ್ಯೋಗದಾತ - ಉದ್ಯೋಗಿ ಎಂಬ ಸಂಬಂಧ ಇರುವುದಿಲ್ಲ ಎಂಬುದನ್ನು ಗಮನಿಸಬೇಕು. ಆ ಸಂಬಂಧ ಇರುವಾಗ, ಉದ್ಯೋಗಿ ಅಥವಾ ಕಾರ್ಮಿಕನಿಗೆ ಅಪಘಾತವಾದರೆ ವಿಮಾ ಪರಿಹಾರ ಸಿಗುತ್ತದೆ.

ಸಾವು ಅಥವಾ ದೈಹಿಕ ಹಾನಿ ಸಂಭವಿಸಿದಾಗ ನೀಡಬೇಕಾದ ಪರಿಹಾರವು, ಬಲಿವ್ಯಕ್ತಿಯ ಪ್ರಾಯ ಆಧರಿಸಿ ಹೆಚ್ಚು ಕಡಿಮೆ ಆಗಬೇಕೆಂಬುದು ತಾರ್ಕಿಕ. ಯಾಕೆಂದರೆ, ಸರಾಸರಿ ಆಯುಷ್ಯ ಆಧರಿಸಿ, ಬಲಿವ್ಯಕ್ತಿ ಬದುಕಿರಬಹುದಾಗಿದ್ದ ಹಾಗೂ ದುಡಿಯಬಹುದಾಗಿದ್ದ ವರುಷಗಳು ಎಷ್ಟೆಂದು ಲೆಕ್ಕ ಹಾಕಿ, ಆ ಪ್ರಕಾರ ಪರಿಹಾರದ ಮೊತ್ತ ನಿರ್ಧರಿಸುವುದು ಸರಿಯಾದ ಕ್ರಮ.

ಗುಣಾಂಶ '೩' ಔಷಧಿ ಪ್ರಯೋಗದಲ್ಲಿ ಭಾಗವಹಿಸುವ ವ್ಯಕ್ತಿ ರೋಗಪೀಡಿತನೇ, ಅಲ್ಲವೇ ಎಂಬುದನ್ನು ಆಧರಿಸಿದೆ. ಭಾಗವಹಿಸಿದ ವ್ಯಕ್ತಿಗೆ ಮಾರಣಾಂತಿಕ ರೋಗವಿದ್ದರೆ, ಆತ ಮೃತನಾದರೆ ನೀಡಲಾಗುವ ಪರಿಹಾರ ಶೇಕಡ ೫೦ ಮಾತ್ರ. ಔಷಧಿ

(೬೧ನೇ ಪುಟಕ್ಕೆ...)

# ಭಾರತೀಯ ಮಾಧ್ಯಮಗಳಿಂದ ಆತ್ಮಾವಲೋಕನ ತಿರುಕನ ಕನಸೇ?

**ಸುರೇಶ ಭಟ್ ಬಾಕ್ರಬೈಲು**

**ಮಾ**ಧ್ಯಮಗಳು ಯಾವತ್ತೂ ಸಾರ್ವಜನಿಕ ಹಿತಾಸಕ್ತಿಯಿಂದ ಕಾರ್ಯ ನಿರ್ವಹಿಸಬೇಕು, ಜನಪರವಾದ ಭಾವನೆ-ಚಿಂತನೆಗಳನ್ನು ಪ್ರಚುರಪಡಿಸಬೇಕು ಎಂದು ಹೇಳಲಾಗುತ್ತದೆ. ಇದು ನಿಜ ಎನ್ನುವುದರಲ್ಲಿ ಎರಡು ಮಾತಿಲ್ಲ; ಮಾಧ್ಯಮಗಳ ಮೂಲಭೂತ ಕರ್ತವ್ಯವೇ ಇದು. ಮಾಧ್ಯಮಗಳು ಬಹುತೇಕವಾಗಿ ಸಮಾಜದ ಅವಶ್ಯಕತೆಗಳನ್ನು ಪೂರೈಸುತ್ತವೆ. ಆದರೂ ಕೆಲವೊಮ್ಮೆ ಗುಂಪುಗಳ ಅವಶ್ಯಕತೆಗಳು ಸಮಾಜದವುಗಳಿಗೆ ವಿರುದ್ಧವಿಲ್ಲದಿದ್ದರೆ ಅವುಗಳನ್ನೂ ಪರಿಗಣಿಸಬೇಕಾಗುತ್ತದೆ. ಅನುಚಿತ ಸಾಮಾಜಿಕ ಬಯಕೆಗಳನ್ನು ಪೂರೈಸಲು ಸಾಧ್ಯವಿಲ್ಲ, ಯಾಕೆಂದರೆ ಆ ಬಯಕೆಗಳು ವಿಕೃತಗೊಂಡು ಸಾಮಾಜಿಕ ಸಮತೋಲನ, ಸೌಹಾರ್ದ ಮತ್ತು ಮೌಲ್ಯಗಳಿಗೆ ಧಕ್ಕೆಯಾಗುವ ಸಾಧ್ಯತೆಗಳಿರುತ್ತವೆ. ಅದೇ ರೀತಿ ಕೆಲವು ವಿಶೇಷ ಸಂದರ್ಭಗಳನ್ನು ಹೊರತುಪಡಿಸಿ ವೈಯಕ್ತಿಕ ಬಯಕೆಗಳಿಗೂ ಅವಕಾಶವಿಲ್ಲ.

**ಮಾಧ್ಯಮ ಸ್ವಾತಂತ್ರ್ಯ**

ಇತ್ತೀಚೆಗೆ ಭಾರತದ ಸರ್ವೋಚ್ಚ ನ್ಯಾಯಾಲಯ ತಾನು ಕೆಲವು ಸ್ಥೂಲ ಮಾರ್ಗದರ್ಶಿ ಸೂತ್ರಗಳನ್ನು ನಿರೂಪಿಸುವೆನೆಂದು ಹೇಳಿದಾಕ್ಷಣ ಮಾಧ್ಯಮ ವಲಯಗಳಿಂದ, ಪ್ರಧಾನವಾಗಿ ಮಾಲಕ ವರ್ಗ ಮತ್ತು ಸಂಪಾದಕರ ಸಂಘದಿಂದ, ಭಾರಿ ದೊಡ್ಡ ಕೂಗೆದ್ದಿತು. ನಾನಾ ಮಾಧ್ಯಮಗಳಲ್ಲಿ ನಾನಾ ತೆರನಾದ ಚರ್ಚೆಗಳು ಏರ್ಪಟ್ಟವು. ಮಾಧ್ಯಮರಂಗ ಸ್ವತಂತ್ರವಾಗಿ ಕಾರ್ಯಾಚರಿಸಬೇಕು, ಅದರ ಮೇಲೆ ನಿಯಂತ್ರಣ ಸಲ್ಲದು ಎನ್ನುವುದನ್ನು ಎಲ್ಲರೂ ಒಪ್ಪುತ್ತಾರೆ. ಅದೇ ವೇಳೆ ಅದು ಕೆಲವು ಕನಿಷ್ಠ ನಿಬಂಧನೆಗಳಿಗೆ ಒಳಪಟ್ಟು ನಡೆದುಕೊಳ್ಳುವ ಅಗತ್ಯವಿದೆ ಎಂಬ ವಾದದಲ್ಲಿ ಹುರುಳಿಲ್ಲವೇ? ಪ್ರಜಾಸತ್ತಾತ್ಮಕ ಭಾರತದ ಸಂವಿಧಾನ ಪ್ರತಿಯೊಬ್ಬ ಪ್ರಜೆಗೆ ಮೂಲಭೂತ ಹಕ್ಕುಗಳೊಂದಿಗೆ ಮೂಲಭೂತ ಕರ್ತವ್ಯಗಳನ್ನೂ ಕೊಟ್ಟಿರುವಾಗ ಇದೇ ನಿಯಮ ಮಾಧ್ಯಮದಂತಹ ಸಂಸ್ಥೆಗಳಿಗೆ ಸಹ ಅನ್ವಯಿಸಬೇಡವೇ? ಮಾಧ್ಯಮಕ್ಕೆ ಕೂಡ ಅದರ ಮೂಲಭೂತ ಸ್ವಾತಂತ್ರ್ಯದ ಹಕ್ಕಿನೊಂದಿಗೆ ಸಾಮಾಜಿಕ ಜವಾಬ್ದಾರಿಯೂ ಇರಲೇಬೇಕಲ್ಲವೇ? ಎಂಬ ಪ್ರಶ್ನೆಗಳೇಳುವುದು ಸಹಜವೇ ಆಗಿದೆ. ತಮ್ಮ ಸ್ವಾತಂತ್ರ್ಯಹರಣವನ್ನು ವಿರೋಧಿಸುವ ಮಾಧ್ಯಮಗಳು ಸ್ವಾತಂತ್ರ್ಯಕ್ಕೂ ಮಿತಿಗಳಿವೆ ಎನ್ನುವುದನ್ನು ತಿಳಿದಿರಬೇಕಲ್ಲವೇ? ವಾಸ್ತವದಲ್ಲಿ ಒಂದು ಸಮಾಜದೊಳಗೆ ಪ್ರತಿಯೊಬ್ಬನಿಗೂ ಅನಿರ್ಬಂಧಿತ ಅಥವಾ ಅನಿಯಮಿತ ಸ್ವಾತಂತ್ರ್ಯ ಅಸಾಧ್ಯ. ಒಬ್ಬನ ಸ್ವಾತಂತ್ರ್ಯದಿಂದ ಮತ್ತೊಬ್ಬನ ಸ್ವಾತಂತ್ರ್ಯ ಮತ್ತು ಹಕ್ಕುಗಳಿಗೆ ಚ್ಯುತಿಯಾಗದಂತಿದ್ದರೆ ಮಾತ್ರ ಆರೋಗ್ಯಯುತ ಸಮಾಜದ ನಿರ್ಮಾಣ ಸಾಧ್ಯ. ಮಾಧ್ಯಮದಲ್ಲಿ ಪ್ರಕಟವಾಗುವ ಸುದ್ದಿಗಳು ವ್ಯಕ್ತಿ, ಸಮುದಾಯ, ಸಮಾಜದ ಮೇಲೆ ಬೀರಬಹುದಾದ ಪರಿಣಾಮಗಳ ಕುರಿತು ಯೋಚಿಸುವ ಮಹತ್ತರ ಹೊಣೆಗಾರಿಕೆ ಪ್ರಜಾಸತ್ತೆಯ ನಾಲ್ಕನೆ ಆಧಾರಸ್ತಂಭಕ್ಕೆ ಇದೆ. ಆದರೆ ವಾಣಿಜ್ಯ, ಜಾತಿ, ಧರ್ಮ ಮೊದಲಾದ ಸ್ಥಾಪಿತ ಹಿತಾಸಕ್ತಿಗಳ ಕೈವಾಡದ ಪರಿಣಾಮವಾಗಿ ವೈಜ್ಞಾನಿಕ ಚಿಂತನೆಗಳಿಗಿಂತ ಜ್ಯೋತಿಷ, ವಾಸ್ತುವಿನಂತಹ ಮೂಢನಂಬಿಕೆಗಳಿಗೇ ಹೆಚ್ಚು ಮಹತ್ವ ನೀಡುವುದು, ನಿರ್ದಿಷ್ಟ ವ್ಯಕ್ತಿ, ಸಮುದಾಯಗಳ ಬಗ್ಗೆ ಪೂರ್ವಗ್ರಹಪೀಡಿತ, ಪಕ್ಷಪಾತೀಯವಾಗಿ ವರದಿ ಮಾಡುವುದು, ವರದಿ ಮಾಡದಿರುವುದು, ಕೆಲವು ವರದಿಗಳಿಗೆ ಹೆಚ್ಚು, ಇನ್ನು ಕೆಲವಕ್ಕೆ ತೀರಾ ಕಡಿಮೆ ಪ್ರಾಮುಖ್ಯತೆ ನೀಡುವುದು ಇವೆಲ್ಲ ನಡೆಯುತ್ತಿವೆ.

ಪ್ರಸಕ್ತವಾಗಿ ಭಾರತದ ಬಹುತೇಕ ಮಾಧ್ಯಮಗಳಲ್ಲಿ ಮೇಲ್ಮಧ್ಯಮ, ಶ್ರೀಮಂತ ವರ್ಗಗಳಿಗೆ, ರಾಜಕಾರಣಿಗಳಿಗೆ ಮತ್ತು ರೋಚಕ ಸುದ್ದಿಗಳಿಗೇ ಅತಿಯಾದ ಪ್ರಾಶಸ್ತ್ಯ. ವಿಮಾನ ಸಂಸ್ಥೆಯೊಂದರ ಮಾಲಕನೂ ಹೆಂಡದ ದೊರೆಯೂ ಆಗಿರುವ ವ್ಯಕ್ತಿ ತನ್ನ ಪೈಲೆಟ್‌ಗಳಿಗೆ ಸಂಬಳ ಪಾವತಿಸದಿದ್ದರೂ, ಸರಕಾರಕ್ಕೆ ಕೋಟಿಗಟ್ಟಲೆ ಬಾಕಿ ಇರಿಸಿದರೂ ಆತನಿಗೆ ವಿಶೇಷ ಪ್ರಚಾರ ನೀಡುವ ಮಾಧ್ಯಮಗಳೂ ನಮ್ಮಲ್ಲಿವೆ. ಸಿನಿಮಾ ತಾರೆಯರು ಹಾಗೂ ಅವರ ಒಳ, ಹೊರ ಉಡುಪುಗಳು, ಕ್ರಿಕೆಟ್ ಆಟಗಾರರು, ವಾಣಿಜ್ಯೋದ್ಯಮಿಗಳು, ರೂಪದರ್ಶಿಗಳು, ತಲ್ವಾರ್ ಕುಟುಂಬದಂತಹವರು ಅಗತ್ಯಕ್ಕಿಂತಲೂ ಹೆಚ್ಚು ಪ್ರಚಾರ ಪಡೆಯುತ್ತಾರೆ. ಅದೇ ವೇಳೆ ಕೃಷಿ ವಲಯದ ಬಿಕ್ಕಟ್ಟು, ರೈತರ ಆತ್ಮಹತ್ಯೆ, ಹೆಚ್ಚುತ್ತಿರುವ ಬಡತನ, ಅಪೌಷ್ಟಿಕತೆ, ಬಾಲಕಾರ್ಮಿಕ ಪದ್ಧತಿ, ಮಹಿಳೆಯರ ಶೋಷಣೆ, ಪ್ರತಿಭಟನೆ, ಮುಷ್ಕರ, ಧರಣಿಗಳು, ದಲಿತರ, ಅಲ್ಪಸಂಖ್ಯಾತರ, ಹಿಂದುಳಿದ ಜಾತಿಗಳ, ಬುಡಕಟ್ಟುಗಳ ಬೃಹತ್ ಸಮಸ್ಯೆಗಳು, ವಿಶೇಷ ಆರ್ಥಿಕ ವಲಯಗಳ ಹೆಸರಿನಲ್ಲಿ ಲಕ್ಷಾಂತರ ಜನರಿಗೆ ಆಗುತ್ತಿರುವ ಅನ್ಯಾಯಗಳು ಮೊದಲಾದ ವಿಷಯಗಳಿಗೆ ಸಿಗುವ ಸ್ಥಳಾವಕಾಶ ಅತ್ಯಲ್ಪ. ದೇಶಕ್ಕೆ ಸ್ವಾತಂತ್ರ್ಯ ಬಂದು ೬೫ ವರ್ಷಗಳೇ ಕಳೆದವಾದರೂ ಮಾಧ್ಯಮ ರಂಗದ ಮೇಲ್ಪದರಗಳಲ್ಲಿ ದಲಿತ ಪತ್ರಕರ್ತರು, ಸಂಪಾದಕರು ಹೆಚ್ಚುಕಮ್ಮಿ ಇಲ್ಲವೇ ಇಲ್ಲವೆನ್ನುವ ಪರಿಸ್ಥಿತಿ ಇದೆ. ಹಾಗೆಯೇ ಅನೇಕ ಮಾಧ್ಯಮಗಳ ಆಯಕಟ್ಟಿನ ಸ್ಥಾನಗಳಲ್ಲಿ ಕೋಮುವಾದಿಗಳು ತಳವೂರಿರುವುದನ್ನು ಕಾಣಬಹುದು. ಈ ಬೆಳವಣಿಗೆಗಳಿಗೂ ದಲಿತರ ಅವಗಣನೆ ಮತ್ತು ಕೋಮು ಅಸೌಹಾರ್ದತೆಯ ವಾತಾವರಣ ಮುಂದುವರಿಯುವುದಕ್ಕೂ ನೇರ ಸಂಬಂಧವಿಲ್ಲವೇ?

ಕೆಲವು ಪತ್ರಕರ್ತರು ಕೆಲವು ರಾಜಕಾರಣಿಗಳಿಂದ ನಿಯಮಿತವಾಗಿ ಹಫ್ತಾ ಪಡೆಯುತ್ತಿದ್ದ ವಿಷಯ ಈಗಾಗಲೇ ಬಯಲಾಗಿದೆ. ಕರ್ನಾಟಕದ ಪ್ರಮುಖ ಕನ್ನಡ ದಿನಪತ್ರಿಕೆಯೊಂದರ ಪ್ರಧಾನ ಸಂಪಾದಕರೇ ರಾಜಕಾರಣಿಗಳೊಂದಿಗೆ ತಾವೂ ಗ್ರಾಮ ವಾಸ್ತವ್ಯ ಹೂಡಿ ಸೈಟು ಪಡೆದುಕೊಂಡ ಅತ್ಯಸಹ್ಯಕರ ಘಟನೆಯೂ ಇಲ್ಲಿ ಆಗಿಹೋಗಿದೆ. ಮಂತ್ರಿವರ್ಯರೊಬ್ಬರ ಕಟ್ಟಡ ನಿರ್ಮಾಣ ಸಂಸ್ಥೆಯ ಕಚೇರಿಗೆ ಆದಾಯ ತೆರಿಗೆ ಇಲಾಖೆ ನಡೆಸುವ ದಾಳಿಯನ್ನು 'ಭೇಟಿ' ಎಂದು ಬರೆಯುವ ಪತ್ರಿಕೆಗಳೂ ಇವೆ. ಕುಪ್ರಸಿದ್ಧ 'ಕಾಸಿಗಾಗಿ ಸುದ್ದಿ' ಹಗರಣದ ಕುರಿತು ತಿಳಿಯದವರಾರು? ಹಾಗೆ ನೋಡಿದರೆ ರಾಜಕಾರಣಿಗಳ ಪರವಾಗಿ, ಕಾರ್ಪೊರೇಟು ಉದ್ಯಮಿಗಳ ಪರವಾಗಿ ವರದಿ ಮಾಡಲು ಗುಂಡು-ತುಂಡು ಪಾರ್ಟಿ, ಕವರ್, ಗಿಫ್ಟು, ಸೈಟು ಇತ್ಯಾದಿಗಳ ಬಳಕೆ ಸಾಪೇಕ್ಷವಾಗಿ ತುಂಬಾ ಹಳೆಯದು. ಅಧಿಕಾರಸ್ಥ ರಾಜಕಾರಣಿಗಳ ಹಿಂದೆ ಅಲೆದಾಡುತ್ತಾ ವಿವಿಧ ಸೌಲಭ್ಯಗಳನ್ನು ಗಿಟ್ಟಿಸಿಕೊಳ್ಳುವ ಇಂತಹ ಮಾಧ್ಯಮಗಳಿಗೆ ಅಂತಹ ರಾಜಕಾರಣಿಗಳ ತಪ್ಪುಗಳನ್ನು ಟೀಕಿಸುವ ನೈತಿಕತೆಯಾದರೂ ಎಲ್ಲಿದೆ? ವಾಸ್ತವ ಹೀಗಿರುವಾಗ ಸಾಮಾಜಿಕ ಜವಾಬ್ದಾರಿಯನ್ನು ಸರಿಯಾಗಿ ನಿಭಾಯಿಸದ ಅಥವಾ ಕೇವಲ ತುಟಿಸೇವೆಯಷ್ಟನ್ನೆ ಸಲ್ಲಿಸುವ ಮಾಧ್ಯಮಗಳು 'ಮಾಧ್ಯಮ ಸ್ವಾತಂತ್ರ್ಯ'ದ ಕಹಳೆ ಊದುವುದು ಎಷ್ಟರ ಮಟ್ಟಿಗೆ ಸಮರ್ಥನೀಯವೆಂಬ ಪ್ರಶ್ನೆಯಿದೆ.

**ಭಾರತೀಯ ಮಾಧ್ಯಮಗಳ ವರದಿಗಾರಿಕೆ ಮೇಲೆ ಜಾಗತೀಕರಣದ ಪ್ರಭಾವ**

ಭಾರತದಲ್ಲಿ ಇಂದು ಪತ್ರಿಕಾಧರ್ಮವನ್ನು ಪ್ರಾಮಾಣಿಕವಾಗಿ ಪಾಲಿಸುವ ಮಾಧ್ಯಮಗಳ ಸಂಖ್ಯೆ ಬೆರಳೆಣಿಕೆಗಿಳಿದಿದೆಯೆಂದರೆ ಅದು ಖಂಡಿತಾ ಅತಿಶಯೋಕ್ತಿ ಆಗಲಾರದು. ಕೆಲವೇ ದಶಕಗಳ ಹಿಂದೆ ವಿಯೆಟ್ನಾಂ, ಕ್ಯೂಬ ಮುಂತಾದ ವಿಮೋಚನಾ ಚಳುವಳಿಗಳ ಕಾಲದಲ್ಲಿ ನಮ್ಮ ಹೆಚ್ಚಿನ ಮಾಧ್ಯಮಗಳು ಆ ಹೋರಾಟಗಳ ಪರವಾಗಿದ್ದವು. ಆದರೆ ಇಂದು? ೧೯೯೦ರಲ್ಲಿ ಆರಂಭವಾದ ಜಾಗತೀಕರಣ ಪ್ರಕ್ರಿಯೆ ಎಲ್ಲ ಮೌಲ್ಯಗಳನ್ನೂ ತಲೆಕೆಳಗಾಗಿಸಿದೆ. ಪಾಶ್ಚಿಮಾತ್ಯ ಮಾಧ್ಯಮಗಳ ಅಂಧಾನುಕರಣೆ ಆಗುತ್ತಿದೆ. ಭಾರತೀಯ ಮಾಧ್ಯಮಗಳು ಇಂದು ಪ್ರಪಂಚವನ್ನು ಮತ್ತು ಇನ್ನಿತರ ವಿದ್ಯಮಾನಗಳನ್ನು ನೋಡುವುದೇ ಅಮೆರಿಕಾದ ಕಣ್ಣುಗಳ ಹಾಗೂ ಪ್ರಜ್ಞೆಯ ಮೂಲಕ ಎಂದಾಗಿಬಿಟ್ಟಿದೆ. ಇರಾಕ್, ಇರಾನ್ ಮತ್ತು ಇತ್ತೀಚಿನ 'ಅರಬ್ ಬಂಡಾಯ'ದಂತಹ ಪ್ರಕರಣಗಳ ವರದಿಗಳಲ್ಲಿ ಅಮೆರಿಕದ ಆಕ್ರಮಣಕಾರಿ ಪರಿಭಾಷೆಯ ಅನುಕರಣೆಯನ್ನು ಸ್ಪಷ್ಟವಾಗಿ ಗಮನಿಸಬಹುದು. ಹೇಗೆ ಅಮೆರಿಕದ ಏಕಪಕ್ಷೀಯ ನಿಲುವುಗಳನ್ನು ಪ್ರತಿಬಿಂಬಿಸಲಾಗುತ್ತಿದೆ ಎನ್ನುವುದಕ್ಕೆ ಮತ್ತೊಂದು ಅತ್ಯುತ್ತಮ ನಿದರ್ಶನವೆಂದರೆ 'ಭಯೋತ್ಪಾದನೆ ವಿರುದ್ಧದ ಸಮರ.'

ಮುಕ್ತ ಮಾರುಕಟ್ಟೆ ಸಿದ್ಧಾಂತದ ಮಾದರಿಯಾಗಿರುವ ಅಮೆರಿಕಾದ ಹೆಚ್ಚಿನ ಮಾಧ್ಯಮಗಳು ಕಾರ್ಪೊರೇಟುಗಳ ಹಿಡಿತದಲ್ಲಿವೆ ಮತ್ತು ಆಳುವ ರಾಜಕೀಯ ವ್ಯವಸ್ಥೆಗೆ ಪೂರಕವಾಗಿವೆ. ಅಲ್ಲಿನ ಕಾರ್ಪೊರೇಟುಗಳು ಇಂದು ಎಷ್ಟರಮಟ್ಟಿಗೆ ಬೆಳೆದುಬಿಟ್ಟಿವೆಯೆಂದರೆ ತಮಗೆ ಅನುಕೂಲಕರವಾದ ಕಾನೂನುಗಳನ್ನು ತಾವೇ ತಯಾರಿಸಿ ತಮ್ಮ ಮುಷ್ಠಿಯೊಳಗಿರುವ ಶಾಸಕರ ಮೂಲಕ ಅವುಗಳನ್ನು ಕಾಯಿದೆಗಳಾಗಿ ಮಾಡಿಸಿಕೊಳ್ಳುತ್ತವೆ. ವಾಣಿಜ್ಯೀಕರಣ ಎನ್ನುವುದು ಒಂದು ರೀತಿಯಲ್ಲಿ ಮಾಧ್ಯಮ ವಲಯಕ್ಕೆ ವ್ಯಾಪಿಸಿರುವ ಸಾಂಕ್ರಾಮಿಕ ರೋಗದಂತಿದೆ. ಅಮೆರಿಕಾದಲ್ಲಿ ಕಾರ್ಪೊರೇಟ್

ಮಾಧ್ಯಮ ಮತ್ತು ಆಳುವ ಪ್ರಭುತ್ವಗಳ ಮಧ್ಯೆ ಅದೇನು ಅನೈತಿಕ ಕೂಟ ಏರ್ಪಟ್ಟಿದೆಯೋ ಅದೇ ಪ್ರಕ್ರಿಯೆ ಭಾರತಕ್ಕೂ ಕಾಲಿರಿಸಿರುವ ಲಕ್ಷಣಗಳು ಗೋಚರಿಸುತ್ತಿವೆ. ಭಾರತದಲ್ಲಿಯೂ ಮಾಧ್ಯಮಗಳ ಮಾಲಕತ್ವ ಇಂದು ಹೆಚ್ಚು ಹೆಚ್ಚಾಗಿ ಕಾರ್ಪೊರೇಟ್‌ಗಳ ಮತ್ತು ರಾಜಕಾರಣಿಗಳ ಕೈಸೇರುತ್ತಿದೆ.

ಭಾರತದಲ್ಲಿ ಇಂದು ರಾಜಕಾರಣಿಗಳು, ದೊಡ್ಡ ದೊಡ್ಡ ಉದ್ಯಮಿಗಳು ಕೂಡ ಟಿ.ವಿ. ಚಾನಲ್ ಮಾಲಿಕರಾಗುತ್ತಿರುವುದನ್ನು ಗಮನಿಸ ಬಹುದು. ಇವುಗಳಲ್ಲಿ ಪ್ರಸಾರವಾಗುವ ಸುದ್ದಿ, ವಿಶ್ಲೇಷಣೆಗಳು ಪ್ರಾಮಾಣಿಕವಾಗಿರುತ್ತವೆ ಎಂದೂ, ಸ್ವಪ್ರಚಾರ ಮತ್ತು ಸ್ವವೈಭವೀಕರಣ ಆಗುವುದಿಲ್ಲವೆಂದೂ ಹೇಳಿದರೆ ನಂಬಬಹುದೇ ?




ಒಂದೆಡೆ ಟಿ.ವಿ. ಚಾನಲ್‌ಗಳ ಸಂಖ್ಯೆಯೇನೋ ಅಗಾಧವಾಗಿ ಬೆಳೆಯುತ್ತಿದೆ. ಆದರೆ ಗುಣಮಟ್ಟ ಮಾತ್ರ ಪಾತಾಳಕ್ಕಿಳಿಯುತ್ತಿದೆ. ಬಹುತೇಕ ಚಾನಲ್‌ಗಳ ನಿಕೃಷ್ಟ ಸ್ಥಿತಿಯನ್ನು ಕಂಡಾಗ ನಾಚಿ ತಲೆತಗ್ಗಿಸುವಂತಾಗುತ್ತದೆ. ಹೆಚ್ಚಿನ ಚಾನಲ್‌ಗಳಲ್ಲಿ ಜೋತಿಷಿಗಳು, ವಾಸ್ತುತಜ್ಞರು, ಅದೃಷ್ಟವನ್ನು ಹೇಳುವ ಕಾರ್ಯಕ್ರಮಗಳು, ಕೆಟ್ಟ ಜಾಹೀರಾತುಗಳು ಇಂತಹವುಗಳೇ ವಿಜೃಂಭಿಸುತ್ತಿವೆ. ಪೈಪೋಟಿಯ ಭಯವೇ ಇದಕ್ಕೊಂದು ಕಾರಣ ಎನ್ನಲಾಗುತ್ತಿದೆ. ವಾಣಿಜ್ಯೋದ್ಯಮದಂತಾಗಿರುವ ಮಾಧ್ಯಮರಂಗದಲ್ಲಿ ಪೈಪೋಟಿಯೂ ಸ್ವಾಭಾವಿಕವಲ್ಲವೆ ? ಇಂದು 'ಸುದ್ದಿಯೊಂದಿಗೆ ಮನರಂಜನೆ' ಎಂಬ ಹೆಸರಿನಲ್ಲಿ, ಅದು ಜನತೆಯ ಆಯ್ಕೆ ಎನ್ನುತ್ತಲೇ, ಅಶ್ಲೀಲತೆಯನ್ನು ಬಿತ್ತರಿಸಲಾಗುತ್ತಿದೆ. ಚಾನೆಲ್ ಮಾಲಿಕನೊಬ್ಬನ ಪ್ರಕಾರ ಇಂದಿನ ವೀಕ್ಷಕರು ಉತ್ತೇಜಕ ಸುದ್ದಿಗಳನ್ನು ಇಷ್ಟಪಡುವುದರಿಂದಲೇ ಬಹಳಷ್ಟು ಸಿನಿಮಾ, ಕ್ರಿಕೆಟ್ ಮತ್ತು ಕ್ರೈಮ್ ದೃಶ್ಯಗಳನ್ನು ತೋರಿಸಲಾಗುತ್ತದೆಯಂತೆ. ಇದೊಂದು ಅಸಮರ್ಥನೀಯ ಹೇಳಿಕೆ. ಅಶ್ಲೀಲತೆ ಮತ್ತು ಮನರಂಜನೆ ನಡುವೆ ವ್ಯತ್ಯಾಸ ಇರುವ ಹಾಗೆ ಮನರಂಜನೆ ಮತ್ತು ಸುದ್ದಿಗಳ ನಡುವೆಯೂ ವ್ಯತ್ಯಾಸವಿದೆ. ಆದರೆ ಹೆಚ್ಚಿನ ಖಾಸಗಿ ಚಾನಲ್‌ಗಳು ಅಶ್ಲೀಲತೆ, ಮನರಂಜನೆ ಮತ್ತು ಸುದ್ದಿಗಳ ನಡುವಿನ ಗಡಿಯನ್ನು ಮೀರಿ ವರ್ತಿಸುತ್ತಿರುವುದು ಸಾಮಾನ್ಯ. ಪ್ರಜಾತಂತ್ರದ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸುವ ಚಾನಲ್‌ಗಳು ಇಂತಹ ಋಣಾತ್ಮಕ ಚಟುವಟಿಕೆಗಳನ್ನು ಹೆಚ್ಚು ಸಮಯ ಮುಂದುವರಿಸುವುದು ಆತ್ಮಹತ್ಯಾಕಾರಕ.

**ಹಿರಿಯರ ಕಿವಿಮಾತು**

ಪತ್ರಿಕಾ ಧರ್ಮ ಮತ್ತು ಪತ್ರಿಕಾ ಸ್ವಾತಂತ್ರ್ಯಗಳ ಬಗ್ಗೆ ಸರ್ ಹೆರಾಲ್ಡ್ ಈವನ್ಸ್ ಹೇಳಿರುವ ಕೆಲವು ಮಾತುಗಳು ಮನನೀಯವಾಗಿವೆ: (ಇವರು 'ಟೈಮ್ಸ್', 'ಸಂಡೇ ಟೈಮ್ಸ್ ಲಂಡನ್' ಪತ್ರಿಕೆಗಳ ಮಾಜಿ ಸಂಪಾದಕರು) 'ಇಂದು ಕಾರ್ಪೊರೇಟ್ ಮಾಲಕರಿಂದಲೂ ನಿರ್ಬಂಧಗಳಿವೆ... ಈಗ ಜಾಹೀರಾತುಗಳದ್ದೇ ಕಾರುಬಾರು... ಹಿಂಸೆಯ ಯುಗದಲ್ಲಿ ಸ್ವತಂತ್ರ ಹಾಗೂ ಜವಾಬ್ದಾರಿಯುತ ಪತ್ರಿಕೆಗಳ ಪಾತ್ರವೇನೆಂದು ಅರಿಯಬೇಕಾದರೆ ಪತ್ರಿಕಾ ಸ್ವಾತಂತ್ರ್ಯದ ಬಗ್ಗೆ ಮತ್ತು ಹಿಂಸೆಯ ಸ್ವಭಾವ ಹಾಗೂ ಮೂಲಗಳ ಬಗ್ಗೆ ಅರಿತುಕೊಳ್ಳಬೇಕಾಗುತ್ತದೆ... ಸತ್ಯವನ್ನು ಒಂದೇ ಬಾರಿ ಮುದ್ರಿಸಿದರೆ ಸಾಲದು... ಸತ್ಯಕ್ಕಾಗಿ ಇಂದು ಹೆಚ್ಚಿನ ಬೆಲೆಯನ್ನು ತೆರಬೇಕಾಗುತ್ತದೆ... ದೇಶಭಕ್ತಿಯ ಕುರುಹು ಎಂಬ ಖೆಡ್ಡಾದ ಕುರಿತು ಎಚ್ಚರಿಕೆಯಿಂದಿರಬೇಕು... ಪತ್ರಿಕಾವೃತ್ತಿಯ ಉದ್ದೇಶಗಳನ್ನು ಪದೇಪದೇ ನೆನಪಿಸಿಕೊಳ್ಳಬೇಕು... ಸತ್ಯವನ್ನು ತಿರುಚುವುದು, ಪೂರ್ವಗ್ರಹಕ್ಕೆ ಒಳಗಾಗಿ ವರದಿ ಬರೆಯುವುದು, ಪಂಗಡ ಪಂಗಡಗಳ ನಡುವೆ ದ್ವೇಷವನ್ನು ಕೆರಳಿಸುವುದು, ಖಾಸಗಿ ದುಃಖದ ದುರ್ಬಳಕೆ ಮುಂತಾದುವನ್ನು ಮಾಡುತ್ತಿದ್ದರೆ ಪತ್ರಿಕೆಗಳು ಸ್ವಾತಂತ್ರ್ಯಕ್ಕೆ ಅರ್ಹವಲ್ಲ...'

**ಸುರೇಶ ಭಟ್ ಬಾಕ್ರಬೈಲು**
'ಈಶಾವಾಸ್ಯಂ', ೨-೧೦-೭೭೬, ಬಿಜೈ, ಮಂಗಳೂರು - ೫೭೫ ೦೦೪

---

*(೫೯ನೇ ಪುಟದಿಂದ....)*

ಪ್ರಯೋಗಗಳನ್ನು ಆರೋಗ್ಯವಂತ ವ್ಯಕ್ತಿಗಳು ಮತ್ತು ರೋಗಪೀಡಿತ ವ್ಯಕ್ತಿಗಳು – ಇಬ್ಬರ ಮೇಲೆಯೂ ನಡೆಸುವುದು ಅಗತ್ಯ. ಹಾಗಿರುವಾಗ, ರೋಗಪೀಡಿತ ವ್ಯಕ್ತಿಗಳ ಪರಿಹಾರವನ್ನು ಕಡಿಮೆ ಮಾಡುವುದು ಅನ್ಯಾಯ. ಬಲಿವ್ಯಕ್ತಿಗಿದ್ದ ರೋಗದಿಂದಾಗಿ ಅಲ್ಲ, ಬದಲಾಗಿ ಪ್ರಯೋಗದಲ್ಲಿ ನೀಡಲಾಗಿದ್ದ ಔಷಧಿಯಿಂದಾಗಿಯೇ ವ್ಯಕ್ತಿ ಸತ್ತುಹೋದರೆ ? ಎಂಬ ಪ್ರಶ್ನೆಯನ್ನು ಈ ಬಗ್ಗೆ ಎತ್ತಿದ್ದಾರೆ 'ಇಂಡಿಯನ್ ಜರ್ನಲ್ ಆಫ್ ಮೆಡಿಕಲ್ ಎಥಿಕ್ಸ್' ಎಂಬ ವೈಜ್ಞಾನಿಕ ನಿಯತಕಾಲಿಕದ ಸ್ಥಾಪಕರಾದ ಅಮರ್ ಜೆಸಾನಿ.

ಅದಲ್ಲದೆ, ಗುಣಾಂಶ '೩' ಮೌಲ್ಯ ನಿರ್ಧರಿಸುವ ಜವಾಬ್ದಾರಿಯನ್ನು ಔಷಧಿ ಪ್ರಯೋಗ ಜರುಗಿಸುವ ಪ್ರಧಾನ ತನಿಖಾಧಿಕಾರಿಗೆ ನೀಡಲಾಗಿದೆ. ಔಷಧಿ ಉತ್ಪಾದಕ ಕಂಪೆನಿಗಳ ಕಣ್ಗಾವಲಿನಲ್ಲಿ ಕೆಲಸ ಮಾಡುವ ಈ ಪ್ರಧಾನ ತನಿಖಾಧಿಕಾರಿಗಳು, ಬಲಿವ್ಯಕ್ತಿಗಳಿಗೆ ಪಾವತಿಸಬೇಕಾದ ಪರಿಹಾರವನ್ನು ಕನಿಷ್ಠ ಮಾಡಲಿಕ್ಕಾಗಿ 'ಎಫ್' ಗುಣಾಂಶವನ್ನು ತಗ್ಗಿಸಬಹುದು.

ಗುಣಾಂಶ '೪'ರ ಪ್ರಕಾರ, ಔಷಧಿ ಪ್ರಯೋಗದಲ್ಲಿ ಭಾಗವಹಿಸಿದ ವ್ಯಕ್ತಿಗೆ ದೈಹಿಕ ಹಾನಿ ಉಂಟಾದರೆ ಪಾವತಿಸಬೇಕಾದ ಪರಿಹಾರ ಇನ್ನಷ್ಟು ಕಡಿಮೆಯಾಗುತ್ತದೆ. ಶೇಕಡ ಎಷ್ಟು ಅಂಗವೈಕಲ್ಯ ಆಗಿದೆ ಎಂಬುದರ ನಿರ್ಧಾರವಾಗುವುದೂ ಕೆಲಸಗಾರರ ಪರಿಹಾರ ಕಾಯಿದೆ, ೧೯೨೩ರ ಅನುಸಾರ. ಇದೂ ಸರಿಯಲ್ಲ, ಯಾಕೆಂದರೆ, ಒಂದು ಉದ್ಯೋಗದಲ್ಲಿ ನಡೆದ ಅಪಘಾತದಿಂದಾದ ಅಂಗವೈಕಲ್ಯವನ್ನು ಔಷಧಿ ಪ್ರಯೋಗದಿಂದಾದ ಅಂಗವೈಕಲ್ಯದ ಜೊತೆ ಸಮೀಕರಿಸುವುದು ಅನ್ಯಾಯ.

**ತೋಳ ಕುರಿ ಕಾಯುವಂತೆ...:** ಅಂತಿಮ ಪರಿಹಾರ ಮೊತ್ತವನ್ನು ನಿರ್ಧರಿಸುವ ಅಧಿಕಾರವನ್ನು 'ನೀತಿ ಸಮಿತಿ' (ಎಥಿಕ್ಸ್ ಕಮಿಟಿ)ಗೆ ನೀಡಲಾಗಿದೆ. ಈ ಸಮಿತಿಯಲ್ಲಿ ಭಾರೀ ಭ್ರಷ್ಟಾಚಾರ ನಡೆದಿರುವ ಬಗ್ಗೆ ಹಲವು ಆಪಾದನೆಗಳಿವೆ. ನೀತಿ ಸಮಿತಿಯ ಸದಸ್ಯರು ಬೇರೆ ಔಷಧಿ ಪ್ರಯೋಗಗಳಲ್ಲಿ ತನಿಖಾಧಿಕಾರಿಗಳು ಆಗಿರುತ್ತಾರೆ; ಈ ಕಾರಣದಿಂದಾಗಿ, ಅವರು ಔಷಧಿ ಉತ್ಪಾದಕ ಕಂಪೆನಿಗಳನ್ನು ರಕ್ಷಿಸಲು ಮುಂದಾಗಬಹುದು.

ಇವೆಲ್ಲ ಕೇಂದ್ರ ಔಷಧಿ ಗುಣಮಟ್ಟ ನಿಯಂತ್ರಣ ಸಂಸ್ಥೆಯು, ಔಷಧಿ ಪ್ರಯೋಗಗಳ ಬಲಿವ್ಯಕ್ತಿಗಳಿಗೆ ಪರಿಹಾರ ಪಾವತಿಸಲು ರೂಪಿಸಿರುವ ಸೂತ್ರದ ಪ್ರಧಾನ ಅಂಶಗಳು. ಒಟ್ಟಾರೆಯಾಗಿ, ಇವೆಲ್ಲವೂ ಬಲಿವ್ಯಕ್ತಿಗಳಿಗಿಂತ ಜಾಸ್ತಿಯಾಗಿ ಔಷಧಿ ಉತ್ಪಾದಕ ಕಂಪೆನಿಗಳಿಗೆ ಅನುಕೂಲವಾಗಿರುವಂತೆ ಕಾಣುತ್ತಿದೆ.

ಭಾರತದಲ್ಲಿ ೨೦೦೭ರಿಂದ ಜೂನ್, ೨೦೧೨ರ ತನಕ ಔಷಧಿ ಪ್ರಯೋಗಗಳಲ್ಲಿ ಜೀವ ಕಳೆದುಕೊಂಡ ಬಲಿವ್ಯಕ್ತಿಗಳ ಸಂಖ್ಯೆ ೨,೩೭೦. ಇವರಲ್ಲಿ ಕೇವಲ ೩೭ ಬಲಿವ್ಯಕ್ತಿಗಳ ವಾರಸುದಾರರಿಗೆ ಪರಿಹಾರವನ್ನು ಪಾವತಿಸಲಾಗಿದೆ. ಆ ಪರಿಹಾರ ಮೊತ್ತದ ಸರಾಸರಿ ರೂ. ೨.೨೧ ಲಕ್ಷ! ಯಾವುದೇ ಹೊಸ ಔಷಧಿ ಪರಿಣಾಮಕಾರಿಯಾದರೆ, ಔಷಧಿ ಉತ್ಪಾದಕ ಕಂಪೆನಿಗಳು ಗಳಿಸುವ ಕೋಟಿಗಟ್ಟಲೆ ರೂಪಾಯಿ ಲಾಭಕ್ಕೆ ಹೋಲಿಸಿದಾಗ ಇದು ಕಿಂಚಿತ್ ಹಣ.

ಔಷಧಿ ಪ್ರಯೋಗಗಳಲ್ಲಿ ಸತ್ತವರ ಸಂಖ್ಯೆ ೨೦೧೦ರಲ್ಲಿ ೬೬೮ ಮತ್ತು ೨೦೧೧ರಲ್ಲಿ ೪೩೮. ಆದರೆ ಆ ೬೬೮ ಸಾವುಗಳಲ್ಲಿ ಕೇವಲ ೨೨ ಬಲಿವ್ಯಕ್ತಿಗಳ ಸಾವಿಗೆ ಔಷಧಿ ಪ್ರಯೋಗಗಳು ಕಾರಣ ಎಂದು ನಿರ್ಧರಿಸಲಾಯಿತು. ಯಾಕೆಂದರೆ, ಬಲಿವ್ಯಕ್ತಿಗಳ ಸಾವಿಗೆ 'ಅವರಿಗಿದ್ದ ರೋಗಗಳು ಕ್ರಮೇಣ ಉಲ್ಬಣಿಸಿದ್ದೇ ಕಾರಣ ವಿನಃ ಪ್ರಯೋಗಕ್ಕಾಗಿ ನೀಡಿದ ಔಷಧಿ ಅಲ್ಲ' ಎಂದು ಔಷಧಿ ಉತ್ಪಾದಕ ಕಂಪೆನಿಗಳು ವಾದಿಸಿ, ಬಲಿವ್ಯಕ್ತಿಗಳ ವಾರಸುದಾರರಿಗೆ ಪರಿಹಾರ ಪಾವತಿಸಬೇಕಾದ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತವೆ.

ಭಾರತವು ಜಾಗತಿಕ ಮಟ್ಟದಲ್ಲಿ ಮನುಷ್ಯನ ಮೇಲೆ ನಡೆಸುವ ಔಷಧಿಗಳ ಬಹುದೊಡ್ಡ ಪ್ರಯೋಗಶಾಲೆಯಾಗಿ ಬೆಳೆಯುತ್ತಿದೆ. ಇಂತಹ ಔಷಧಿ ಪ್ರಯೋಗಗಳನ್ನು ನಡೆಸುವ ವಹಿವಾಟು ೩೦೦ ಮಿಲಿಯ ಡಾಲರುಗಳು. ಈ ವಹಿವಾಟಿನ ವಾರ್ಷಿಕ ಬೆಳವಣಿಗೆಯ ದರ ಶೇಕಡ ೩೦. ಆದ್ದರಿಂದ, ಬಲಿವ್ಯಕ್ತಿಗಳಿಗೆ ಪಾವತಿಸಬೇಕಾದ ಪರಿಹಾರದ ಮೊತ್ತ ನಿರ್ಧರಿಸುವ ಸೂತ್ರವನ್ನು ಹಾಗೂ ಮಾರ್ಗದರ್ಶಿ ನಿಯಮಗಳನ್ನು ಬದಲಾಯಿಸಲೇಬೇಕಾಗಿದೆ.

**ಅಡ್ಡೂರು ಕೃಷ್ಣರಾವ್**
'ಸುಮ', ೫ನೇ ಕ್ರಾಸ್, ಬಿಜೈ ಹೊಸ ರಸ್ತೆ, ಮಂಗಳೂರು - ೫೭೫ ೦೦೪

**ಜ್ಯೋ**ತಿಷವನ್ನು ಆಧುನಿಕ ವಿಜ್ಞಾನವೆಂದು ನಂಬಿಸಲು ಹಠ ತೊಟ್ಟಂತಿರುವುದು; ಮೌಢ್ಯಾಚರಣೆಯನ್ನು 'ಸಂಸ್ಕಾರ' ಎಂದೇ ಬಾಯಿ ಬಡಿಯುತ್ತಿರುವುದು ನಮ್ಮ ಕಾಲದ ಅತ್ಯಂತ ನೀಚ ಪ್ರವೃತ್ತಿಯಾಗಿದೆ. ಜ್ಯೋತಿಷ, ನಾಗರಿಕತೆಯ ಆರಂಭ ಕಾಲದ ಭಾರತೀಯರ ಕ್ಯಾಲೆಂಡರು, ಸೂರ್ಯ-ಚಂದ್ರರ ಚಲನೆಯನ್ನು ಆಧರಿಸಿದ ಒಂದು ಶಾಸ್ತ್ರವಾಗಿತ್ತಷ್ಟೆ. ಕಾಲಕ್ರಮೇಣ ಅದಕ್ಕೆ ಪಂಚಾಂಗದ ಬಣ್ಣದ ಬಟ್ಟೆ ಸುತ್ತಿ; ಇಲ್ಲಸಲ್ಲದ ಹೂರಣ ತುಂಬಿ, ಇಂಥ ವೈಜ್ಞಾನಿಕ ಯುಗದಲ್ಲೂ ಮುಗ್ಧ/ದುರ್ಬಲ ಮನಸ್ಸಿಗರಿಗೆ 'ನಿನ್ನ ಹುಟ್ಟಿದ ನಕ್ಷತ್ರ ಸರಿಯಿಲ್ಲ, ನಿನ್ನ ಗ್ರಹಗತಿ ನೆಟ್ಟಗಿಲ್ಲ, ನಿನ್ನ ಜನ್ಮಕುಂಡಲಿ ತೆಗೆದುಕೊಂಡು ಬಾ' ಎಂಬಂಥ ಅವ್ಯಕ್ತ ಭೀತಿ ಹುಟ್ಟಿಸುವ ಮೂಲಕ, ಇದು ಕೆಲವೇ ಕೆಲವು ಚಾಣಾಕ್ಷರ ಹೊಟ್ಟೆ ಹೊರೆದುಕೊಳ್ಳುವದಕ್ಕೆ ದಾರಿಯಾದ 'ಉಪ-ಜೀವನ' ಆಗಿದ್ದು ನಾಚಿಕೆಗೇಡಿನ ಸಂಗತಿ.

ಅತ್ಯಂತ ಸರಳೀಕರಿಸಿದಂತೆ, ಇದನ್ನೇ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದಾದರೆ-ಮನುಷ್ಯ ತನ್ನ ಕರ್ತೃತ್ವ ಶಕ್ತಿಯ ಮೇಲೆ ತನಗೇ ನಂಬಿಕೆಯಿಲ್ಲದೆ ಹೋದಾಗ ಅಂಥ ಹುಸಿ ಸಮಾಧಾನಗಳಿಗೆ ಮೊರೆಹೋಗುತ್ತಾನೆ. ಅಚ್ಚರಿಯೆಂದರೆ, ಪ್ರಪಂಚದಲ್ಲಿ ಇದುವರೆಗೆ ಘಟಿಸಿದ ಅನಾಹುತಗಳನ್ನು ತುಸು ಮುಂಚೆಯೇ ಕರಾರುವಾಕ್ಕಾಗಿ ಹೇಳುವ ಮೂಲಕ ಆದ ಅವಘಡ ತಪ್ಪಿಸಿದ ಒಂದೇ ಒಂದು ನಿದರ್ಶನ ಇಲ್ಲವಾಗಿದೆ. ಆದರೂ ಇದು ಬೇರಿಲ್ಲದ ಬಂದಳಿಕೆಯಂತೆ ದುರ್ಬಲ ಮನಸ್ಸಿಗರಲ್ಲಿ ಹರಡಿ ನಳನಳಿಸುತ್ತದೆ. ಅದನ್ನು ಹಾಗೆ ಹಸಿರಾಗಿಡುವುದರ ಹಿಂದೆ ಕೆಲವೇ ಕೆಲವರ ಹುನ್ನಾರವಿದೆ.



ಭವಿಷ್ಯ ನುಡಿಯುವವರ ಬಂಡವಾಳವೆಂದರೆ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಗಳುಪುವುದು. ಒಂದು ರೀತಿಯಲ್ಲಿ ಮಂಗಳಮುಖಿಯರಂತೆ ಹಾಗೂ ಸೈ ಹೀಗೂ ಸೈ! ಎರಡೂ ರೀತಿಯ ಆಚರಣೆಗೂ ಅವಕಾಶವಿರುತ್ತದೆ ಅಲ್ಲಿ. ಆಗುವ ಅನಾಹುತ ಆಗಿ ಮುಗಿದ ಮೇಲೆ 'ನಾನು ಮೊದಲೇ ಹೇಳಿದ್ದೆನಲ್ಲ' ಎಂದು ಆಗ ಎದ್ದು ಕುಳಿತುಕೊಳ್ಳುವುದು. ಇದೇ ಇವರ ಕರಾಮತ್ತು/ಕಮಾಯಿ.

ಎಚ್ಚೆನ್ ಯಾವಾಗಲೂ ಹೇಳುತ್ತಿದ್ದ ಮಾತು- ಭವಿಷ್ಯವಾಣಿ ಎನ್ನುವುದು ಯಾವಾಗಲೂ ನಿಂತ ಗಡಿಯಾರದಂತೆ. ದಿನಕ್ಕೆ ಎರಡು ಎರಡು ಬಾರಿ ಸಮಯ ತೋರಿಸುತ್ತದೆ. ನಿಜ, ಅದರಿಂದ ಯಾರಿಗೇನು ಪ್ರಯೋಜನ? ಪ್ರಯೋಗಾಲಯದಲ್ಲಿ ಪ್ರನಾಳ ಅಲ್ಲಾಡಿಸಿದ ಕೈ ಮನೆಯಲ್ಲಿ ಗಂಟೆ ಅಲ್ಲಾಡಿಸುತ್ತದೆ. ಕಾಲೇಜಿನಲ್ಲಿ ಓದಿದ ವಿಜ್ಞಾನ ಮನೆಯಲ್ಲಿ ರಜಾ ಹಾಕುತ್ತದೆ. ಇದೆಂಥಾ ವಿರೋಧಾಭಾಸ! ವಿದ್ಯಾಭ್ಯಾಸ ನಮ್ಮನ್ನು ವಿಚಾರವಂತರನ್ನಾಗಿ, ವಿವೇಕವಂತರನ್ನಾಗಿ ರೂಪಿಸುವಲ್ಲಿ ಹಿಂದೆ ಬಿದ್ದಿದೆ ಎಂದೇ ಹೇಳಬೇಕು.

ಹಿಂದೆ ಎಲ್ಲೊ ಓದಿದ್ದ ಪ್ರಸಂಗವೊಂದು ನೆನಪಾಗುತ್ತದೆ. ಪಟ್ಟಣದ ಹುಡುಗಿಯನ್ನು ಮದುವೆಯಾಗಿದ್ದ ಡಾಕ್ಟರನೊಬ್ಬ ಹೊಸತರಲ್ಲಿ ಹುಡುಗಿಯನ್ನು ತನ್ನ ಹಳ್ಳಿಗೆ ಕರದೊಯ್ದಿದ್ದ. ಒಲ್ಲದ ಮನಸ್ಸಿನಿಂದಲೇ ಊರಿಗೆ ಬಂದಿದ್ದ ಆಕೆ ಯಾವಾಗಲೂ ತಲೆನೋವೆಂದು ಹೇಳುತ್ತಿದ್ದಳು. ಆಕೆಯನ್ನು ಒಂದಿಷ್ಟು ಖುಷಿಪಡಿಸಲು ಮೊದಲ ಆಟಕ್ಕೆ ತನ್ನೂರಿನ ಸಿನಿಮಾ ಟೆಂಟಿಗೆ ಕರೆದೊಯ್ದ. ಸಿನಿಮಾ ಆರಂಭವಾದ ಸ್ವಲ್ಪ ಹೊತ್ತಿಗೆಲ್ಲ, ಆಕೆ ಮತ್ತೆ ತಲೆನೋವೆಂದು ಅಲವತ್ತುಕೊಂಡಳು. ವೈದ್ಯಮಿತ್ರ ಯೋಚಿಸಿದ. ಕತ್ತಲೆಯಲ್ಲಿಯೇ ಕೋಟಿನ ಜೋಬಿಗೆ ಕೈಹಾಕಿ ತಡಕಾಡಿ ಮಾತ್ರೆಯೊಂದನ್ನು ತೆಗೆದು ಹೆಂಡತಿಯ ಕೈಗಿಕ್ಕಿ, ''ಇದನ್ನು ನುಂಗಬೇಡ, ಸಿನಿಮಾ ಬಿಡುವವರೆಗೂ ಸುಮ್ಮನೆ ಸೀಪುತ್ತಿರು'' ಎಂದು ಪಿಸು ನುಡಿದ. ಸಿನಿಮಾ ಮುಗಿಯುವವರೆಗೂ ಆಕೆ ತಲೆನೋವಿನ ಸೊಲ್ಲೆತ್ತಲಿಲ್ಲ.

ಇನ್ನೇನು ತೆರೆಯ ಮೇಲೆ 'ಶುಭಂ' ಮೂಡಬೇಕೆನ್ನುವ ಹೊತ್ತಿಗೆ ಅವಸರವಾಗಿ ಆಕೆಯ ಬಾಯಲ್ಲಿದ್ದ ಮಾತ್ರೆ ವಾಪಸ್ಸು ಪಡೆದು ಕೋಟಿನ ಜೋಬಿಗಿಳಿಸಿದ್ದ. ಮನೆಗೆ ಹಿಂದಿರುಗಿದ ಮೇಲೆ, ''ನಿನ್ನ ತಲೆನೋವು ಶಮನ ಮಾಡಿದ ಮಾತ್ರೆ ಇಕೋ ಇಲ್ಲಿದೆ'' ಎಂದು ಹೇಳುತ್ತ ಕೋಟಿನ ಜೋಬಿನಿಂದ ತೆಗೆದು ಆಕೆಯ ಕೈಗೆ ಇತ್ತ. ಅದು ಬೆಳಗ್ಗೆ ಆಕೆ ಕಂಡಿದ್ದ ಆತನ ತೋಳಿನ ನೇತಾಡುತ್ತಿದ್ದ ಕೋಟಿನ ಗುಂಡಿಯೇ ಆಗಿತ್ತು. ಇದು, ಸಮಯಕ್ಕೊಂದು ಹುಸಿ (ಬಿಳಿ) ಸುಳ್ಳು-ಪರಿಹಾರವಾಗುವುದಾದರೆ; ಹುಸಿ ಸಮಾಧಾನ ನೀಡುವುದಾದರೆ ಅದರಿಂದ ಬೇರೇನೂ ಡ್ಯಾಮೇಜು ಆಗುವುದಿಲ್ಲ. ಆದರೆ, ಅದೇ ಒಂದು ದಂಧೆಯಾಗಬಾರದು.

ಮೌಢ್ಯಾಧಾರಿತ ರಾಜಕಾರಣದ ಜಾಗದಲ್ಲಿ ಈಗ ಮೌಢ್ಯಾಧಾರಿತ ರಾಜಕಾರಣ ಮೆರೆಯುತ್ತಿದೆ. ತಮ್ಮೊಳಗಿನ ಆತ್ಮಸಾಕ್ಷಿಯನ್ನು ಒತ್ತೆ ಹಾಕಿದಂತೆ, ಪದೇ ಪದೇ ನೂರೆಂಟು ಗುಡಿಗುಂಡಾರಗಳನ್ನು ಹುಡುಕಿಕೊಂಡು ಓಡುವ, ಮಠ-ಧರ್ಮ- ಪೀಠಾಧಿಪತಿಗಳ ಬಳಿ ಬಳ್ಳಿಗುರುಡರಂತೆ ಹೋಗಿ ಕಾಲಿಗೆರಗುವ ಆ ಮನೋಭಾವ ಇದೆಯಲ್ಲ, ಅದು ಒಂದು ರೀತಿಯ ದುರ್ಬಲ ಮನಸ್ಸಿನ ಗೀಳಿನ ರೋಗವೆಂದು ಮನೋವಿಜ್ಞಾನ ಹೇಳುತ್ತದೆ.

ಹಣೆಯ ಮೇಲೆ ಸದಾ ಕುಂಕುಮವಿಟ್ಟುಕೊಂಡೇ ಹೊರಬೀಳುವ, ರಸ್ತೆಯುದ್ದಕ್ಕೂ ಕಣ್ಣಿಗೆ ಬಿದ್ದ ಕಲ್ಲು ದೇವರಿಗೆಲ್ಲ ನಮಸ್ಕರಿಸುತ್ತ ತೆರಳುವ ಗಂಡಸರನ್ನು ಕಂಡರೆ ನನಗೆ ನಿಲ್ಲಲೂ ಸಾಧ್ಯವಾಗದ ಕುಡುಕರನ್ನು ಕಂಡಂತಾಗುತ್ತದೆ. ಅಂಥವರು ಯಾವುದೊ ಸಿಕ್ ಇಂಡಸ್ಟ್ರೀ ಮಾಲೀಕರಂತೆ ತೋರುತ್ತಾರೆ. ಇಂಥವರ ದಂಡು ಇನ್ನು ಗರ್ಭಗುಡಿಯ ಬಾಗಿಲಲ್ಲಿ ಹೋಗಿ ಅದೇ ದೈನ್ಯತೆಯಲ್ಲಿ ತಲೆಬಾಗಿ ನಿಂತಾಗ, ಅದಕ್ಕಾಗೇ ಕಾದಿದ್ದವರಂತೆ ಅರ್ಚಕರು (ಪಂಡಿತರು?) 'ಪ್ರಸಾದ' ಎಂದು ಹೇಳುತ್ತ ಇವರ ಕಿವಿಗೆ ಹೂವೇರಿಸಿಯೇ ಕಳಿಸುತ್ತಾರೆ ಅರ್ಚಕರು ಅಪ್ಪಣೆ ಮಾಡಿದುದನ್ನು ಶಿರಸಾವಹಿಸಿ ಪಾಲಿಸುವ ಆಶ್ವಾಸನೆ ನೀಡಿ, ಯಥೇಷ್ಟ ದುಡ್ಡು ಪೀಕಿ, ಕೃತಾರ್ಥರಾದೆವೆಂದು ಬೀಗುತ್ತಲೇ ಇವು ಮರಳುತ್ತವೆ.

ಇಂಥ ನಡವಳಿಕೆಯನ್ನು ಮುಗ್ಧ-ಸಾಮಾನ್ಯ ಜನ ತಿಳಿಯದೆ ಮಾಡುತ್ತಾರೆಂದರೆ ಉಪೇಕ್ಷಿಸಬಹುದು. ಅದೇ ನಮ್ಮ ಜನನಾಯಕರು, ಸಾಮಾಜಿಕ ಜವಾಬ್ದಾರಿ ಹೊತ್ತ ಅಧಿಕಾರಸ್ಥರು ಮಾಡಿದರಾದರೆ, ಅದರಿಂದ ಸಾಮಾನ್ಯ ಜನವರ್ಗಕ್ಕೆ ತಪ್ಪು ಸಂದೇಶ ರವಾನೆಯಾಗುತ್ತದೆ. ಯಾಕೆಂದರೆ ಮರವೇರಿದ ಮಂಗನ ಕುಂಡಿ ಕೆಳಗೆ ನಿಂತು ನೋಡುವವರಿಗೆಲ್ಲ ಕಾಣಿಸುತ್ತಿರುತ್ತದೆ. ಅದಕ್ಕಾಗೆ ಕ್ಯಾಮರಾ ಹಿಡಿದು ಕಾದಿರುವ ಟಿ.ವಿ. ಚಾನಲುಗಳು ಇಪ್ಪತ್ನಾಲ್ಕೂ ತಾಸು ಎಚ್ಚರವಾಗಿರುತ್ತವೆ ಈಗ!

ಅತ್ಯಂತ ಪರಿಣಾಮಕಾರಿಯಾದ ದೃಶ್ಯ ಮಾಧ್ಯಮದ ಚಾನೆಲುಗಳಿಗೆ ಇಂದು ತಮ್ಮ ವೃತ್ತಿಪರತೆಗೆ ಇರುವ ಆ ನೀತಿ ಸಂಹಿತೆಯನ್ನು ಮರೆಯದಂತೆ ನಡೆದುಕೊಳ್ಳ ಬೇಕಾದ ಸಾಮಾಜಿಕ ಜವಾಬ್ದಾರಿಯಿದೆ, ಜರೂರಿಯಿದೆ. ಅದನ್ನು ಬಿಟ್ಟು ಅನಾರೋಗ್ಯಕರ ಪೈಪೋಟಿಗಿಳಿದಂತೆ, ಅವೈಜ್ಞಾನಿಕ ಸಂಗತಿಗಳಿಗೆ ಇಂಬುಗೊಟ್ಟಂತೆ, ಎಲುಬಿಲ್ಲದ ನಾಲಿಗೆಯನ್ನು ಹೇಗೆ ಬೇಕಾದರೂ ಹೊರಳಿಸಬಲ್ಲ ಮೌಢ್ಯತೆಯ ಪ್ರಸಾರದಲ್ಲಿ ಮುಗಿಬಿದ್ದ ಜಗಭಂಡರನ್ನು ಕರೆದು ಮಣೆ ಹಾಕುವುದು ತರವೆ? ಹಿಂದೆ ನನ್ನ ಜಿಲ್ಲೆಯಲ್ಲಿ ಮಿದುಳು ಜ್ವರ ಹರಡುವ ಹಂದಿಗಳನ್ನು ಗುಂಡಿಟ್ಟು ಕೊಲ್ಲುವಂತೆ ಜಿಲ್ಲಾಧಿಕಾರಿ ಆದೇಶ ಹೊರಡಿಸಿದ್ದರು!

# ಮಿದುಳು ಜ್ವರ ಹರಡುವ ಮಂದಿ!

**ಈರಪ್ಪ ಎಂ. ಕಂಬಳಿ**
ನಂ. ೩-೨೦, ಜೆ. ಬಿ. ನಗರ,
ಬೆಂಗಳೂರು - ೫೬೦ ೦೭೫



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

